# ಕಸ್ತೂರಿ

## ಕನ್ನಡ ಡೈಜೆಸ್ಟ್


ವ್ಯವಸ್ಥಾಪಕ ಸಂಪಾದಕ :
ಆರ್. ಜೆ. ದೇಸಾಯಿ

**

ಸಹಸಂಪಾದಕ :
ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :
ಸಮಾಲೋಚನೆ

**

ಛಾಯಾಚಿತ್ರ :
ಕೆ. ಪಿ. ಎಸ್. ಕುಮಾರ್

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

**KASTURI, January 1986**


# ಬೆಳಕಿಂಡಿ

ಚಿಂತೆ ಮಾಡುವುದಕ್ಕೇನೂ ಇಲ್ಲದಿದ್ದಾಗ ನಾನು ಅದನ್ನು ಕುರಿತೇ ಚಿಂತೆ ಮಾಡಲಾರಂಭಿಸುತ್ತೇನೆ. —ಡಬ್ಲ್ಯು. ಕೆ.

*

ವಿಪತ್ಕಾಲವೆಂಬುದೊಂದು ತಾತ್ವಿಕ ಪರೀಕ್ಷೆ. ಅದಿಲ್ಲದಿದ್ದರೆ ನಮಗೆ ನಾವು ಪ್ರಾಮಾಣಿಕರೋ ಅಲ್ಲವೋ ಎಂಬುದನ್ನರಿತುಕೊಳ್ಳುವುದು ಕಠಿಣ.

— ಹೆನ್ರಿ ಫೀಲ್ಡಿಂಗ್

*

ಯಾವುದಾದರೂ ಒಂದರ ಕುರಿತು ಮಹತ್ವಪೂರ್ಣ ಎಂದು ಭಾವಿಸುವುದಕ್ಕೇ ಕೊರತೆ ಎನಿಸುವುದೇ ಮನುಷ್ಯ ಜೀವನದ ದೊಡ್ಡ ದುರಂತ. — ಆರ್ಥರ್ ಮಾರ್ಗನ್

*

ನಕ್ಕಾಗ ಹೊಟ್ಟೆಯುಬ್ಬುಗದ ವ್ಯಕ್ತಿಗಾಗಿ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನೋಡಬೇಕು.

— ಕ್ಯಾಂಟೊನಿ ಗಾದೆ

*

ನಿದ್ದೆಗೇಡಿತನಕ್ಕೆ ಪರಮೌಷಧಿ – ರಾತ್ರಿ ಪಾಳಿ. —ಆರೋದಿ

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ

# ಸಿಹಿ-ಕಹಿ-ತಾಸ

**ಜೇಬುನ್ನೀಸಾ**

ಲೇಖನದಲ್ಲಿ ವಿವರಿಸಿದ ಪ್ರಸಂಗಗಳಲ್ಲಿ ಅವಳು ಆ ಹಾಡನ್ನು ಹಾಡಿದ್ದನ್ನು ಇತಿಹಾಸಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿ–ದೆಯೆ? ಪತ್ರಿಕೆಗಳಲ್ಲಿ ಬರುವ ಐತಿಹಾಸಿಕ ವಿಷಯಗಳಿಗೆ ಸಂಬಂಧಿಸಿದ ಲೇಖನಗಳು ರೋಚಕವಾಗಿರಬೇಕೇನೋ ನಿಜ, ಆದರೆ ಅವು ವಸ್ತುನಿಷ್ಠವಾಗಿಯೂ ಇರಬೇಕು.

ಬೆಂಗಳೂರು –ಡಿ. ಕೆ. ಪ್ರಭು

**ದುಷ್ಟ ಕರ್ಣ ಕೀಟ**

ಆಸ್ಕರ್ ಕುಕ್ ಅವರು ಬರೆದಂತಹ ಕರ್ಣ ಕೀಟ ಕಥೆಯು ಭಾವನಾತಿರೇಕದಿಂದ ಕೂಡಿದ್ದು ಸಂಶಯ, ಭಯ, ಆಶ್ಚರ್ಯಗಳೆಂಬ ಮೂರು ರಸಗಳಿಂದ ಕೂಡಿದ ವೈಚಾರಿಕ ಹೊಸ ಮಾದರಿಯ ಕಥೆ. ಧನ್ಯವಾದ.

ಕನಕಗಿರಿ –ವೆಂಕಟೇಶ್ ಜನಾದ್ರಿ

ಡಿಸೆಂಬರ್ ಸಂಚಿಕೆಯಲ್ಲಿ ಮೂಡಿ ಬಂದ 'ಕರ್ಣಕೀಟ' ಕಥೆ ತುಂಬಾ ಉತ್ತಮ ಶೈಲಿಯಲ್ಲಿತ್ತು. ಇತ್ತೀಚೆಗೆ 'ಕಸ್ತೂರಿ'ಯು ತುಂಬಾ ವೈವಿಧ್ಯದಿಂದ ಕೂಡಿರುತ್ತದೆ. ಅಂತೆಯೇ ಹೊಸ ವರ್ಷಕ್ಕೆ ಹೊಸ ಹೊಸ ಕತೆ, ಲೇಖನಗಳು ಮೂಡಲಿ.

ಕಾಟಿವಳ್ಳ (ದ. ಕ.) –ಚಂದ್ರಶೇಖರ್

**ಡೆರೈಟ್**

ಪ್ರೌಢ ವಿಷಯವನ್ನು ಜನಸಾಮಾನ್ಯರಿಗೂ ರೋಚಕವಾಗುವಂತೆ ವಿವರಿಸಬಹುದೆನ್ನುವುದಕ್ಕೆ ಈ ಲೇಖನವೇ ಸಾಕ್ಷಿ.

ವಿಜಾಪುರ –ಎಸ್. ಕೆ. ಹಿರೇಮಠ

ಈ ಲೇಖನವನ್ನು ಓದಿದ ಬಳಿಕ ವಿಧಿಯಲ್ಲಿ ವಿಶ್ವಾಸವಿಲ್ಲದ ನನಗೆ ನಿಜವಾಗಿಯೂ ವಿಧಿ ಯೆಂಬುದಿದೆಯೆ? ಎಂಬ ವಿಚಾರದ ಸುಳಿ ನನ್ನ ಮನಸ್ಸಿನಲ್ಲಿ ಹಾಯ್ದು ಹೋಯಿತು. ಮೂರು ವರ್ಷಗಳ ಹಿಂದೆ ಡೆರೈಟ್ ಅವರು ತಮ್ಮ ಗಮನವನ್ನು ಕ್ರಿಶ್ಚಿಯನ್ ಧಾರ್ಮಿಕ ಸಾಹಿತ್ಯದತ್ತ ಹರಿಸುವ ನಿರ್ಣಯವನ್ನು ತೆಗೆದುಕೊಂಡಿದ್ದರಿಂದ ಭಾರತೀಯರ ಮನಸ್ಸಿಗೆ ಏಕೆ ನೋವಾಗಬೇ-ಕೆಂಬುದು ನನಗೆ ತಿಳಿಯಲಿಲ್ಲ. ಆ ಪಂಡಿತರಿಂದ ಇನ್ನು ಮೇಲೆ ಹಿಂದೂ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳು ಹೊರಬರುವದಿಲ್ಲವೆಂಬ ಅರ್ಥದಲ್ಲಿ ಲೇಖಕರು ಈ ಮಾತುಗಳನ್ನು ಬರೆದಿದ್ದರೆ ಅದಕ್ಕೆ ನನ್ನ ಆಕ್ಷೇಪವಿಲ್ಲ.

ಹುಬ್ಬಳ್ಳಿ –ಎಂ. ಶ್ರೀಕಾಂತ

**ಬೆಳದಿಂಗಳ ರಾತ್ರಿಯಲ್ಲಿ**

ನಿಮ್ಮ ಡಿಸೆಂಬರ್ ಪುಸ್ತಕ ವಿಭಾಗ 'ಒಂದು ಬೆಳದಿಂಗಳ ರಾತ್ರಿಯಲ್ಲಿ... ಅಕಸ್ಮಾತಾಗಿ' ನಿಜವಾಗಿಯೂ ಒಂದು ರೋಚಕ ಅನುಭವ. ಅಲ್ಲದೆ ಇಂಥ ವಿಷಯಗಳನ್ನು ಕಥಾವಸ್ತುವಾಗಿಟ್ಟುಕೊಂಡು ಮಕ್ಕಳಿಗಾಗಿ ಬರೆಯುವುದು ಸಾಮಾನ್ಯ ಸಾಧನೆಯಲ್ಲ. ವೈಜ್ಞಾನಿಕ ಕಥೆಯೆಂಬ ಹೆಸರು ಹೊತ್ತು ಬರುವ ಅನೇಕ ಭಾರತೀಯ ಕಥೆಗಳ ಲೇಖಕ ಎಷ್ಟೋಸಲ ವಿಜ್ಞಾನವನ್ನು ಬದಿಗಿರಿಸಿ ಕಲ್ಪನಾಲೋಕದಲ್ಲೇ ತೇಲುವುದುಂಟು. ಆದರೆ ಶ್ರೀ ಮೋಟೆಯವರು ಭವಿಷ್ಯತ್ತಿನಲ್ಲಿಯ ಸಾಧ್ಯತೆಗಳನ್ನು ವೈಜ್ಞಾನಿಕವಾಗಿಯೇ ಗುರುತಿಸಿಕೊಂಡು ಹೊರಟುದನ್ನು ನಾವು ಕಥೆಯ ಉದ್ದಕ್ಕೂ ಗಮನಿಸಬಹುದು.

ಕಲ್ಲೂರು –ಮ. ನಾರಾಯಣ

**ಕ್ಯಾಡ್ಮಿಯಂ**

'ಕ್ಯಾಡ್ಮಿಯಂ'ನಂತಹ ಲೇಖನಗಳು ಅಚ್ಚಾದ ರೀತಿಯನ್ನು ನೋಡಿದಾಗ ವಿನ್ಯಾಸದಲ್ಲಿ 'ಕಸ್ತೂರಿ' ಇನ್ನೂ ಸುಧಾರಣೆಗೊಳ್ಳಬೇಕೆನಿಸುತ್ತದೆ. ಅಂದ ಹಾಗೆ ಇನ್ನೊಂದು ಮಾತು: ಇತ್ತೀಚೆ ಹಳೆಯ ಹಾಗೂ ಇತರ ಪತ್ರಿಕೆಗಳಲ್ಲಿ (ಕೆಲವು ಸಲ 'ಕಸ್ತೂರಿ'ಯಲ್ಲಿ ಸಹ) ಬಂದ, ಬರುತ್ತಿರುವ ಹಾಗೂ ಸಾಮಾನ್ಯ ಓದುಗರಿಗೆ ಗೊತ್ತಿರುವ ವೈದ್ಯಕೀಯ ವಿಷಯಗಳ ಬಗೆಗೆ ಲೇಖನಗಳನ್ನು ಪ್ರಕಟಿಸುತ್ತಿದ್ದೀರಿ. ಹಳೆಯ ವಿಷಯಗಳ ಜೊತೆಗೆ ಇತ್ತೀಚೆ ಸಂಶೋಧನೆಯಾದ ಹೊಸ ವಿಷಯಗಳನ್ನು ಸೇರಿಸಿ ಹೊಸ ಆಯಾಮ ಕೊಟ್ಟು ಲೇಖನವನ್ನು ವೈಶಿಷ್ಟ್ಯಪೂರ್ಣವಾಗಿ ಪ್ರಕಟಿಸಬಾರದೇಕೆ? ಹಾಗೆ ಮಾಡಿದರೇನೇ 'ಕಸ್ತೂರಿ' ಕಸ್ತೂರಿಯಾಗಿಯೇ ಉಳಿಯುತ್ತದೆ.

ಕಲಬುರ್ಗಿ –ಎಂ. ಕೆ. ಶಿವಶಂಕರ

**ಮಣೆಯ ಮೈಲಿಗೆ**

ಗೌತಮ ಬುದ್ಧನ ಕಾಲದಿಂದಲೂ ನಮ್ಮ ಈ ಹಿಂದೂ ಧರ್ಮದ ಮಣೆಗೆ ಅಂಟಿಕೊಂಡು ಬಂದ ಈ ಜಾತಿಯ ಮೈಲಿಗೆ ತೊಳೆಯಲು ಇನ್ನೆಷ್ಟು ಶತಮಾನ ಬೇಕೋ (ಕಸ್ತೂರಿಯ ಡಿಸೆಂಬರ್ ಸಂಚಿಕೆ) ಎಂಬ ಪ್ರಶ್ನೆಗೆ ಉತ್ತರ. ಅದೇ ಲೇಖನದಲ್ಲಿ ಬಂದಿರುವ ಜೆ. ಪಿ. ಪ್ರಕರಣವನ್ನು ನೆನಪಿಸಿಕೊಂಡಾಗ ಕಲ್ಪನಾತೀತವೆಂದೇ ಆಗುತ್ತದೆ.

ತಾಳಗುಪ್ಪೆ —ಎಂ. ಎಲ್. ಶಾಸ್ತ್ರಿ

ಜಾತೀಯ ಸಮಸ್ಯೆ ಲೇಖಕರು ಭಾವಿಸಿದಷ್ಟು ಗಂಭೀರವಾಗಿಲ್ಲ. ಆರ್ಥಿಕವಾಗಿ ಮೇಲ್ಮಟ್ಟದಲ್ಲಿರುವವರಲ್ಲಿಯೂ ಕೆಳಮಟ್ಟದಲ್ಲಿರುವವರಲ್ಲಿಯೂ ಜಾತೀಯತೆಯ ಕಟ್ಟುಪಾಡುಗಳು ಅಷ್ಟಾಗಿ ಗೋಚರಿಸುವುದಿಲ್ಲ. ಅದು ಹೆಚ್ಚಾಗಿ ಕಂಡು ಬರುವುದು ಮಧ್ಯಮವರ್ಗದ ಜನಗಳಲ್ಲಿ ಮಾತ್ರ. ಸಂಪರ್ಕ ಮಾಧ್ಯಮಗಳ ಬಳಕೆ ಹೆಚ್ಚಿದಂತೆ ಜಾತೀಯತೆಯ ಬಂಧನಗಳು ಸಡಿಲಗೊಳ್ಳುತ್ತಿರುವುದು ಅನುಭವದಿಂದ ಗಮ್ಯ.

ಹುಬ್ಬಳ್ಳಿ —ಎಂ. ಆರ್. ಎಸ್. ರಾವ್

**'ಮಾನುಷಿ' ಸ್ತ್ರೀಯರ ಧ್ವನಿ**

ಡಿಸೆಂಬರ್ ೧೯೮೫ರ ಕಸ್ತೂರಿ ಮಾಸ ಪತ್ರಿಕೆಯಲ್ಲಿ ಶ್ರೀ ಮುರಲೀಧರ ಖಜಾನೆಯವರಿಂದ ಉಲ್ಲೇಖಿಸಲ್ಪಟ್ಟಿರುವ "ಮಾನುಷಿ-ಮಹಿಳೆಯರಿಗೊಂದು ಆಶಾಕಿರಣ" ಒಂದು ವಿಚಾರಪೂರ್ಣ ಲೇಖನ. ಮಾನವೀಯ ಮೌಲ್ಯಗಳು ದಿನೇ ದಿನೇ ಕುಸಿದುಹೋಗುತ್ತಿರುವ ಈ ಕಾಲದಲ್ಲಿ, ಅದರಲ್ಲೂ ಸ್ತ್ರೀಯರು, ಮಾನಸಿಕವಾಗಿ ಮತ್ತು ದೈಹಿಕವಾಗಿ ಶೋಷಣೆಗೆ ಒಳಗಾಗಿರುವ ಈ ಕಾಲದಲ್ಲಿ "ಮಾನುಷಿ" ಯಂತಹ ಪತ್ರಿಕೆಗಳು ತೀರಾ ಅತ್ಯವಶ್ಯಕ. 'ಮಾನುಷಿ'ಯ ವಿಳಾಸವೇನು?

ಬೆಂಗಳೂರು —ನ. ಕೃಷ್ಣಮೂರ್ತಿ

ವಿಳಾಸ:
ಸಂಪಾದಕ, 'ಮಾನುಷಿ'
ಮಾನುಷಿ ಟ್ರಸ್ಟ್,
ಎವರೆಸ್ಟ್ ಪ್ರೆಸ್,
ದೆಹಲಿ - ೧೧೦೦೦೬

**ಯಹೂದಿ ದಿಗ್ಗಜಗಳು**

ಯಹೂದಿ ದಿಗ್ಗಜಗಳ ಬಗೆಗಿನ ಲೇಖನಗಳಾಗಲಿ ಚಹದ ಕತೆಯಾಗಲಿ 'ಕಸ್ತೂರಿ'ಯ ಮಟ್ಟಕ್ಕೆ ನಿಲುಕುವುದಿಲ್ಲ.

ಸಾಗರ —ಎಸ್. ಕೆ. ಶರ್ಮಾ

**ಅರ್ಥಪೂರ್ಣ**

ಡಿಸೆಂಬರ್ ೧೯೮೫ ಕಸ್ತೂರಿಯಲ್ಲಿ ಪ್ರಕಟವಾದ, ಹೀರೇನಲ್ಲೂರ ಶಿವಕುಮಾರವರ "ಯಹೂದಿ ದಿಗ್ಗಜಗಳು" ಎಂಬ ಲೇಖನ ಜಗತ್ತಿನ ಪ್ರಗತಿಪರ ವಿಶ್ವಾಸಕ್ಕೆ ಯಹೂದಿಗಳ ವೈವಿಧ್ಯಮಯ ಕೊಡುಗೆಯನ್ನು ಪ್ರತಿಬಿಂಬಿಸುತ್ತದೆ.

ಅರಂತೋಡು —ಯು. ಶೇಖರ

ಎಲೆ ಮರೆಯ ಹೂವಿನಂತೆ ಬಾಳುತ್ತಿರುವ ಶಿಲ್ಪಿ ಎಂ. ಶ್ರೀನಿವಾಸಾಚಾರ್ಯರ ಶಿಲ್ಪಕಲೆ ಎಷ್ಟೋ ಜನರನ್ನು ರಂಜಿಸಿದೆ. ಅವರ ಪರಿಚಯ ಅರ್ಥಪೂರ್ಣ.

ಬಂಕಾಪುರ —ಆರ್. ಜಿ. ಕುಲಕರ್ಣಿ

ಡಿಸೆಂಬರ್ ಸಂಚಿಕೆಯಲ್ಲಿ ಬಿ. ಪಿ. ಶಿವಾನಂಡ ರಾವ್ ಅವರು ಬರೆದ "ಹೊಗಳಲು ಕಲಿಯಿರೋ" ಲೇಖನ ಚನ್ನಾಗಿ ಮೂಡಿ ಬಂದಿದೆ. ನಿಜವಾಗಿಯೆಂದರೆ ಹೊಗಳುವದರಿಂದ ಲಾಭ ಇರಲಿ ಬಿಡಲಿ; ಹಾನಿಯಂತೂ ಇಲ್ಲ. ಆದರ ಅನುಭವ ನನಗೂ ಉಂಟು. ಆದರೆ ಈಗಿನ ಕಾಲದಲ್ಲಿ ಹೊಗಳಿ ಮೋಸ ಮಾಡುವವರೇ ಬಹಳ ಇದ್ದಾರೆ. ಅಂಥವರಿಂದ ಎಚ್ಚರವಾಗಿರಬೇಕು. ಹೊಗಳಿದರೆ ಬಣ್ಣದಿಂದ ಚಿತ್ರ ಬಿಡಿಸಿದಂತಾಗಬೇಕು. ಅದೇ ಬಣ್ಣ ಸಿಡಿಸಿ ಅಂದಗೆಡಿಸಿದಂತಾಗಬಾರದು.

ಸವಣೂರು —ಆರ್. ಬಿ. ಕುಮಶೀಕರ್

ಡಿಸೆಂಬರ್ ತಿಂಗಳ 'ಕಸ್ತೂರಿ'ಯ ಮುಖಪುಟ ಕಂಡು ಹರ್ಷಿತನಾಗಿ ಎರಡೂವರೆ ರೂಪಾಯಿ ಕೊಟ್ಟು ಖರೀದಿಸಿಕೊಂಡು ಇತರ ಎಲ್ಲಾ ಪತ್ರಿಕೆಗಳನ್ನು ಬದಿಗಿಟ್ಟು ಮೊದಲು ಓದಿದೆ.

ವಿಟ್ಲ —ಬಾಲಗೋಪಾಲ

ಕಸ್ತೂರಿ

ವರ್ಷ : ೩೦ | ಜನೆವರಿ ೧೯೮೬ | ಸಂಚಿಕೆ : ೫

# ಮಿಸ್ಟರ್ ಡೆಮೋಕ್ರ್ಯಾಟ್

ಗೋಪಾಲ ಆಶ್ರಿತ

ಗಣರಾಜ್ಯೋತ್ಸವದ ಅಂಗವಾಗಿ ನಮ್ಮ ಕಾಲೇಜಿನಲ್ಲಿ ಒಂದು ಚರ್ಚಾ ಸ್ಪರ್ಧೆಯನ್ನೇರ್ಪಡಿಸಲಾಗಿತ್ತು. 'ಪ್ರಜಾಪ್ರಭುತ್ವ ಅಥವಾ ಸರ್ವಾಧಿಕಾರತ್ವ?' ಎಂಬುದೇ ಚರ್ಚೆಯ ವಿಷಯ. ನಾನು ಪ್ರಜಾಪ್ರಭುತ್ವದ ಪರವಾಗಿ ಮಾತಾಡಿ, ಅಬ್ರಹಾಂ ಲಿಂಕನ್ನನ "ಜನರಿಂದ, ಜನರಿಗಾಗಿ, ಜನರ ಸರಕಾರ" ನಿರೂಪಣೆಯಿಂದ ಪ್ರಾರಂಭಿಸಿ, ಗಾಂಧೀಜಿಯ ರಾಮರಾಜ್ಯ – ಗ್ರಾಮರಾಜ್ಯ, ನೆಹರೂ ಅವರ ವೈಜ್ಞಾನಿಕ ತಳಹದಿಯ ಮೇಲಿನ ಪ್ರಗತಿಯ ಬಗ್ಗೆ, ಸಮಾನತೆ, ಏಕತೆ, ಸಹಜೀವನ, ಸಹಕಾರ ಮತ್ತು ಜನಹಿತ ಕಾರ್ಯಕ್ರಮದಲ್ಲಿ ಎಲ್ಲರೂ ಪಾಲ್ಗೊಳ್ಳುವ ಅವಕಾಶ ಮುಂತಾದ ಅಂಶಗಳನ್ನು ಕುರಿತು ಆವೇಶದಿಂದ ನನ್ನ ವಾದವನ್ನು ಸಮರ್ಥಿಸಿದೆ.

ನನ್ನ ಬಾಲ್ಯ ಸ್ನೇಹಿತ ನಾಗೇಶರೆಡ್ಡಿ ಸರ್ವಾಧಿಕಾರತ್ವದ ಬಗ್ಗೆ ಮಾತಾಡಿ ಅದರಿಂದ ಸ್ವಲ್ಪೇ ಸಮಯದಲ್ಲಿ ಸಾಕಷ್ಟು ಪ್ರಗತಿ ಸಾಧಿಸಬಹುದೆಂದು ಪ್ರಾರಂಭಿಸಿ, "ಪ್ರಜಾಪ್ರಭುತ್ವವನ್ನು ಅನುಸರಿಸಿದರೆ ಕುಂಟುತ್ತ ಸಾಗಬೇಕಾಗುತ್ತದೆ. ಇದರಲ್ಲಿ Everybody's responsibility is nobody's responsibility. ನಮ್ಮ ದೇಶದಲ್ಲಿ ಇಷ್ಟೆಲ್ಲ ಅವಕಾಶವಿದ್ದರೂ ನಮಗೊಂದು ಓಲಿಂಪಿಕ್ ಪದಕ ಗೆಲ್ಲಲಾಗುತ್ತಿಲ್ಲ. ನಮ್ಮ ದೇಶವನ್ನು ಹಿಟ್ಲರ್ ಆಳುತ್ತಿದ್ದರೆ ನಾವು ಎಷ್ಟೊ ಓಲಿಂಪಿಕ್ ಪದಕಗಳನ್ನು ಗೆಲ್ಲುತ್ತಿದ್ದೆವೆಂದು ನನಗೆನಿಸುತ್ತದೆ. ಸ್ಟಾಲಿನ್ನನ ಕಾಲದಲ್ಲಿಯೇ ರಶಿಯ ಸಾಕಷ್ಟು ಪ್ರಗತಿ ಹೊಂದಿತು. ನಮ್ಮ ದೇಶಕ್ಕೊಬ್ಬ ಧರ್ಮಶೀಲ, ಸರ್ವಾಧಿಕಾರಿ

(benevolent dictator) ಬೇಕಾಗಿದೆ. ಪ್ರಜಾಪ್ರಭುತ್ವದಲ್ಲಿ ಕೇವಲ ಆವೇಶಪೂರಿತ ಭಾಷಣಗಳು ಸಿಗಬಹುದು. ಆದರೆ ಪುಸ್ತಕಕ್ಕೂ ಜೀವನಕ್ಕೂ ಬಹಳ ಅಂತರವಿದೆ. ನಾವು ಈ ಸತ್ಯವನ್ನರಿತು ಕ್ರಿಯಾಶೀಲರಾಗಬೇಕು" ಎಂದು ತನ್ನ ಭಾಷಣ ಮುಗಿಸಿದ್ದ.

ಅಂದು ನನಗೆ ಪ್ರಥಮ ಬಹುಮಾನ ಸಿಕ್ಕಿತು; ನಾಗೇಶನಿಗೆ ದ್ವಿತೀಯ ಬಹುಮಾನ. ಭಾರತದ ನಕಾಶೆಯ ಹಿನ್ನೆಲೆಯಲ್ಲಿ ಗಾಂಧಿ, ನೆಹರು ಮಾತಾಡುತ್ತ ಕುಳಿತ ಚಿತ್ರವಿದ್ದ 'ಗ್ಲಾಸ್ ಕೇಸ್' ಮತ್ತು ಒಂದು ಪುಸ್ತಕ ನನಗೆ ದೊರೆತರೆ ನಾಗೇಶನಿಗೆ ದೊರೆತ ಬಹುಮಾನ ಎರಡು ಪುಸ್ತಕಗಳು.

ಅಂದಿನಿಂದ ನನ್ನ ಗೆಳೆಯರು ನನ್ನನ್ನು "Mr. Democrat" ಎಂದು ಕರೆಯಹತ್ತಿದರು.

ಇಪ್ಪತ್ತು ವರ್ಷಗಳ ನಂತರ...

ಈಗ ೧೫ ವರ್ಷಗಳಿಂದ ನಮ್ಮೂರಿನ ಕಾಲೇಜಿನಲ್ಲಿ ರಾಜ್ಯಶಾಸ್ತ್ರದ ಪ್ರಾಧ್ಯಾಪಕನಾಗಿ ಸೇವೆ ಸಲ್ಲಿಸುತ್ತಿದ್ದೇನೆ. "Constitutions— A Comparitive Study" ಎಂಬ ನನ್ನ ಮಹಾ ಪ್ರಬಂಧಕ್ಕೆ Ph.D. ಪದವಿ ಪಡೆದಿದ್ದೇನೆ. ಅಂದು ಬಹುಮಾನವಾಗಿ ಪಡೆದ ಗ್ಲಾಸ್ ಕೇಸು ಈಗಲೂ ನನ್ನ 'ಸ್ಟಡಿ' ಮೇಜನ್ನು ಅಲಂಕರಿಸಿದೆ. "ಸಂವಿಧಾನ" "ಮೂಲಭೂತ ಹಕ್ಕುಗಳು" "ಚುನಾವಣೆಗಳು" ಎಂಬ ಪುಸ್ತಕಗಳನ್ನು ಕನ್ನಡದಲ್ಲಿ ಬರೆದಿದ್ದೇನೆ. "Democracy at Cross-Roads" ಎಂಬ ನನ್ನ ಗ್ರಂಥಕ್ಕೆ ಪ್ರಶಸ್ತಿಯು ಬಂದಿದೆ. ಸೆಮಿನಾರುಗಳಲ್ಲೂ ಪಾಲ್ಗೊಂಡಿದ್ದೇನೆ.

ಆದರೆ ಅಂದು ಸರ್ವಾಧಿಕಾರತ್ವದ ಪರವಾಗಿ ವಾದ ಮಂಡಿಸಿದ ನನ್ನ ಗೆಳೆಯ ಇಂದು ಲೀಡರ್ ಆಗಿದ್ದಾನೆ. ಈ ೨೦ ವರ್ಷಗಳಲ್ಲಿ ಅವನು ಅನೇಕ ಸಲ ಪಕ್ಷಾಂತರ ಮಾಡಿ, ಚೌಧರಿ ಚರಣಸಿಂಘ ಪ್ರಧಾನಮಂತ್ರಿಯಾಗಿದ್ದಾಗ 'ಪಕ್ಷಾಂತರ ಪ್ರವೀಣ' ಎಂಬ ಪ್ರಶಸ್ತಿಯನ್ನು ಅವರ ಕೈಯಿಂದಲೇ ಪಡೆದ. ಪ್ರಜಾ ಸೋಶಿಯಲಿಸ್ಟ್ ಪಕ್ಷದಿಂದ ಸ್ವತಂತ್ರಪಕ್ಷ, ಸ್ವತಂತ್ರದಿಂದ ಭಾರತೀಯ ಕ್ರಾಂತಿದಳ, ಭಾರತೀಯ ಕ್ರಾಂತಿದಳದಿಂದ ಜನತಾ ಪಕ್ಷ, ಜನತಾ ಪಕ್ಷದಿಂದ ಕಾಂಗ್ರೆಸ್ (ಐ)ಗೆ ಜಿಗಿದು ವಿಕ್ರಮ ಸಾಧಿಸಿದ್ದಾನೆ. ಸಧ್ಯ ಕಾಂಗ್ರೆಸ್ (ಐ) ಪಕ್ಷದ ಮುಖ್ಯ ಕಾರ್ಯಕರ್ತರಲ್ಲೊಬ್ಬನಾಗಿ ಪ್ರಭಾವೀ ವ್ಯಕ್ತಿಗಳ ಸಾಲಿಗೆ ಸೇರಿರುವನು. ಬೆಂಗಳೂರಿನಲ್ಲೊಂದು ಮನೆಯಿದೆ. ದಿಲ್ಲಿಯಲ್ಲೂ ಅವನಿಗೊಂದು ಮನೆ 'ಅಲಾಟ್' ಆಗುವದಿದೆ.

ಇತ್ತೀಚೆಗೆ ನಮ್ಮ ಗುರುಗಳ ಮಗಳ ಲಗ್ನಕ್ಕೆ ನಾನು ಬೆಂಗಳೂರಿಗೆ ಹೋಗಿದ್ದೆ. ಆ ಲಗ್ನಕ್ಕೆ ನಾಗೇಶನೂ ಬಂದಿದ್ದ. ನನ್ನನ್ನು ಕಂಡಕೂಡಲೇ "Hello Democrat, how are you?" ಎಂದು ತಬ್ಬಿಕೊಂಡ. ಎಲ್ಲರ ದೃಷ್ಟಿ ನಮ್ಮ ಕಡೆ ಹರಿದಿದ್ದನ್ನು ಕಂಡು ನನಗೆ ಸಂಕೋಚವಾಯಿತು.

ಊಟ ಮುಗಿದ ಮೇಲೆ ತನ್ನ ಕಾರಿನಲ್ಲಿಯೇ ನನ್ನನ್ನು ಶಾಸಕರ ಭವನಕ್ಕೆ ಕರೆದುಕೊಂಡು ಹೋದ. ನನ್ನ ಲೇಖನಗಳನ್ನು ತಾನು ಆಸಕ್ತಿಯಿಂದ ಓದಿರುವದಾಗಿ ಹೇಳಿದಾಗ ನನಗೆ ಬಹಳ ಸಂತೋಷವಾಯಿತು. "ಸಾಮಾನ್ಯವಾಗಿ ನನಗೆ ಓದಲು ಸಮಯವೇ ಇರುವದಿಲ್ಲ. ಅಲ್ಲದೆ ಈ ಪತ್ರಿಕೆಯವರು ಯಾವಾಗಲೂ ರಾಜಕಾರಣಿಗಳ ಬಗ್ಗೆ ಬಹಳ ಕಟುವಾಗಿ ಬರೆಯುತ್ತಾರೆ. ಆದ್ದರಿಂದ ನಾನು ಪತ್ರಿಕೆ ಓದುವುದೇ ಇಲ್ಲ, ಆದರೆ ನಿನ್ನ ಲೇಖನಗಳನ್ನು ಅಥವಾ ಪುಸ್ತಕಗಳ ವಿಮರ್ಶೆ ನೋಡಿದಾಗ ಓದದೆ ಇರಲಾರೆ. ನೀನು ಕಳಿಸಿದ ಲೇಖನಗಳನ್ನು ಓದಿದ್ದಷ್ಟೇ ಅಲ್ಲ, ನನ್ನ ಅನಿಸಿಕೆಗಳನ್ನು ಬರೆದು file ಮಾಡಿಟ್ಟಿದ್ದೇನೆ." ಅವನ ಈ ಮಾತುಗಳನ್ನು ಕೇಳಿ ನನಗೆ ಏಕಕಾಲಕ್ಕೆ ಸಂತೋಷ, ಆಶ್ಚರ್ಯ. "ಆದರೆ, ರಾಜಕೀಯದಲ್ಲಿ ಇಷ್ಟೆಲ್ಲ ಬದಲಾವಣೆಗಳಾದರೂ ಇನ್ನೂ ನಿನ್ನ ಆ ಹಳೆಯ ನಿಲುವು ಬದಲಾಗಿಲ್ಲವಲ್ಲ?" ಎಂದು ನಾಗೇಶ ಮತ್ತೆ ನನ್ನನ್ನು ಚರ್ಚೆಗೆ ಆಹ್ವಾನಿಸಿದ. ಅವನ ಮಾತಿನಿಂದ ಸ್ಫೂರ್ತಿಗೊಂಡು ಈ crisisಗೆ ರಾಜಕಾರಣಿಗಳೇ ಹೊಣೆಗಾರರೆಂದು ಹೇಳುತ್ತ, ಅಸ್ಸಾಮ್, ಪಂಜಾಬ, ಕಾಶ್ಮೀರ, ಆಂಧ್ರ ಪ್ರದೇಶ ಮತ್ತು ಕರ್ನಾಟಕದಲ್ಲಿನ ಬಿಕ್ಕಟ್ಟಿನ ಸ್ಥಿತಿಯ ಬಗ್ಗೆ ವಾದಿಸಿದೆ; ಸರಕಾರವನ್ನು ಉರುಳಿಸುವ ಯತ್ನವನ್ನು ಖಂಡಿಸಿದೆ. ಜಗಮೋಹನ್, ರಾಮಲಾಲ, ಮೊಯಿಲಿ ಮುಂತಾದ ಮುಖಂಡರ ಮೇಲಿನ ಸಿಟ್ಟನ್ನು ಹೊರ ಹಾಕಲು ಸಿಕ್ಕ

ಈ ಅವಕಾಶವನ್ನು ಚೆನ್ನಾಗಿ ಬಳಸಿಕೊಂಡು ಒದರಾಡಿದೆ. ನನ್ನ ಸಿಟ್ಟನ್ನು ಶಮನಗೊಳಿಸಲು ಬಿಸಿ ಬಿಸಿ ಕಾಫಿ ಬಂತು. ನಾನೆಷ್ಟೇ ಆವೇಶದಿಂದ ಮಾತಾಡಿದರೂ ನಾಗೇಶ ಮಾತ್ರ ಶಾಂತ ಚಿತ್ತನಾಗಿ, ನಗು ನಗುತ್ತ ಎಲ್ಲವನ್ನೂ ಆಲಿಸಿದ. ಇನ್ನೊಂದು ಸಿಗರೇಟು ಹಚ್ಚಿ, ಕಾಫಿ ಹೀರುತ್ತ ಅವನು "ನೀನು ಹೇಳುವುದೆಲ್ಲ ಸರಿ. ಆದರೆ ಒಂದು ವಿಷಯ ನೆನಪಿರಲಿ. My boy, you are theoratical; I am practical. You are a political scientist; Iam a politician" ಎಂದಾಗ ೨೦ ವರ್ಷಗಳ ಹಿಂದೆ ಚರ್ಚಾ ಸ್ಪರ್ಧೆಯಲ್ಲಿ ಅವನು "ಪುಸ್ತಕಕ್ಕೂ ಜೀವನಕ್ಕೂ ಸಾಕಷ್ಟು ಅಂತರವಿದೆ. ಈ ಕಟು ಸತ್ಯವನ್ನರಿತು ನಾವು ಕ್ರಿಯಾಶೀಲರಾಗಬೇಕು" ಎಂದ ಮಾತು ನನ್ನ ನೆನಪಿಗೆ ಬಂತು.

ಅಷ್ಟರಲ್ಲಿಯೇ ಪಕ್ಷದ ಕೆಲವು ಕಾರ್ಯಕರ್ತರು ನಾಗೇಶನನ್ನು ಕಾಣಲು ಬಂದರು. "ಈಗ ನಾನೊಂದು wet partyಗೆ ಹೋಗಬೇಕಾ-ಗಿದೆ. ನೀನೂ ಬಾ" ಎಂದ. ನಾನು "No, thanks" ಎನ್ನುತ ಹೊರಡಲು ಸಿದ್ಧನಾದೆ, ನನ್ನನ್ನು ಕಳಿಸಲು ಗೇಟ್ ವರೆಗೆ ಬಂದು "ನಾಳೆ ಬೆಳಗ್ಗಿನಿಂದ ನಾನು busy ಇರ್ತೀನಿ. ೨-೩ ಸಭೆಗಳಲ್ಲಿ ಭಾಷಣ ಮಾಡಬೇಕಾಗಿದೆ. ಈ ಎಲ್ಲ ಸಭೆಗಳ ಒಂದು Report ತಯಾರಿಸ ಬೇಕಾಗಿದೆ. ಆದ್ದರಿಂದ ನಾಳೆ ನಿನ್ನನ್ನು ಭೇಟಿ ಮಾಡಲು ಸಾಧ್ಯವಿಲ್ಲ. ಅದೇನೇ ಇರಲಿ, ನೀನು ನನ್ನ ಗೆಳೆಯ, ಆದ್ದರಿಂದ ಈ ವಿಷಯ ಹೇಳ್ತಾ ಇದ್ದೀನಿ. ಸಧ್ಯ ನಾನು ಬಹಳ powerfull ಹುದ್ದೆಯಲ್ಲಿದ್ದೀನಿ. ಯಾವುದಾದರೂ ವಿಶ್ವ ವಿದ್ಯಾಲಯ ಅಥವಾ ಸಂಶೋಧನಾಲಯದಲ್ಲಿ ನೀನು ಹೆಚ್ಚಿನ ವ್ಯಾಸಂಗ ಮಾಡಬೇಕಾಗಿದ್ದರೆ ಅಥವಾ ದೊಡ್ಡ ನೌಕರಿ ಬೇಕಾಗಿದ್ದರೆ ಹೇಳು. ನಮ್ಮ ಸಲಹಾ ಸಮಿತಿಯಲ್ಲೂ ನಿನ್ನಂಥ ಪ್ರತಿಭಾ ವಂತರನ್ನು co-opt ಮಾಡಲು ಅವಕಾಶವಿದೆ. ನನ್ನ ಕೈಲಾದ ಸಹಾಯ ಮಾಡುವೆ. ಇಷ್ಟ ರಲ್ಲಿಯೇ ನಾನು ರಾಜ್ಯ ಸಭೆಗೆ ನೇಮಕಗೊಳ್ಳು-ವವನಿದ್ದೇನೆ. ಬೇಕಾದರೆ ನೀನು ಒಂದು Foreign trip ಕೂಡಾ ಹೊಡೆಯಬಹುದು. We must make hay while the sun shines... ಇಂಥ ಒಳ್ಳೆಯ ಅವಕಾಶ ತಪ್ಪಿಸಿಕೊಳ್ಳಬಾರದು. ವಿಚಾರಮಾಡಿ ಪತ್ರ ಬರಿ" ಎಂದು ಹೇಳಿ ನನ್ನನ್ನು ಬೀಳ್ಕೊಟ್ಟ. ಪುಸ್ತಕ ಮತ್ತು ಜೀವನದ ಮಧ್ಯದ ಅಂತರದ ಬಗ್ಗೆ ಒಂದು ಸ್ಪಷ್ಟ ಚಿತ್ರ ಮೂಡಹತ್ತಿತ್ತು.

ಬೆಂಗಳೂರಿನಿಂದ ಮರಳಿದ ನಂತರ ೨-೩ ದಿನ ಗಳ ವರೆಗೆ ನನ್ನ ಸ್ಟಡಿ ರೂಮಿಗೆ ಹೋಗಿರಲಿಲ್ಲ. ನಾಗೇಶನ ಮಾತು ಕೇಳಿ, ಅವನ Practical Politics ನೋಡಿ ದಿಗ್ಭ್ರಾಂತನಾಗಿದ್ದೆ. ಅವನ ವಿಚಾರಧಾರೆ ಮತ್ತು ನನ್ನ ಆದರ್ಶಗಳ ಮಧ್ಯ ತಿಕ್ಕಾಟ ನಡೆದಿತ್ತು.

ಅಪೂರ್ವ ಲೇಖನವನ್ನು ಬರೆದು ಮುಗಿಸ ಬೇಕೆಂದು ಕೋಣೆಯಲ್ಲಿ ಕಾಲಿಟ್ಟಾಗ ಮೇಜಿನ ಮೇಲೆ ಗ್ಲಾಸ್ ಕೇಸ್ ಕಾಣಿಸಲಿಲ್ಲ. ಮೇಜಿನ ಕೆಳಗೆ, ಪುಸ್ತಕಗಳ ಹಿಂದೆ, ಕೊಠಡಿಯಲ್ಲೆಲ್ಲಾ ಹುಡುಕಾಡಿದರೂ ಗ್ಲಾಸ್‌ಕೇಸ್ ಸಿಗಲಿಲ್ಲ. ಇದರ ಬಗ್ಗೆ ಹೆಂಡತಿಯನ್ನು ಕೇಳಿದಾಗ "ಆ ಮೇಜಿನ ಮೇಲೆ ಪುಸ್ತಕ, ಕಾಗದ, ದಿನಪತ್ರಿಕೆ, ಟ್ರಾನ್ಸಿಸ್ಟರ್ ಏನೇನೋ ಹರವಿ ಹೋಗಿದ್ರಿ. ಎಲ್ಲವನ್ನೂ ಜೋಡಿಸಿಡೋಣಂತ ಪುಸ್ತಕಗಳನ್ನೆತ್ತಿ ಮೇಲಿನ ಖಾನೆಯಲ್ಲಿಟ್ಟೆ. ಪೇಪರ್ ತೆಗೆಯುತ್ತಿದ್ದಂತೆ ಒಂದು ಪುಸ್ತಕ ಜಾರಿ ಬಿದ್ದು ಗ್ಲಾಸ್ ಕೇಸಂ ಒಡೆದು ಹೋಯಿತು...I am relly sorry" ಎಂದು ಅವಳು ವಿಷಾದ ವ್ಯಕ್ತಪಡಿಸಿದಳು.

ಹೌದು, ಅಂದು 'ಪ್ರಜಾಪ್ರಭುತ್ವ'ವನ್ನು ಕುರಿತು ಮಾತಾಡಿ ಗೆದ್ದ ಬಹುಮಾನ, ಗೆಳೆಯ ರಿಂದ 'Democrat' ಎಂಬ ಬಿರುದನ್ನು ತಂದಿತ್ತು. ಆದರೆ ಇಂದು ನಮ್ಮ ದೇಶದಲ್ಲಿ 'ಪ್ರಜಾಪ್ರಭುತ್ವ'ವೇ ಪುಡಿಪುಡಿಯಾದಾಗ ಅದರ ಬಗ್ಗೆ ವಾದಿಸುವುದೂ ದಡ್ಡತನವೆನಿ-ಸುತ್ತದೆ. ಇಷ್ಟು ದಿನಗಳವರೆಗೆ ಪ್ರಿಯ ವಾಗಿದ್ದ ಗ್ಲಾಸ್‌ಕೇಸ್ ಒಡೆದ ವಿಷಯ ಕೇಳಿ ಇಂದು ವಿಷಾದವಾಗಲಿಲ್ಲ. 'ಪ್ರಜಾಪ್ರಭುತ್ವ'ದ ಸಂಕೇತವಾಗಿತ್ತಲ್ಲವೆ ಈ ಗಾಜಿನ ತುಣುಕು? ⊙

# ಆಮಂತ್ರಣ ತಂದ ಆತ್ಮೀಯತೆ

ವೆಂಕಟಾಚಲ ಮಾನಾಚಿ

ನವಾಬರನ್ನು ಕಲಕತ್ತೆಯ ನೆರೆಯಲ್ಲಿ ಸೆರೆ ಇಡುವ ಸಂಗತಿ ಕಾಶಿಯ ಮಹಾರಾಜರಿಗೆ ತಿಳಿಯಿತು. ಆಗ ಈಶ್ವರೀ ಪ್ರಸಾದ ನಾರಾಯಣ ಸಿಂಹರು ಕಾಶಿಯ ಸಿಂಹಾಸನದ ಅಧಿಪತಿಗಳು. ಮೊದಲಿನಿಂದಲೂ ಲಕ್ನೋ ನವಾಬರ ವಿಷಯದಲ್ಲಿ ಆದರ ಅಭಿಮಾನ ತಾಳಿದವರು.

ನವಾಬರನ್ನು ಸೆರೆಹಿಡಿಯುವರೆಂದು ಗೊತ್ತಾದೊಡನೆಯೇ ಮಹಾರಾಜರು ತಮ್ಮ ಕೊನೆಯ ಕೃತಜ್ಞತೆಯನ್ನು ವ್ಯಕ್ತಪಡಿಸಬೇಕೆಂದು ಹೃದಯಂಗಮವಾದ ಒಂದು ಕಾಗದ ಬರೆದು ರಾಜಾ ಶಿವಪ್ರಸಾದ ಸಿಂಹರ ಜತೆಗೆ ಲಕ್ನೋವಿಗೆ ಕಳುಹಿಸಿದರು. ಮಹಾರಾಜರು, "ಕಾಶಿಯು ನಿಮ್ಮ ಅರಮನೆಯಂತೆ ನಿಮ್ಮನ್ನು ಕಾಣುತ್ತಿದೆ, ನೀವು ನವಾಬಗಿರಿ ಕಳೆದುಹೋಯಿತೆಂಬ ನೋವನ್ನು ಮರೆತು ಇಲ್ಲಿ ಸುಖದಿಂದ ಇರಬಹುದಾಗಿದೆ. ಇನ್ನು ಮುಂದೆ ನಿಮ್ಮನ್ನು ಕಾಣುವ ಭಾಗ್ಯ ನಮಗಿದೆಯೋ ಇಲ್ಲವೋ, ನಮ್ಮ ಕೃತಜ್ಞತೆಯನ್ನು ಪ್ರಣಾಮದೊಂದಿಗೆ ಸ್ವೀಕರಿಸಬೇಕು" ಎಂದಿಷ್ಟೇ ಬರೆದಿದ್ದರು. "ನವಾಬರು ಏನು ಕಟ್ಟು – ಕಟ್ಟಳೆ ಹೇಳಿದರೂ ಒಪ್ಪಿಕೊಂಡು ಬನ್ನಿ. ಅವರನ್ನು ಅತಿಥಿಗಳಾಗುವಂತೆ ಮಾಡಿರಿ" ಎಂದು ಶಿವಪ್ರಸಾದ ಸಿಂಹರಿಗೆ ಹೇಳಿದ್ದರು.

ಶಿವಪ್ರಸಾದರು ಲಗುಬಗೆಯಿಂದ ಲಕ್ನೋವಿಗೆ ಹೋದರು. ಆದರೆ ಅವಮಾನ, ಚಿಂತೆಗಳಿಂದ ಗ್ರಸ್ತರಾದ ನವಾಬರಿಗೆ ಹಿಂದಿನ ವಿರಸ ನೆನಪಾಯಿತು. ಆದರೂ ಅಮಂತ್ರಣದಲ್ಲಿ ಆತ್ಮೀಯತೆ ಕಂಡಿತು.

"ಶಿವಪ್ರಸಾದ, ನಾನು ಬರುತ್ತೇನೆ. ಆದರೆ ನಿಮ್ಮ ಮಹಾರಾಜರ ಮುಖ ನೋಡುವ ಅಪೇಕ್ಷೆ ನನಗಿಲ್ಲ. ಒಂದು ಕನ್ನಡಿಯಲ್ಲಿ ಮಾತ್ರ ನನ್ನನ್ನು ಅವರು ನೋಡಬಹುದು. ಇದಕ್ಕೆ ಒಪ್ಪುವಂತಿದ್ದರೆ ಬರುವೆ."

ನವಾಬರ ಮಾತಿನ ನೋವು ಗ್ರಹಿಸಿದರು ಶಿವಪ್ರಸಾದರು. "ಆಗಲಿ ಖಾವಿಂದರೆ, ತಮ್ಮ ಇಚ್ಛೆಯಂತೆ ನಡೆಯಲು ಮಹಾರಾಜರು ಸಿದ್ಧರಿದ್ದಾರೆ. ತಮ್ಮ ಮನಕ್ಕೆ ಸಮಾಧಾನವಾಗಬೇಕೆಂದಷ್ಟೇ ಮಹಾರಾಜರು ಬಯಸುವುದು."

ಶಿವಪ್ರಸಾದರು ನವಾಬರು ಬರುವ ದಿನ, ವೇಳೆ ಎಲ್ಲವನ್ನೂ ಗೊತ್ತುಮಾಡಿಕೊಂಡು ಕಾಶಿಗೆ ಮರಳಿದರು. ಮಹಾರಾಜರಿಗೆ ಎಲ್ಲವನ್ನೂ ನಿವೇದಿಸಿದರು.

ಅರಮನೆಯ ನರ್ಮದೇಶ್ವರ ಮಂದಿರದಲ್ಲ ನವಾಬರಿಗೆ ವ್ಯವಸ್ಥೆಯಾಯಿತು. ನರ್ಮದೇಶ್ವರ ಮಂದಿರವು ವಿವಿಧ ಬಗೆಯ ಕನ್ನಡಿಗಳಿಂದ ನಿರ್ಮಿತವಾಯಿತು. ಹೊರಗೆ ಒಂದು ಕೆರೆಯ ನೀರನ್ನು ಗಂಧದಿಂದಲೂ ಇನ್ನೊಂದು ಕೆರೆಯ ನೀರನ್ನು ಕೇದಗೆಯಿಂದಲೂ ಸುಗಂಧಮಯವಾಗಿ ಮಾಡಲಾಗಿತ್ತು.

ಗೊತ್ತಾದ ದಿನ ಸರಿಯಾದ ಹೊತ್ತಿಗೆ ನವಾಬರು ತಮ್ಮ ಪರಿವಾರದೊಡನೆ ಬಂದರು. ಅವರ ಮುಖ ಗಂಟುಗಂಟಾಗಿಯೇ ಇತ್ತು. ಶಿವಪ್ರಸಾದರು ಅವರನ್ನು ಸ್ವಾಗತಿಸಿ, ನರ್ಮದೇ–

ಕ್ಕೆ ಮಂದಿರದಲ್ಲಿ ಕರೆದೊಯ್ದರು. ಮಂದಿರದ ಅಲಂಕಾರವೇ ಅವರ ಕೋಪದಿಂದ ಉರಿಯುವ ಮುಖದಲ್ಲಿ ಮಂದಹಾಸವನ್ನು ಮಿನುಗಿಸಿತು. ಅಲ್ಲಿಯ ಸುಗಂಧವೇ ಅವರಿಗೊಂದು ಬಗೆಯ ಆಹ್ಲಾದವನ್ನುಂಟುಮಾಡಿತು.

ನವಾಬರು ಒಂದು ಕನ್ನಡಿಯ ಎದುರಿನ ಆಸನದಲ್ಲಿ ಕುಳಿತುಕೊಂಡರು. ಅವರು ಕುಳಿತ ಕೆಲ ಹೊತ್ತಿನಲ್ಲಿಯೇ ಮಹಾರಾಜರು ಬೇರೆ ಒಂದು ಬಾಗಿಲಿನಿಂದ ಬಂದರು. ತಮ್ಮ ಎದುರಿಗಿದ್ದ ಕನ್ನಡಿಯಲ್ಲಿ ನವಾಬರು ಎದುರೇ ನಿಂತುಕೊಂಡಂತೆ ಪ್ರತಿಬಿಂಬವಿತ್ತು. ಆದರೆ ನವಾಬರು ಮಹಾರಾಜರೆದುರು ಬೆನ್ನುಮಾಡಿ ಕುಳಿತಿದ್ದರು. ಮಹಾರಾಜರು ಅತ್ಯಂತ ವಿನಯದಿಂದ ಬಾಗಿ ಕುರ್ನಿಸಾತ್ ಮಾಡಿದ್ದನ್ನು ನವಾಬರು ನೋಡಿದರು. ಬಳಿಕ ಒಂದು ರತ್ನಖಚಿತವಾದ ಪಾನಪಾತ್ರೆಯಲ್ಲಿ ಉತ್ತಮ ಮದ್ಯವನ್ನು ತಮ್ಮ ಕೈ ಮುಟ್ಟಿ ಶಿವಪ್ರಸಾದರ ಕೈಗಿತ್ತು ನವಾಬರಿಗೆ ನಮಸ್ಕಾರದೊಡನೆ ಸ್ವೀಕರಿಸಲು ಬಿನ್ನವಿಸಿದರು. ಬಳಿಕ ಸೇವಕನ ಕೈಯಿಂದ ಚಿನ್ನದ ಹಿಡಿಯ ಚಾಮರವೊಂದನ್ನು ತರಿಸಿ ತಮ್ಮೆದುರು ಇದ್ದ ಪ್ರತಿಬಿಂಬಕ್ಕೆ ಚಾಮರ ಬೀಸುತ್ತ ನಿಂತರು. ಮಹಾರಾಜರ ಆ ಕೃತ್ಯ ಕಂಡು ನವಾಬರು ಚಕಿತರಾದರು. ಅದು ಬೇಸಿಗೆಯ ದಿನವಾಗಿತ್ತು. ಚಾಮರದ ಗಾಳಿ ತಮಗೆ ತಗಲಿ ಹಿತವಾದ ಅನುಭವವಾಗಹತ್ತಿ ನವಾಬರು ಒಮ್ಮೆಲೆ ಹಿಂತಿರುಗಿ ನಿಂತರು. ಮಹಾರಾಜರೂ ಅವರಿಗೆ ಅಭಿಮುಖರಾಗಿದ್ದರು.

ಮಹಾರಾಜರು ಮತ್ತೆ ನಮಸ್ಕರಿಸಿ ನಿಂತರು. ನವಾಬರ ಮುಖದಿಂದ ನಗೆ ಹೊಮ್ಮಿತು.

"ಮಹಾರಾಜ ಇದೇನು ಮಾಡುತ್ತಿದ್ದೀರಿ?"

"ನನ್ನ ಉದ್ಯೋಗವನ್ನೇ ಮಾಡುತ್ತಿದ್ದೇನೆ."

"ನಿಮ್ಮ ಉದ್ಯೋಗ?"

"ಹೌದು ಖಾವಿಂದರೆ, ನನ್ನ ಉದ್ಯೋಗವನ್ನೇ ಮಾಡುತ್ತಿದ್ದೇನೆ. ದೊಡ್ಡ ನವಾಬರಿದ್ದಾಗ ನಮ್ಮ ಪೂರ್ವಜರು ಚಾಮರ ಬೀಸುವವರೇ ಆಗಿದ್ದರು. ಅವರ ಕರುಣೆಯಿಂದಲೇ ಈ ಮಹಾರಾಜ ಪದವಿ ಪೂರ್ವಜರಿಗೆ ದೊರೆಯಿತು. ನವಾಬಗಿರಿ ಇದೇ ಕೊನೆಯದು. ಇನ್ನು ಸೇವೆ ಮಾಡುವ ಭಾಗ್ಯ ನಮಗೆಲ್ಲಿ? ಇದೇ ಕೊನೆಯ ಸೇವೆ. ಅದನ್ನು ಅಂಗೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿರಿ."

ಮಹಾರಾಜರ ಒಂದೊಂದು ಮಾತೂ ನವಾಬರಿಗೆ ತಾಗುತ್ತಿತ್ತು. ಕಲ್ಲಾದ ನವಾಬರ ಹೃದಯ ಕರಗಿತು. ಒಂದೊಂದೇ ಹೆಜ್ಜೆ ಮಹಾರಾಜರತ್ತ ಸರಿಯತೊಡಗಿತು. ಮಹಾರಾಜರೂ ನವಾಬರತ್ತ ಹೆಜ್ಜೆ ಹಾಕತೊಡಗಿದರು. ಸನಿಹಕ್ಕೆ ಬಂದಾಗ ನವಾಬರೇ ಮಹಾರಾಜರನ್ನು ಅಪ್ಪಿಕೊಂಡರು. ಮಹಾರಾಜರು ಧನ್ಯತೆಯಿಂದ ನವಾಬರನ್ನು ಪ್ರತಿಯಾಗಿ ಆಲಂಗಿಸಿದರು.

ಕೆಲ ನಿಮಿಷ ಮೌನದಲ್ಲಿ ಕಳೆಯಿತು. ನವಾಬರು ಮಹಾರಾಜರನ್ನು ಅಭಿನಂದಿಸುತ್ತ, "ಮಹಾರಾಜ ಇಂದು ನಾನು ಸುಖಿ; ಬಹಳ ಸಂತೋಷಪಟ್ಟಿದ್ದೇನೆ" ಎಂದರು.

"ನವಾಬರ ಚಿತ್ತ ಅದು. ವಾಜೀದ್ ಅಲಿಶಾಹ, ಇಂಗ್ಲಿಷರು ನಮ್ಮ ಎಲ್ಲವನ್ನೂ ಸುಲಿಯುತ್ತಿದ್ದಾರೆ. ಇಂದು ನಿಮ್ಮನ್ನು ಸೆರೆಹಾಕಿದ್ದಾರೆ. ನಾಳೆ ನಮ್ಮನ್ನೂ ಹಾಕುವರು. ನಾವು ಇರುವಷ್ಟು ದಿನ ಪ್ರೀತಿಯ ರುಚಿ ನೋಡುತ್ತ ಕಳೆಯಬೇಡವೆ?"

ಮಹಾರಾಜರ ಮಾತು ನವಾಬರ ಅಂತಃಕರಣಕ್ಕೆ ತಗಲಿತು. ಮಹಾರಾಜರು ಸ್ವಲ್ಪ ಮುಂದೆ ಹೋಗಿ ನವಾಬರ ಎರಡೂ ಕೈಗಳನ್ನು ಹಿಡಿದು ಎದೆಗೆ ಒತ್ತಿಕೊಂಡು ಹೇಳಿದರು, "ಹುಜೂರ್, ಇನ್ನು ನೀವು ಬಹಳ ಹೊತ್ತಿರಲಾರಿರಿ. ಇಲ್ಲೇ ಕುಳಿತು ಒಂದು ಗಂಟೆ ಮಾತಾಡಿ ಕಳೆಯೋಣ."

ಇಬ್ಬರೂ ಹಾಲುಗಲ್ಲಿನ ಮೇಲೆ ಕುಳಿತರು. ಮಹಾರಾಜರು ತಮ್ಮ ಸೇವಕರಿಗೆ ಸನ್ನೆ ಮಾಡಿ-ದೊಡನೆ ಅವನು ಉತ್ತಮ ತಾಂಬೂಲ ಕರಂಡಕವೊಂದನ್ನೂ ತಂಬಾಕದ ರತ್ನಖಚಿತ ಭರಣಿಯೊಂದನ್ನೂ ಮುಂದಿರಿಸಿ ನಮಸ್ಕರಿಸಿ ಹೋದ. ಮಹಾರಾಜರು ತಮ್ಮ ಕೈಯಿಂದ

ತಾಂಬೂಲ ಸಿದ್ಧಪಡಿಸಿ ನವಾಬರಿಗೆ ಕೊಟ್ಟರು. ಆನಂದ ತುಂದಿಲರಾದ ನವಾಬರು ಹೇಳಿದರು:

"ಮಹಾರಾಜ, ನಾನು ಈ ವೇಳೆಯಲ್ಲಿ ಬಹಳ ದೀನನಾಗಿದ್ದೇನೆ. ನನ್ನ ಮನಸ್ಸು ಬೇಟೆಗಾರನ ಬಾಣಕ್ಕೆ ಸಿಕ್ಕು ಗಾಯಗೊಂಡ ಹರಿಣಿಯಂತಾಗಿದೆ. ನಿಮ್ಮ ಮನಸ್ಸನ್ನು ನಾನು ಯಾವ ವಿಧದಿಂದ ಸಮಾಧಾನಗೊಳಿಸಬಲ್ಲೆ?"

"ನೀವು ಬಂದುದಕ್ಕಿಂತ ನನಗೆ ಬೇರೆ ಸಮಾಧಾನ ಬೇಕಿಲ್ಲ" ಮಹಾರಾಜರು ಹೇಳುವಾಗಲೇ ನವಾಬರು ಹೊರಗೆ ಇದ್ದ ತಮ್ಮ ಪರಿವಾರದಲ್ಲಿ ಯಾರನ್ನೋ ಕೂಗಿ ಏನೋ ತರುವಂತೆ ಹೇಳಿದರು. ಆ ವೃದ್ಧ ಮನುಷ್ಯ ಹೊರಗಿನಿಂದ ಶ್ರೀಗಂಧದ ಒಂದು ಚಿಕ್ಕ ಪೆಟ್ಟಿಗೆ ತಂದು ನವಾಬರ ಕೈಗಿತ್ತು ಹೋದ.

ನವಾಬರು ಅದರಿಂದ ರತ್ನಖಚಿತವಾದ ಒಂದು ಪೈಪನ್ನು ತೆಗೆದು ಮಹಾರಾಜರ ಕೈಗೆ ಕೊಡುತ್ತ ಹೇಳಿದರು, "ಮಹಾರಾಜ ಇದನ್ನು ಸ್ವೀಕರಿಸಿರಿ. ನಿಮ್ಮ ಹುಕ್ಕಾಗೆ ಇದನ್ನು ಕೂಡಿಸಿ ಸೇದಿರಿ. ಇದು ನನ್ನ ಕ್ಷುದ್ರ ಕಾಣಿಕೆ." ನವಾಬರು ಆ ಹುಕ್ಕಾದ ಬಾಯನ್ನು ವರ್ಣಿಸುತ್ತ ಹೇಳಿದರು. "ಮಹಾರಾಜ ಇದು ಅಪರೂಪದ ವಸ್ತು. ಲೋಕದಲ್ಲಿ ಇಂತಹದು ಇದೇ. ಇದರ ಮೇಲೆ ಸ್ವಲ್ಪ ಬೆಳಕು ಬಿದ್ದರೆ ಸಾಕು, ಇದಕ್ಕಿರುವ ಏಳು ಹರಳುಗಳು ಬಣ್ಣದ ಬೆಳಕನ್ನು ಪ್ರತಿಫಲಿಸುತ್ತವೆ ನೋಡಿ"-ಎಂದು ಮಹಾರಾಜರಿಗೆ ತೋರಿಸಿದರು. ಮಹಾರಾಜರು ಚಕಿತರಾಗಿ ನೋಡುತ್ತ ಅದನ್ನು ಕೈಗೆತ್ತಿಕೊಂಡರು.

ಬಳಿಕ ನವಾಬರು ಇನ್ನೊಂದು ಪೆಟ್ಟಿಗೆ ತರಿಸಿದರು. ಅದರಿಂದ ರತ್ನರಂಜಿತವಾದ ತಟ್ಟೆ, ಲೋಟ, ಬಟ್ಟಲುಗಳನ್ನು ಹೊರಗೆ ತೆಗೆದು ಮಹಾರಾಜರೆದುರು ಇಟ್ಟರು. "ಮಹಾರಾಜ, ನವಾಬರಿಗೆ ಇವುಗಳನ್ನು ಉಪಯೋಗಿಸುವ ಪುಣ್ಯ ತೀರಿತು. ಇವಿನ್ನು ನಿಮ್ಮ ಆಶ್ರಯದಲ್ಲಿರಬೇಕು. ಇಗೋ ನೋಡಿ. ಈ ತಟ್ಟೆಯಲ್ಲಿ ಬಾದಶಹ ಜಹಂಗೀರ ಊಟ ಮಾಡಿದ್ದ. ಈ ಲೋಟದಿಂದ ಆತ ನೀರು ಕುಡಿದಿದ್ದ. ಈ ಬಟ್ಟಲಿನಿಂದ ನೂರ್‌ಜಹಾನಳ ನೆರಳು ನೋಡುತ್ತ ಮದ್ಯ ಕುಡಿಯುತ್ತಿದ್ದ..." ಎಂದು ಅವುಗಳನ್ನು ಒಂದೊಂದಾಗಿ ತೆಗೆದು ಮಹಾರಾಜರ ಕೈಗೆ ಕೊಟ್ಟರು. ಮಹಾರಾಜರು ಅರಳಿದ ಕಣ್ಣುಗಳಿಂದ ಅವುಗಳನ್ನು ನೋಡುತ್ತಿದ್ದರು. "ಇದು ನೋಡಿ ಮಹಾರಾಜ, ಈ ರತ್ನಗಳ ಮಾಹಾತ್ಮ್ಯವೆಂದರೆ ಇದರಲ್ಲಿ ವಿಷ ಹಾಕಿದ ಅಡಿಗೆ ಇದ್ದರೆ ಕೂಡಲೇ ತಟ್ಟೆಯ, ಲೋಟದ ಬಣ್ಣವೇ ಬದಲಾಗಿಬಿಡುತ್ತದೆ..." ಎಂದು ನವಾಬರು ಹೇಳಿ ದೀರ್ಘ ಉಸಿರು ಬಿಟ್ಟರು. ಕೊನೆಗೆ ಇನ್ನೊಂದು ಪೆಟ್ಟಿಗೆ ತರಿಸಿ ಅದರಿಂದ ಒಂದು ಪುಟ್ಟ ರತ್ನದ ಪೀಠವನ್ನು ಹೊರಕ್ಕೆ ತೆಗೆದರು. ಅದನ್ನು ನೋಡಿಯೇ ನವಾಬರ ಕಣ್ಣು ತುಂಬಿತು.

"ಮಹಾರಾಜ, ಇದು ನೋಡಿ. ಈ ಪೀಠದ ಮೇಲೆ ನಮ್ಮ ತಂದೆ ಕುಳಿತು ಬಡವರಿಗೆ–ದೀನರಿಗೆ ದಾನ ಧರ್ಮ ಮಾಡಿದ್ದು. ಇನ್ನಾರು ಕುಳಿತುಕೊಳ್ಳಬೇಕು ಇದರ ಮೇಲೆ? ಇದು ನಿಮ್ಮ ಹತ್ತಿರವಿರಲಿ..." ನವಾಬರಿಗೆ ದುಃಖ ತಡೆಯಲಾಗಲಿಲ್ಲ. ಮಹಾರಾಜರನ್ನು ತಬ್ಬಿಕೊಂಡು ಅತ್ತರು. ಮಹಾರಾಜರು ಅವರನ್ನು ಶಾಂತಗೊಳಿಸಿದರು. ಅಷ್ಟರಲ್ಲಿ ಹೊರಗೆ ಆಂಗ್ಲ ಸೈನಿಕ ಅಧಿಕಾರಿಗಳು ಅಡ್ಡಾಡಹತ್ತಿದರು. ನವಾಬರು "ಇನ್ನು ಈ ಸೈತಾನರು ನನ್ನನ್ನು ಬಿಡುವುದಿಲ್ಲ. ಅವರು ಬಾ ಎನ್ನುವುದರೊಳಗಾಗಿ ನಾನು ಹೋಗುವುದು ಒಳ್ಳೆಯದು..." ಎಂದವರೆ ಹೊರಟರು. ಮಹಾರಾಜರು ಬಾಗಿಲವರೆಗೆ ಹೋಗಿ ಕಳುಹಿಸಿ ಬಂದರು. ಹಿಂತಿರುಗಿ ಬರುವಾಗ ಕಂಬನಿಯಿಂದ ಅವರ ಅಂಗಿ ನೆನೆದಿತ್ತು. ✡

(ಆಧಾರಿತ)

# ಮಕ್ಕಾ ಯಾತ್ರೆ ಮಾಡಿ ಬಂದ ಹಣಮಂತಾಚಾರ್ಯರು

ಇಸ್ಲಾಂ ಮತಸ್ಥರಿಗಷ್ಟೇ ಮೀಸಲಾದದ್ದು ಮಕ್ಕಾ ಕ್ಷೇತ್ರ ಯಾತ್ರೆ. 'ಅರೇಬಿಯನ್ ನೈಟ್ಸ್'ನ ಸುಪ್ರಸಿದ್ಧ ಭಾಷಾಂತರಕಾರ ರಿಚರ್ಡ್ ಫ್ರಾನ್ಸಿಸ್ ಬರ್ಟನ್, ಅನೇಕ ದೇಶಗಳನ್ನು ವಂಚಿಸಿ, ಛದ್ಮವೇಷದಲ್ಲಿ ಮಕ್ಕಾ ಯಾತ್ರೆ ಮಾಡಿ, ಕಾಬಾ ಶಿಲೆಯ ಉದ್ದಗಲಗಳನ್ನೂ ಕಂಡು ಹಿಡಿದು, ವಿಕ್ರಮಸ್ಥಾಪಿಸಿದ ಒಬ್ಬ ಮಹಾನ್ ಸಾಹಸಿ.

ಯಾರನ್ನೂ ವಂಚಿಸದೆ, ಕೇವಲ ಕುತೂಹಲಕ್ಕಾಗಿ, ಆಕಸ್ಮಿಕವೆಂಬಂತೆ, ತಮ್ಮ ಇಸ್ಲಾಂ ಗುರುವಿನೊಂದಿಗೆ ಮಕ್ಕಾ ಯಾತ್ರೆ ಮುಗಿಸಿಬಂದ ಹಣಮಂತಾಚಾರ್ಯ ಇಟಗಿ ಅವರದೂ ಒಂದು ವಿಕ್ರಮವೆ. ಇಂದಿನವರೆಗೆ ಮಕ್ಕಾ ಯಾತ್ರೆ ಮಾಡಿದ ಮೊದಲನೆಯ ಹಿಂದೂ ಹಣಮಂತಾಚಾರ್ಯರು.

## ಒಲ್ಲದ ಸಮುದ್ರಯಾನ

ಹಣಮಂತಾಚಾರ್ಯರ ವಯಸ್ಸು ಆಗ ಸುಮಾರು ೧೩-೧೪ ಇರಬೇಕು. ಉರ್ದು-ಪಾರಸಿ ಭಾಷೆಗಳನ್ನು ಕಲಿಯುವ ಹಂಬಲದಿಂದ, ಕೊಪ್ಪಳದ ಒಡ ಶಾಲಾ ಮಾಸ್ತರರಾದ ಮೌಲ್ವಿ ಮರ್ದಾನ ಅಲಿ ಸಾಹೇಬರ ಶಿಷ್ಯರಾದರು. ಮರ್ದಾನ ಅಲಿ ಸಾಹೇಬರು ಅತ್ಯಂತ ಧಾರ್ಮಿಕ ವ್ಯಕ್ತಿ. ಜೀವನದಲ್ಲಿ ಅವರಿಗೆ ಎರಡು ಮಹತ್ವಾಕಾಂಕ್ಷೆಗಳಿದ್ದವು: ಮಸೀದೆ ಕಟ್ಟಬೇಕು, ಮಕ್ಕಾ ಯಾತ್ರೆ ಮಾಡಬೇಕು. ಬಾಲಕ ಹಣಮಂತ



ಮಸೀದೆಗೆ ಕಲ್ಲು ಹೊತ್ತ, ಮಣ್ಣನ್ನೂ ಕಲಿಸಿದ. ಮಕ್ಕಾ ಯಾತ್ರೆಗಾಗಿ ಗುರುಗಳು ಶಿಷ್ಯರಿಂದ ೧೦೦ ರೂಪಾಯಿ ಫೀ ಬಯಸುತ್ತಿದ್ದರು. ಒಂದು ವರುಷಕ್ಕೆ ಕಾರಣಾಂತರದಿಂದ ಓದು ನಿಲ್ಲಿಸಿದ ಹಣಮಂತ, ಒಬ್ಬ ಗುಜರಾತಿ ಮಿತ್ರನ ಜತೆ ಮುಂಬಯಿಗೆ ಪ್ರಯಾಣ ಬೆಳೆಸಬೇಕಾಯಿತು. ಆಗಲೇ ಹಣಮಂತನಿಗೆ ಜ್ಯೋತಿಷ್ಯದ ಹವ್ಯಾಸ ಇತ್ತು. ಮುಂಬಯಿಯಲ್ಲಿ ತನ್ನ ಮಿತ್ರನಿಗೆ, "ಗೋದಿ-ಬೆಳ್ಳಿ ತೇಜಿಯಾಗಲಿವೆ" ಎಂದು ಆತ

**ಗುರುರಾಜ ಕುಲಕರ್ಣಿ**

ಕಣಿನುಡಿದ. ಗುಜರಾತಿ ಮಿತ್ರ ಕೂಡಲೇ ತನ್ನ ಹಾಗೂ ಹಣಮಂತನ ಹೆಸರಿನಲ್ಲಿ ಕೆಲವು ಶೇರು ಖರೀದಿಸಿದ, ವಾರದಲ್ಲಿಯೇ ಹಣಮಂತನ ಕಣಿ ನಿಜವಾಗಿ ವ್ಯಾಪಾರಿ ಮಿತ್ರನಿಗೆ ಅಮಿತ ಲಾಭವಾಯಿತು. ಹಣಮಂತನ ಶೇರಿನ ಲಾಭವನ್ನು ವ್ಯಾಪಾರಿ ಆತನ ಎದುರಿಗೆ ಇಟ್ಟ-ಅದು ಒಟ್ಟು ೧೫೦೦ ರೂಪಾಯಿಯಷ್ಟಿತ್ತು. ಹಣಮಂತನಿಗೆ ಆ ಹಣ ಪಡೆಯುವದು ಇಷ್ಟವಿರಲಿಲ್ಲ. ಮಿತ್ರ

ಬಿಡಲಿಲ್ಲ. ಕೊನೆಗೆ ಹಣಮಂತ, "ಮಕ್ಕಾ ಯಾತ್ರೆ ಮಾಡಲು ನನ್ನ ಗುರುದಕ್ಷಿಣೆ ಅರ್ಪಿಸುತ್ತೇನೆ" ಎಂದವನೇ 'ಕೂಡಲೇ ಮುಂಬಯಿಗೆ ಬನ್ನಿರಿ' ಎಂದು ಮರ್ದಾನ ಅಲಿ ಸಾಹೇಬರಿಗೆ ತಾರು ಕೊಟ್ಟ. ಅವರು ಮುಂಬಯಿಗೆ ಬಂದಾಗ ಎಲ್ಲ ಪಣವನ್ನೂ ಅವರ ಇದುರಿಗೆ ಇಟ್ಟು ನಮಸ್ಕರಿಸಿದ. ಶಿಷ್ಯನನ್ನು ಹೃತ್ಪೂರ್ವಕವಾಗಿ ಹರಸಿದ ಗುರುಗಳು ಕೂಡಲೇ ಮಕ್ಕಾ ಯಾತ್ರೆಗೆ ಹೊರಟು ಬಿಟ್ಟರು.

ಗುಜರಾತಿ ವ್ಯಾಪಾರಿ ಮತ್ತೊಂದು ಮಾಯಾಜಾಲ ಬೀಸಿದ. ಪ್ಯಾರಿಸ್ಸಿಗೆ ಹೋಗಲು ಪಾಸ್‌ಪೋರ್ಟ್ ತರಿಸಿ ಹಡಗವನ್ನು ತೋರಿಸುವ ನೆವದಿಂದ ಹಣಮಂತನನ್ನು ಕರೆದೊಯ್ದ. ಹಡಗನ್ನು ಹತ್ತಿ ನೋಡುತ್ತಿರುವಂತೆಯೇ ಅದು ಬಂದರನ್ನು ಬಿಟ್ಟ ಸಾಕಷ್ಟು ದೂರ ಹೋದ ಮೇಲೆಯೇ ಹಣಮಂತನಿಗೆ ಗೊತ್ತಾದದ್ದು. ಮಿತ್ರನ ಉದ್ದೇಶ ತಿಳಿದು ಗಾಬರಿಯಾಯಿತು. ತಮ್ಮದು ಸಂಪ್ರದಾಯಸ್ಥ ಮನೆತನ, ಸಮುದ್ರಯಾನ ತಮಗೆ ವರ್ಜ್ಯ ಎಂದೆಲ್ಲ ಹುಡುಗ ಬಹಳ ಪೇಚಾಡಿದ. ಸಮುದ್ರಯಾನ ಒಗ್ಗದೇ ವಾಂತಿ ಮಾಡಿಕೊಂಡ. ಕೇವಲ ಅವಲಕ್ಕಿಯ ಮೇಲೆಯೇ ೬-೮ ದಿನಗಳನ್ನು ಕಳೆದು, ಏಡನ್ ಬಂದರದಲ್ಲಿ ಹಡಗು ಅಕಸ್ಮಾತ್ ನಿಂತಾಗ, ಇನ್ನು ಮುಂದೆ ಹೋಗಬಾರದು, ಭಾರತಕ್ಕೆ ಹಿಂದಿರುಗಬೇಕೆಂಬ ನಿರ್ಧಾರದಿಂದ ಹಡಗಿನಿಂದಿಳಿದುಬಿಟ್ಟ.

ಆದರೆ ಹಣಮಂತನಿಗೆ ಏಡನ್ನಿನಲ್ಲಿ ಮಕ್ಕಾ ಯಾತ್ರೆಗೆಂದು ಹೊರಟು ಬಂದ ಮರ್ದಾನ ಅಲಿ ಸಾಹೇಬರ ಭೆಟ್ಟಿಯಾಯಿತು. ನಡೆದುದೆಲ್ಲವನ್ನೂ ಹೇಳಿದ. ಶಿಷ್ಯನ ಪೀಕಲಾಟ ಕಂಡ ಗುರುಗಳು "ನನ್ನ ಜತೆಗೆ ಮಕ್ಕಾಕ್ಕೆ ಬಾ. ಯಾತ್ರೆ ಮುಗಿಸಿ ಇಬ್ಬರೂ ಭಾರತಕ್ಕೆ ತಿರುಗಿ ಹೋಗೋಣ" ಎಂದು ತಮ್ಮೊಂದಿಗೆ ಕರೆದೊಯ್ದು ಬಿಟ್ಟರು.

"ಮೌಲ್ವಿ ಸಾಹೇಬರು ನನ್ನ ಸಲುವಾಗಿ ಯಾರ್‍ಯಾರಿಗೆ ಏನೇನು ಸುಳ್ಳು ಹೇಳಿದರೋ ನನಗೆ ಗೊತ್ತಿಲ್ಲ. ಬೌದ್ಧ ಸಂನ್ಯಾಸಿಯಂತೆ ನನ್ನ ತಲೆಯನ್ನು ನುಣ್ಣಗೆ ಬೋಳಿಸಿ ಒಂದೇ ವಸ್ತ್ರವನ್ನು ಸುತ್ತಿಕೊಳ್ಳಲು ಹೇಳಿದರು. ನನಗೆ ನಮಾಜು ಮಾಡಲು ಮೊದಲೇ ಕಲಿಸಿದ್ದರು. ಆಜೇ ಝಂಜಮ್–ಝಂಜಮ್ ಝರಿಯಲ್ಲಿ ನಾವು ಸ್ನಾನ ಮಾಡಿದೆವು. ನಂತರ ಹಾಜ್–ಕೆ–ನಮಾಜ ಮಾಡಿದೆವು. ಉತ್ತರ ದಿಕ್ಕಿನಲ್ಲಿ ಏಳು ಸಾಲಿಗ್ರಾಮದಂಥ ಶಿಲೆಗಳಿವೆ. ಅಲ್ಲಿ ಏಳು ಸಾರೆ ಶಿಸ್ತಾ (ನಮಸ್ಕಾರ) ಮಾಡಿ, ಏಳು ಹಳ್ಳು ಒಗೆದು ಕಾಬಾ ಪ್ರದಕ್ಷಿಣೆ ಮಾಡಿ ಮಕ್ಕಾ ಯಾತ್ರೆ ಮುಗಿಸಿದೆವು. ಅದಾದ ಮೇಲೆ, ಮೌಲ್ವಿ ಸಾಹೇಬರು, ಖಯಾರತ್ (ದಾನ) ಮಾಡುತ್ತಾ ಕುಳಿತರು. ನಾನು ಕಂಡಲ್ಲೆಲ್ಲ ತಿರುಗಾಡಿದೆ. ನಂತರ ಇಬ್ಬರೂ ಸ್ವದೇಶಕ್ಕೆ ತಿರುಗಿ ಬಂದೆವು."

ಈಗ ೭೬ ವಯಸ್ಸಿನ ಆಚಾರ್ಯರು, ತಾವು ಆಗ ಮಾಡಿದ ಮಕ್ಕಾಯಾತ್ರೆಯನ್ನು ವಿವರಿಸಿದರು. ಸ್ವದೇಶಕ್ಕೆ ಬಂದ ಮೇಲೆ, ಶ್ರೀ ಸತ್ಯಧಾನ ಶ್ರೀಪಾದರ ಬಳಿಹೋಗಿ ಎಲ್ಲವನ್ನೂ ನಿವೇದಿಸಿದರಂತೆ. "ಛಿ! ಹುಡುಗ ಬುದ್ಧಿ" ಎಂದು ಸ್ವಾಮಿಗಳು ಬಯ್ದು, ಒಂದು ದಿವಸ ಉಪವಾಸ ಇಟ್ಟು, ಬಾಲಕ ಹಣಮಂತನಿಗೆ ಪ್ರಾಯಶ್ಚಿತ್ತ ವಿಧಿ ಮುಗಿಸಿ, ಮತ್ತೆ ಹಿಂದೂ ಧರ್ಮಕ್ಕೆ ಅವರನ್ನು ಸೇರಿಸಿಕೊಂಡರಂತೆ. "ನಮ್ಮ ಧರ್ಮದ ಮಹತ್ತ್ವವನ್ನು ಅರಿಯಲು, ತುಲನಾತ್ಮಕ ಅಭ್ಯಾಸಕ್ಕಾಗಿ ನಾನು ಈಗಲೂ ಕುರಾನ್ ಓದುತ್ತೇನೆ" ಎನ್ನುತ್ತಾರೆ ಹಣ-ಮಂತಾಚಾರ್ಯರು.

## ಅಪರೋಕ್ಷಜ್ಞಾನಿಗಳ ಮನೆತನ

ಇವರ ಮನೆತನ ಮೂಲತಃ ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯದು. ಅಲ್ಲಿಯ ಎಲ್ಲ ಜಹಗೀರನ್ನು ಕಳೆದುಕೊಂಡು, ಕಾರಣಾಂತರದಿಂದ, ಇತರ ಹಿರಿಯರು ರಾಯಚೂರಿನ ಹತ್ತಿರದ ಸಂಕನೂರಿಗೆ ಹೋದರು. ಅಲ್ಲಿಯ ದೇಸಾಯಿ, ಭೂಮಿ—ಸೀಮಿ ದಾನಕೊಟ್ಟ. ಹತ್ತಿರದ ಇಟಗಿಯಲ್ಲಿ, ವೈಷ್ಣವರ ಮನೆ ಇಲ್ಲ ಎಂಬ ಕಾರಣದಿಂದ, ಅಲ್ಲಿ ಹೋಗಿ ಮನೆ ಮಾಡಿದರು. 'ಇಟಗಿ' ಇವರ ಮನೆತನದ ಅಡ್ಡ ಹೆಸರಾದದ್ದು ಹೀಗೆ. ಇವರ ತಂದೆಯ ತಂದೆ ಬೇಗನೇ ತೀರಿಕೊಂಡಿದ್ದರಿಂದ, ಇವರ ತಂದೆಯನ್ನು ಹಣಮಂತಾಚಾರ್ಯರ ಅಜ್ಜಿಯೇ ಬೆಳೆಸಿದರು. ಅಜ್ಜಿಯ ಗುರುಗಳು ಸಿದ್ಧಪುರುಷರಾದ

ತುಳಸೀ ರಾಮಾಚಾರ್ಯರು. (ಎಲ್ಲಿಯೋ ಆಗಲಿ ಅವರು ಧೋತರ ಹಾಸಿ ತೆಗೆದು ಬಿಟ್ಟರೆ ಅಲ್ಲಿ ದೇವರ ಪೂಜೆಗಾಗಿ ತುಳಸಿ ವೃಂದಾವನ ಹುಟ್ಟಿ ಬಿಡುತ್ತಿತ್ತಂತೆ. ತುಳಸಿಯನ್ನು ಹರಿದು ತೆಗೆದು ಕೊಂಡ ಮೇಲೆ, ಮಾಯವಾಗಿ ಬಿಡುತ್ತಿತ್ತಂತೆ.) ಹಣಮಂತಚಾರ್ಯರ ತಂದೆ ಭೀಮಾಚಾರ್ಯರನ್ನು ಅವರ ತಾಯಿ, ರಾಮದುರ್ಗ ಶ್ರೀನಿವಾಸಾ ಚಾರ್ಯರ ಬಳಿ ಓದಲು ಇಟ್ಟಳು. ಶ್ರೀನಿವಾಸ ಚಾರ್ಯರನ್ನು, ತಮ್ಮ ರೋಗಪೀಡಿತ ಗುರುಗಳ ಸೇವೆಗೆ ಭೀಮಾಚಾರ್ಯರನ್ನು ನಿಯಮಿಸಿದರು. ಭೀಮಸೇನನ ಸೇವೆಗೆ ಮೆಚ್ಚಿದ ಗುರುಗಳು, ಬಾಲಕನಿಗೆ ಅನುಗ್ರಹ ಮಾಡಿದರು. ಯಾರ ಗ್ರಂಥ ವನ್ನೂ ಓದದೇ ಭೀಮಾಚಾರ್ಯರು ತಾಯಿಯ ಮನೆಗೆ ಹಿಂತಿರುಗಿದರು, ಆದರೆ ಅವರಿಗೆ ಎಲ್ಲ ಗ್ರಂಥಗಳ ಜ್ಞಾನ ಕರತಲಾಮಲಕವಾಗಿತ್ತು! ಇಟಗಿ ಭೀಮಾಚಾರ್ಯರ ಪಾಂಡಿತ್ಯ ಎಷ್ಟಿತ್ತೆಂದರೆ, ಶ್ರೀ ಸತ್ಯಧ್ಯಾನಯತಿಗಳು ಅವರಿಗೆ 'ಸುಂದರ ವೇದಾಂತಿ' ಎಂಬ ಬಿರುದು ಕೊಟ್ಟಿದ್ದರು. ಭೀಮಾಚಾರ್ಯರು ಕಾಲವಾದಾಗ, ಬಾಲಕ ಹಣ ಮಂತನಿಗೆ ಕೇವಲ ೧೫ ವರ್ಷ.

## ಗುರುಗಳ ಕೃಪಾ ಕಟಾಕ್ಷ

ಹಣಮಂತಾಚಾರ್ಯರಿಗೆ ೧೮ ವರ್ಷ: ನಿಲೋ ಗಲ್ಲಿನಲ್ಲಿ ನಿರ್ಮಾಮ ಕಸ್ಟಮ್ಸ್‌ನಲ್ಲಿ ಕೆಲಸ. ಶ್ರಾವಣಮಾಸದ ಒಂದು ದಿನ, ಪೂಜೆ ಮುಗಿಸಿ ಮಧ್ಯಾಹ್ನದ ಊಟಕ್ಕೆ ಕೂಡಬೇಕೆಂಬಷ್ಟರಲ್ಲಿ "ಹಣಮಂತಾಚಾರ ಇದ್ದಾನೇನು?" ಎಂದು ಯಾರೋ ಕೂಗಿದಂತಾಯಿತು. ನೋಡಿದರೆ ಎತ್ತರದ ಆಜಾನುಬಾಹು ವ್ಯಕ್ತಿ, ವೃದ್ಧ ಬ್ರಾಹ್ಮಣ, ಮಳೆಯಲ್ಲಿ ನೆನೆದಿದ್ದಾನೆ, ಬಗಲಲ್ಲಿ ಕೊಪ್ಪೆಚೀಲ. ಅತಿಥಿಯನ್ನು ಸ್ವಾಗತಿಸಿ, ಸ್ನಾನ–ಊಟ ಮುಗಿಸಲು ಕೋರಿದರು. ಊಟವಾದ ಮೇಲೆ ಹಣಮಂತಾಚಾರ್ಯರು ತಮ್ಮ ಪಾಡಿಗೆ ತಾವು ಆಫೀಸಿಗೆ ಹೋದರು. ಸಂಜೆ ಮನೆಗೆ ಬಂದಾಗ, ಆ ದೂರ್ವಾಸ ಅತಿಥಿ ಕೇಳಿದರು,

"ಏನು ಮನೆಗೆ ಬಂದವರನ್ನು ಯಾರು ಏನು ಎಂದು ಕೇಳುವ ಸಂಪ್ರದಾಯ ನಿಮ್ಮಲ್ಲಿ ಇಲ್ಲೇನು?"

ಆಚಾರ್ಯರು ಹೇಳಿದರು, "ದೇವರಂತೆ ಬಂದಿದ್ದೀರಿ, ಬಂದ ಕಾರಣ ನೀವಾಗಿಯೇ ಹೇಳಿಯೇ ಹೇಳುತ್ತೀರಿ, ನಾವೇಕೆ ಕೇಳಬೇಕು?" ಎಂದು.

"ನಾನು ಹೋಗಲಿಕ್ಕೆ ಬಂದಿಲ್ಲ, ಇಲ್ಲೇ ಇರಲಿಕ್ಕೆ ಬಂದಿದ್ದೇನೆ."

"ಅವಶ್ಯ ಆಗಲಿ. ನಮ್ಮ ತಂದೆ ತೀರಿ ಆರು ತಿಂಗಳಾಯಿತು, ನೀವು ನಮಗೆ ತೀರ್ಥಸ್ವರೂಪರು. ಇರ್ರಿ," ಆಚಾರ್ಯರ ಪ್ರಾರ್ಥನೆ!

ಅಂದಿನಿಂದ ಆರು ತಿಂಗಳಕಾಲ 'ಗುರುಗಳು' ಆಚಾರ್ಯರ ಮನೆಯಲ್ಲಿಯೇ ಅವರ ಕುಟುಂಬದ ಒಬ್ಬ ಸದಸ್ಯರಂತೆ, ಹಿರಿಯರಾಗಿ ಇದ್ದರು. ಆರು ತಿಂಗಳ ನಂತರ, ಕುಟುಂಬದ ಎಲ್ಲ ಸದಸ್ಯರಿಗೂ ಮಂಗಳಸ್ನಾನ ಮಾಡಲು ಆಜ್ಞಾಪಿಸಿ, ಮಂತ್ರೋಪದೇಶ ಮಾಡಿದರು. ಆಚಾರ್ಯರಿಂದ ಧೋತರ ಸೀರೆ ಕಾಣಿಕೆ ಸ್ವೀಕರಿಸಿ, ಹೊರಟು ಹೋದರು. ಆಗಾಗ ಬರುತ್ತಿದ್ದರು. ಕಣ್ಣು ಕಾಣದೇ ಇದ್ದ ಪರಿಸ್ಥಿತಿಯಲ್ಲಿಯೂ, ಮಾಳಿಗೆ ಬೀಳುತ್ತಿದ್ದಾಗ ಮನೆಯವರನ್ನು ಎಚ್ಚರಿಸಿ, ಪ್ರಾಣಹಾನಿ ತಪ್ಪಿಸಿದರು.

ಹಣಮಂತಾಚಾರ್ಯರ ಗುರುಗಳು ಸಾಕಷ್ಟು ಮಹಿಮೆ ತೋರಿಸಿದರಂತೆ. ಅವರ ಶಕ್ತಿ ಪ್ರದರ್ಶನದ ಒಂದು ಪ್ರಸಂಗವನ್ನು ಹಣಮಂತಾ ಚಾರ್ಯರು ಹೀಗೆ ವಿವರಿಸುತ್ತಾರೆ.

"ಗುರುಗಳಿಗೆ ಪಾರ್ಶ್ವವಾಯು ಬಡಿದಿತ್ತು. ಅದಕ್ಕೂ ಮೊದಲು ಅವರು ಬರಿ ಕಾಲಿನಿಂದಲೇ ದೇಶದ ಎಲ್ಲ ತೀರ್ಥಕ್ಷೇತ್ರಗಳ ಯಾತ್ರೆ ಮಾಡಿದ್ದರು. ಎಡಭಾಗಕ್ಕೆ ಪಾರ್ಶ್ವವಾಯು ಪೀಡಿತರಾದ ಅವರನ್ನು ಕರೆದುಕೊಂಡು, ಆಗ ರೋಣದಲ್ಲಿ ಪ್ರಸಿದ್ಧ ಡಾಕ್ಟರ್ ಆಗಿದ್ದ, ಡಾ. ಕೌಲಗುಡ್ಡ ಅವರ ಬಳಿಗೆ ಕರೆದೊಯ್ದೆ, ಕೌಲಗುಡ್ಡರು, ಗುರುಗಳಿಗೆ, ಎಡಗೈ ಎತ್ತಿ ಮೇಜಿನ ಮೇಲೆ ಗುದ್ದಲು ಹೇಳಿದರು. ಪ್ರಯಾಸದಿಂದ ಗುರುಗಳು ಹಾಗೆ ಮಾಡಿದಾಗ, ಕೌಲಗುಡ್ಡರು, 'ಒಂದು ಸೊಳ್ಳೆ ಕೂಡಾ ಸಾಯಲಿಲ್ಲ ಈ ಪೆಟ್ಟಿಗೆ' ಎಂದು ನಕ್ಕರು. 'ಹೌದು ಏನು ಮಾಡಲಿ ? ಬಲಗೈಯಿಂದ [illegible] ಒಂದು ಕೊಬರಿ ಗಿಟುಕನ್ನು ಹಿಸುಕಿದರೆ, ಹನ್ನೆರಡು ತುಂಡು ಆಗುತ್ತದೆ. ಆದರೆ ಈ ಎಡಗೈಯಲ್ಲಿ

ಶಕ್ತಿಯೇ ಇಲ್ಲ'— ಗುರುಗಳ ಉತ್ತರ.

"ಆಶ್ಚರ್ಯಚಕಿತರಾದ ಡಾ. ಕೌಲಗುಡ್ಡರು ಒಂದು ಕೊಬ್ಬರಿಯ ಗಿಟುಕನ್ನು ತರಿಸಿಯೇ ಬಿಟ್ಟರು. ಗುರುಗಳು ಅದನ್ನು ಬಲಗೈಯಿಂದ ಹಿಸುಕಿದಾಗ, ಸರಿಯಾಗಿ ಹನ್ನೆರಡು ತುಂಡು ಆಗಿತ್ತು!

"'ಸ್ವಾಮಿ ತಾವು ಮಹಾನುಭಾವರು, ತಮಗೆ ಚಿಕಿತ್ಸೆ ನೀಡುವ ಸಾಮರ್ಥ್ಯ ನನ್ನದಲ್ಲ' ಎಂದು ಡಾಕ್ಟರರು, ಗುರುಗಳಿಗೆ ಮರ್ಯಾದೆ ಮಾಡಿಕಳಿಸಿ ಕೊಟ್ಟರು."

ಕಾಲವಾದ ಸ್ವಲ್ಪ ದಿನಗಳಲ್ಲಿ, ಮೊದಲಿನ ಗುರುಗಳು ಭಾದ್ರಿ ಕೃಷ್ಣಾಚಾರ್ಯ ಎಂಬ ಇನ್ನೊಬ್ಬ ಅಪರೋಕ್ಷ ಜ್ಞಾನಿಗಳ ಕನಸಿನಲ್ಲಿ ಕಾಣಿಸಿಕೊಂಡು 'ನಿನಗೆ ಶಿಷ್ಯನನ್ನು ಒಪ್ಪಿಸಿದ್ದೇನೆ' ಎಂದು ಹೇಳಿ ಹೋದಂತಾಯಿತಂತೆ. ಭಾದ್ರಿ ಕೃಷ್ಣಾಚಾರ್ಯರು, ಹಣಮಂತಾಚಾರ್ಯರನ್ನು ಹುಡುಕಿಕೊಂಡು ಬಂದು, ಶಿಷ್ಯತ್ವ ದಯಪಾಲಿಸಿದರು. ಅನೇಕ ವಿದ್ಯೆಗಳನ್ನು ಅನುಗ್ರಹಿಸಿದರು.

## ಭೂತಗಳ ಸ್ನೇಹದಲ್ಲಿ

ಹಣಮಂತಾಚಾರ್ಯರು, ಶ್ರೀ ಮಧ್ವಾಚಾರ್ಯರ ಮಂತ್ರಗಳ ಬಲದಿಂದಲೇ ಭೂತ ಪ್ರೇತಗಳನ್ನು ದಿಗ್ಬಂಧಿಸಿ, ಯಾವದೇ ತರಹದ ಭೂತ ಬಾಧೆಯನ್ನೂ ನಿವಾರಿಸುತ್ತಾರೆ. ಹೀಗಾಗಿ ಅನೇಕ ಭೂತಗಳ ಸ್ನೇಹ ಅವರಿಗೆ ಇದೆ. ಭೂತಗಳ ಒಡನಾಟದ ಅನೇಕ ರಸವತ್ತಾದ ಪ್ರಸಂಗಗಳನ್ನು ಅವರ ಬಾಯಿಂದಲೇ ಕೇಳಿ, ಅದ್ಭುತ ರಸದ ಆಸ್ವಾದನೆ ಮಾಡಬೇಕು!

ಮೊಗಲಾಯಿ ರಜಾಕಾರರ ಹಾವಳಿಯಿಂದಾಗಿ, ಗಜೇಂದ್ರಗಡದಲ್ಲಿ ಮನೆ ಮಾಡಿ ಇರುವ ಪ್ರಸಂಗ ಒಮ್ಮೆ ಇವರಿಗೆ ಬಂತು. ೯೦ ರೂಪಾಯಿ ಬಾಡಿಗೆಗೆ ಒಂದು ಮನೆ ಕಷ್ಟದಿಂದ ಸಿಕ್ಕಿತು. ಮೊದಲ ದಿನವೇ ಆಚಾರ್ಯರು ಆಫೀಸಿಗೆ ಹೋಗಿ ಬರುವಷ್ಟರಲ್ಲಿ, ಇಟ್ಟ ಎಲ್ಲ ಸಾಮಾನುಗಳೂ ಚೆಲ್ಲಾಪಿಲ್ಲಿ ಆಗಿದ್ದವು. ಮನೆಯ ಜನ ಭಯಭೀತರಾಗಿದ್ದರು. ಅಕ್ಕಪಕ್ಕದ ಜನ, "ಇದು ದೆವ್ವದ ಮನೆ, ಮೋಸದಿಂದ ನಿಮಗೆ ಕೊಟ್ಟಿದ್ದಾರೆ, ನೀವು ವಿಚಾರಿಸಿ ಬರಬೇಕಾಗಿತ್ತು" ಎಂದು ಹೆದರಿಸಿದರು. ಆಚಾರ್ಯರು ಬಂದವರೇ ಭೂತದ ಆಹ್ವಾನ ಮಾಡಿದರು. ಕರಿ ಚಂದ್ರಕಾಳಿ ಸೀರೆಯುಟ್ಟ, ಹಣೆ ತುಂಬ ಕುಂಕುಮ ಇಟ್ಟ 'ಯಜಮಾನಿತಿ'—ಹೆಣ್ಣು ದೆವ್ವ ಪ್ರತ್ಯಕ್ಷವಾಯಿತು. ಅದಕ್ಕೆ ದಿಗ್ಬಂಧನ ಮಾಡಿ ಬಾಯಿ ಕಟ್ಟಿದರು. ಮುಂದೆ ಅದು ಮನೆಯಲ್ಲಿ ಯಾವ ತೊಂದರೆಯನ್ನೂ ಕೊಡಲಿಲ್ಲ. ಬದಲಾಗಿ ಉಪಕಾರವನ್ನೇ ಮಾಡಿತು. ಹೆಂಡತಿಯ ಬಾಣಂತಿತನ ನಡೆದ ದಿನಗಳಲ್ಲಿ, ನೀರು ಸಿಗದೇ ಇದ್ದಾಗ, ಬೆಳಗಾಗುವದರೊಳಗೆ, 'ಯಜಮಾನಿತಿ' ನೀರು ತುಂಬಿ ಇಟ್ಟಳು. ಮಗು ಅತ್ತಾಗ ತೊಟ್ಟಿಲು ತೂಗಿದಳು. ಎಲ್ಲರಿಗೂ ಕಾಣಿಸುವಂತೆ ಮನೆಯಲ್ಲಿ ಇದ್ದಳು. ಯಾರಿಗೂ ತೊಂದರೆ ಕೊಡಲಿಲ್ಲ.ಕೊನೆಗೆ ಆ ಮನೆಯ ಮಾಲಿಕ—ತಾನು ಮಾಡಿದ ಮೋಸಕ್ಕೆ ಆಚಾರ್ಯರ ಕ್ಷಮೆ ಕೇಳಿದ. ಮನೆ ಬಿಡುವಾಗ ಆ ಮಾಲಿಕನಿಗೂ ದೆವ್ವ ತೊಂದರೆ ಕೊಡದಂತೆ ನಿಗ್ರಹಿಸಿ, ಮನೆ ಒಪ್ಪಿಸಿ ಹೋದರು ಹಣಮಂತಾಚಾರ್ಯರು.

## ಭೂತದ ಗಾಯನ ಕಚೇರಿ

ರಾಯಚೂರು ಜಿಲ್ಲೆಯ ಕೊಟ್ಟಣಕಲ್ಲಿನಲ್ಲಿ ಹೀಗೆ ಒಮ್ಮೆ ಮನೆ ಮಾಡಬೇಕಾಗಿ ಬಂತು. ದೊಡ್ಡ ಒಳವಕ್ಕಲಿನ ಮನೆ. "ಅಲ್ಲಿ ದೆವ್ವ ಇದೆ" ಎಂದರಂತೆ ಜನ. ಆಚಾರ್ಯರು ಹಟದಿಂದ ಅದೇ ಮನೆ ಹಿಡಿದರು. ಆಗ ಅವರು ಒಬ್ಬರೇ ಇದ್ದರು. ಆಫೀಸಿಗೆ ಹೋಗಿಬರುವಷ್ಟರಲ್ಲಿ ಭೂತ ತನ್ನ ಚೇಷ್ಟೆ ಆರಂಭಿಸಿತ್ತು. ಭೂತಕ್ಕೆ ದಿಗ್ಬಂಧನ ಮಾಡಿದಾಗ 'ನನ್ನನ್ನು ಯಾಕ—ಕಾಡುತ್ತಿ?' ಎಂದು ಭೂತ ಅಂಗಲಾಚಿತು. ಭೂತದ ಹೆಸರು 'ಬಂಡೆಪ್ಪ' ಎಂದೂ ಆತನೇ ಮನೆಯ ಯಜಮಾನ ಎಂದೂ ಆಚಾರ್ಯರಿಗೆ ತಿಳಿಯಿತು. "ನೀನು ಸುಮ್ಮನೇ ಒಂದು ಮೂಲೆಯಲ್ಲಿ ಕೂಡು—ಯಾರಿಗೂ ತೊಂದರೆ ಕೊಡಬೇಡ," ಆಚಾರ್ಯರು ಆಜ್ಞಾಪಿಸಿ ಒಂದು ಮೂಲೆ ತೋರಿಸಿದರು.

"ಅಲ್ಲಿ ಸಾವಂತ್ರಿ ಇದ್ದಾಳ"—ಎಂದಿತು ಭೂತ. ಸತ್ತ ಮೇಲೆಯೂ ತನ್ನ 'ಭೂತ' ಪತ್ನಿ ಸಾವಂತ್ರಿಯೊಂದಿಗೆ ಇರಲು ಬಂಡೆಪ್ಪ

ಹೆದರುತ್ತಿದ್ದ!

"ಇಬ್ಬರೂ ಅಲ್ಲಿಯೇ ಇರ್ರಿ"—ಆಚಾರ್ಯರು ಸಮರ್ಥನಾಯಿಸಿ ಹೇಳಿದರು.

"ಮತ್ತೆ ಯಾವಾಗ ಬರ್ಲಿ?" — ಭೂತಕ್ಕೆ ಆಚಾರ್ಯರ ಸ್ನೇಹದ ಆಸೆ.

"ದೀಪ ಹಚ್ಚಿ ಇಟ್ಟಿರತೀನಿ, ಆಗ ಬಾ."

ಒಂದು ಸಂಜೆ ಆಚಾರ್ಯರಿಗೆ ಒಂಟಿತನ ಬೇಸರ ವಾಯಿತು. ನೀಲಾಂಜನ ಹಚ್ಚಿ ಇಟ್ಟರು. ಬಂಡೆಪ್ಪ ಹಾಜರಾದ! ಅದೂ ಇದೂ ಮಾತಾಡಿ ಆಚಾರ್ಯರು "ನಿನಗೆ ದೊಡ್ಡಾಟದ ಹಾಡು ಬರತದೇನು?" ಎಂದು ಕೇಳಿದರು. "ಹೂಂ" ಅಂದ ಬಂಡೆಪ್ಪ. ಹಾಡಲು ಹೇಳಿದರು. ಬಂಡೆಪ್ಪ ಹಾಡಿದ,

**ಕೊಡಬ್ಯಾಡೋ ಇವಗಿಂಥಾ ವರವ**
**ಕೊಡಬ್ಯಾಡೋ ದೇವಾ**
**ರಕ್ಕಸ ತನುಜನು–ಸೊಕ್ಕಿಗೆ ಬರುವನು**
**ಕಾಕು ಬುದ್ಧಿಯನು ಗೆಲುವಾ**
**ಮುಂದೆ ಮೂರು ಲೋಕ ಸುಡುವಾ**

—ಎಂದು ತನ್ನ ಕುಲದ ಅಸುರೋತ್ತಮನಾದ ಭಸ್ಮಾಸುರನನ್ನು ಕುರಿತಾದ ಹಾಡನ್ನೇ ಹಾಡಿತು ಭೂತ.

ಬೆಳದಿಂಗಳು ರಾತ್ರಿ. ಪ್ರಶಾಂತ ವಾತಾವರಣ. ದೆವ್ವದ ಧ್ವನಿಯ ಈ ಹಾಡನ್ನು ಊರಿಗೆ ಊರೇ ಕೇಳಿತು. ಬೆಳಗು ಮುಂಜಾನೆ ಆಚಾರ್ಯರು ಇನ್ನೇನು ಹಾಸಿಗೆಯಿಂದ ಏಳಬೇಕು. ಹಳ್ಳಿಗರು ಒಬ್ಬೊಬ್ಬರಾಗಿ ಆಚಾರ್ಯರ ಮನೆಯ ಕಿಡಕಿಯಲ್ಲಿ ಮಾರಿ ಹಾಕಿ, ಕುತೂಹಲದಿಂದ ನೋಡಿ ಹೋಗತೊಡಗಿದರು. ಕೊನೆಗೊಂದು ಪರಿಚಿತ ಮುಖ ಕಂಡಾಗ ಆಚಾರ್ಯರು ಕೇಳಿಯೇ ಬಿಟ್ಟರು, "ಯಾಕ್ರೆಪಾ. ನನ್ನ ಪ್ರದರ್ಶನಕ್ಕ ಇಟ್ಟಾರೇನು? ಹಿಂಗ್ಯಾಕ– ನೋಡಲಿಕ್ಕೆ ಹತ್ತೀರಿ?" ಎಂದು.

"ಎಪ್ಪಾ! ರಾತ್ರಿ ಹಾಡಿಧಂಗ ಕೇಳಿಸ್ತು, ಅದಕ್ಕ ನೋಡಿದ್ವಿ."

"ಹೌದು ಬಂಡೆಪ್ಪ ಹಾಡಿದ"– ಆಚಾರ್ಯರ ಉತ್ತರ.

"ನಿಮಗೂ ಗೊತ್ತಾಗೇತೇನ್ರಿ?"– ಆಗಂತುಕ ತಬ್ಬಿಬ್ಬಾಗಿ ಕೇಳಿದ.

'ನಾನೇ ಅವನಿಗೆ ಹಾಡಲಿಕ್ಕೆ ಹೇಳಿದೆ. ಇಲ್ಲೇ ಕೂತಿದ್ದ, ರಾತ್ರಿ ಎಲ್ಲಾ ಶ್ರಮಬಟ್ಟು ಹಾಡಿದ ಪಾಪ! ಗೊತ್ತಾಗದೇ ಏನು?' ಎಂದು ಆಚಾರ್ಯರು ವಿವರಿಸಿದಾಗ, ಆ ಹಳ್ಳಿಗ ಗಾಬರಿಯಾಗಿ ಹೋದ.

## ಭೂತದ ಅಧಿಕ–ಬಾಗಿಣ

ರಾಯಚೂರು ಜಿಲ್ಹೆಯ ಅಂಕನಾಳದಲ್ಲಿ ಆಚಾರ್ಯರಿಗೆ ಆಗ ನೌಕರಿ. ಕಾರಣಾಂತರದಿಂದ ಮನೆಯನ್ನು, ನಿಲೋಗಲ್ಲಿನಲ್ಲಿ ಮಾಡಬೇಕಾಯಿತು, ಊರಿಂದ ಊರಿಗೆ ಆಚಾರ್ಯರು ಅಡ್ಡಾಡಬೇಕಾಗಿ ಬಂತು. ಒಂದು ರಾತ್ರಿ, ಅಂಕನಾಳದಿಂದ ನಿಲೋಗಲ್ಲಿಗೆ ಹೊರಟಿದ್ದರು ಆಚಾರ್ಯರು. ಸಂಗಡ ಒಬ್ಬ ಆಳು ಇದ್ದ. ಹೊರಟಿದ್ದು ಕುದುರೆಯ ಮೇಲೆ. ಇದ್ದಕ್ಕಿದ್ದ ಹಾಗೆ ಅಲ್ಲೊಂದು ದೊಡ್ಡ ಪಟ್ಟಣ ಕಾಣಿಸಿತು. 'ಇದೇನು ಇದುವರೆಗೂ ಇಲ್ಲಿ ಈ ಪಟ್ಟಣ ನೋಡಿರಲಿಲ್ಲವಲ್ಲ'– ಎಂದು ಅಚ್ಚರಿಯಾಗುತ್ತಿದ್ದಂತೆಯೇ ಒಂದು ದೊಡ್ಡ ಮನೆಯ ಬಾಗಿಲ ಬಳಿಯೇ ಇಬ್ಬರೂ ಬಂದುಬಿಟ್ಟಿದ್ದರು. ನಡುಮನೆಯಲ್ಲಿ ಒಬ್ಬ ಯಜಮಾನ ಕೂತಿದ್ದು ಕಾಣಿಸಿತು. ಒಳಗಿನಿಂದ ಒಬ್ಬ ಆಳು ಬಂದು "ಯಜಮಾನರು ಕರೆಯುತ್ತಿದ್ದಾರೆ" ಎಂದು ನಿವೇದಿಸಿದ. ಕುದುರೆಗಳನ್ನು ಕಂಬಕ್ಕೆ ಕಟ್ಟಿ ಇಬ್ಬರೂ ಒಳಗೆ ಹೋದರು. ಯಜಮಾನ ಸ್ವಾಗತಿಸಿ–ಹೇಳಿದ "ನಾನು ಅಧಿಕ ಬಾಗಿಣ ಕೊಡಲು, ಬಹಳ ಹೊತ್ತಿನಿಂದ ನಮ್ಮ ಆಚಾರ್ಯರಿಗಾಗಿ ಕಾಯುತ್ತಿದ್ದೇನೆ. ನಮ್ಮ ಆಚಾರ್ಯರು ಇನ್ನೂ ಬರಲಿಲ್ಲ. ನೀವು ಅನಾಯಾಸವಾಗಿ ಬಂದಿದ್ದೀರಿ. ನಮ್ಮ ಬಾಗಿಣ ಸ್ವೀಕರಿಸಬೇಕು" ಎಂದ. 'ಆಗಲಿ' ಎಂದರು ಹಣಮಂತಾಚಾರ್ಯರು. ಒಂದು ಹಿತ್ತಾಳೆಯ ಪರಾತದಲ್ಲಿ ಮೂವತ್ಮೂರು ಅನಾನಸ ಇಟ್ಟು, ಬಾಗಿಣ ಕೊಟ್ಟು, ಒಂದು ಬೆಳ್ಳಿಯ ರೂಪಾಯಿಯನ್ನೂ ದಕ್ಷಿಣೆ ಕೊಟ್ಟ ಯಜಮಾನ. ಊಟ ಮಾಡಿ ಹೋಗಲೂ ಆಚಾರ್ಯರನ್ನು ಆಗ್ರಹಪಡಿಸಿದ. ಊಟ ಆದದ್ದರಿಂದ ಹಣಮಂತಾಚಾರ್ಯರು

ಊಟವನ್ನು ನಿರಾಕರಿಸಿದರು. "ಇಂದು ಇಲ್ಲಿ ದೊಡ್ಡಾಟವಿದೆ, ಅದನ್ನಾದರೂ ನೋಡಿಕೊಂಡು ಬೆಳಿಗ್ಗೆ ಹೋಗಬಹುದು" ಎಂದು ಯಜಮಾನ ಮತ್ತಷ್ಟು ಆಗ್ರಹಪಡಿಸಿದಾಗ, ಆಚಾರ್ಯರೂ ಆಳೂ ನಿಂತರು. ದೊಡ್ಡ ರಂಗಮಂದಿರ, ಅಸಂಖ್ಯಾತ-ಜನರು ಕೂತಿದ್ದಾರೆ ಆಟ ನೋಡಲು. ಇವರಿಗೂ ಕಂಬಳಿ ಹಾಸಿ ಕೂಡಲು ವ್ಯವಸ್ಥೆ ಮಾಡಿದರು. ಆದರೆ ಎಷ್ಟು ಹೊತ್ತು ಕಳೆದರೂ ಆಟ ಪ್ರಾರಂಭವಾಗಲಿಲ್ಲ. ನಿದ್ರೆ ಜೋರಾಗಿ ಬಂದು, ಆಚಾರ್ಯರು, ಆಳು ಇಬ್ಬರೂ ಕಣ್ಣು ಮುಚ್ಚಿದರು. ಬೆಳಗಿನ ತಂಪು ಗಾಳಿಗೆ, ಎಚ್ಚರವಾಯಿತು. ನೋಡಿದರೆ, ಪಟ್ಟಣವೂ ಇಲ್ಲ, ರಂಗಭೂಮಿಯೂ ಇಲ್ಲ. ಅಸಂಖ್ಯಾತ ಜನ ಕುಳಿತ ಯಾವದೇ ಸುಳಿವಿಲ್ಲ. ತಾವು ಇದ್ದದ್ದು ಒಂದು ಸ್ಮಶಾನ! ಮಲಗಿಕೊಂಡಿದ್ದು ಒಂದು ಸಿಡಿಗೆ! ಇದು ಭೂತ ಚೇಷ್ಟೆ ಎಂದು ಅರಿವಾದದ್ದು ಆಗಲೇ! ಇಬ್ಬರೂ ಕುದುರೆ ಏರಿ ಹೊರಟರು. ಸ್ವಲ್ಪ ದೂರದಲ್ಲಿ ಬೆಳಗಿನ ಜಾವ ಎದ್ದು ಹೊಲಕ್ಕೆ ಹೊರಟ ರೈತರು ಇದಿರಾದರು. ಇವರನ್ನು ಕಂಡು ಆಶ್ಚರ್ಯ!

"ಎಪ್ಪಾ ಯಾವೂರಿನಿಂದ ಬಂದಿರಿ?" ರೈತರ ಪ್ರಶ್ನೆ.

"ಇಲ್ಲಿ ಯಾವದೋ ಪಟ್ಟಣ ಕಾಣಿಸಿತು. ರಾತ್ರಿ ಅಲ್ಲಿ ಹೋದಿವಿ. ಈಗ ನೋಡಿದರ ಯಾವ ಪಟ್ಟಣಾನೂ ಇಲ್ಲ"- ಇವರು ಉತ್ತರಿಸಿದರು.

"ಎಪ್ಪಾ! ನಿಮ್ಮ ತಾಯಿ ಹೊಟ್ಟೆ ತಣ್ಣಗೈತಿ ಹೋಗ್ರಿ! ಅದು ಅರಸೀಬೀಡು, ಹಾಳೂರು. ಅಲ್ಲಿ ಬರೇ ದೆವ್ವ ಅವ್ವರಿ. ರಾತ್ರಿ ಅಲ್ಲಿಗೆ ಹೋದವರು ಯಾರೂ ಜೀವಂತ ಬಂದಿಲ್ರಿ"- ರೈತ ಕಣ್ಣು ಮಿಳುಕಿಸದೇ ಸಮಾಧಾನ ಹೇಳಿದ.

ಮನೆಗೆ ಬಂದು ಹಣಮಂತಾಚಾರ್ಯರು ಚೀಲ ತೆಗೆದು ನೋಡಿದರೆ, ಅನಾನಸು ಎಂದು ಸ್ವೀಕರಿಸಿದ್ದೆಲ್ಲ ಸಗಣಿಯ ಕುಳ್ಳು ಆಗಿತ್ತು. ಪರಾತ ಮಾತ್ರ ಹಾಗೆಯೇ ಇತ್ತು. ಅದನ್ನು ಈಗ ಕೆಲವು ವರ್ಷಗಳ ಹಿಂದೆ, ಹಳೇ ಭಾಂಡಿ ಖರೀದಿಸುವವರಿಗೆ ಮಾರಿದರಂತೆ, ಆ ರೂಪಾಯಿ ಮಾತ್ರ ಈಗಲೂ ಅವರ ಹತ್ತಿರ ಇದೆ. ಇದೊಂದು ವಿಚಿತ್ರವಾದ ರೂಪಾಯಿ. ಆಗ ಚಲ್ಲಾವಣೆಯಾಗಿರಬಹುದು. ಈಗ ಹಿತ್ತಾಳೆಯದಾಗಿದೆ. ಇದರ ಮೇಲೆ ಒಂದು ಭಾಗದಲ್ಲಿ ಈಶ್ವರನ ಸುಂದರ ಚಿತ್ರ, ಇನ್ನೊಂದು ಬದಿಯಲ್ಲಿ ಸ್ಪಷ್ಟವಾದ ನಂದಿ ಇದೆ. ಒಂದು ಭಾಗದಲ್ಲಿ 'ಗೋಪಾಲಕೃಷ್ಣ, ಶಂಕರ ಹರಃ' ಎಂದೂ, ಇನ್ನೊಂದು ಭಾಗದಲ್ಲಿ 'ಶಂಕರಾಯ ನಮಃ, ಭಾರತ ಗೋಚರ' ಎಂದೂ ಬರೆದಿದೆ. ಈಶ್ವರನ ಚಿತ್ರ ಇದ್ದದ್ದರಿಂದ ಇದು ಆಚಾರ್ಯರ ದೇವರ ಪೆಟ್ಟಿಗೆಯಲ್ಲಿ ಸ್ಥಾನ ಪಡೆದಿದೆ. ಇತಿಹಾಸ ಸಂಶೋಧನೆಗೆ ಇದು ಒಂದು ಒಳ್ಳೆಯ ವಸ್ತುವೂ ಹೌದು!

## ಹರಿದಾಸ ದೀಕ್ಷೆ

ಹಣಮಂತಾಚಾರ್ಯರಿಗೆ, ಕನ್ನಡ, ಮರಾಠಿ, ತೆಲಗು, ಸಂಸ್ಕೃತ, ಪಾರಸೀ, ಉರ್ದು ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಪರಿಣಿತಿ ಇದೆ. ಅವರು ಶಾಲೆ ಕಲಿತದ್ದೂ ಏಳನೆಯ ವರ್ಗದ ವರೆಗೆ. ನಿಜಾಮ ಸರಕಾರದ ಕಸ್ಟಮ್ಸ್ ಹಾಗೂ ಶಿಕ್ಷಣ ಖಾತೆಗಳಲ್ಲಿ ನೌಕರಿ. ೧೫ ವರ್ಷ, ಕರುಳಗಿರಿ, ನಿಲೋಗಲ್, ಹೊಸಳ್ಳಿ, ಆಂಧ್ರ ಪ್ರದೇಶ. ಕೊಪ್ಪಳ, ಕಾತರಕಿಗಳಲ್ಲಿ ಶಿಕ್ಷಕರಾಗಿ ದುಡಿದಿದ್ದಾರೆ. ಚಿಕ್ಕಂದಿನಲ್ಲಿ ಇವರು ಸಂಗೀತ-ನಾಟಕ ಬರೆದಿದ್ದರಂತೆ. 'ಸಿಕಂದರ' ಎಂಬ ಇವರ ನಾಟಕಕ್ಕೆ ಶ್ರೀರಂಗರು, ಮುನ್ನುಡಿ ಬರೆದಿದ್ದರಂತೆ-ಆದರೆ ಮುಂದೆ, ತಂದೆಯವರ ಅಪ್ಪಣೆಯ ಮೇರೆಗೆ, ನಾಟಕ ರಚನೆ ನಿಲ್ಲಿಸಿಬಿಟ್ಟರು. "ಅಂಕಿತ ಆದಾಗ ಮಾತ್ರ ಪದ್ಯ ರಚನೆ ಮಾಡು" ಎಂದು ಅಪರೋಕ್ಷ-ಜ್ಞಾನಿಗಳಾದ ಇವರ ತಂದೆ ಬಾಲ್ಯದಲ್ಲಿಯೇ ಅಪ್ಪಣೆ ಮಾಡಿದ್ದರು. ಅದೂ ಮುಂದೆ ನಿಜವಾಯಿತು.

ಒಂದು ರಾತ್ರಿ ಹಣಮಂತಾಚಾರ್ಯರಿಗೆ, ವಿಲಕ್ಷಣ ಸ್ವಪ್ನ ಬಿದ್ದಿತು. ಇವರ ಗುರುಗಳು ಬಂದು, ಕನಸಿನಲ್ಲಿಯೇ, 'ನರಸಿಂಹ ವಿಠಲ' ಎಂಬ ಅಂಕಿತವನ್ನೂ ಇವರಿಗೆ ದಯಪಾಲಿಸಿದರು. ಅನಂತರ ಆಚಾರ್ಯರು, ಅನೇಕ-ಕೀರ್ತನೆಗಳನ್ನು ರಚಿಸಿದರು. ಸುಮಾರು ೪೦೦-೫೦೦ ಕೀರ್ತನೆಗಳನ್ನು ಯಾರೋ ಪ್ರಕಟ

ಪಡಿಸುತ್ತೇವೆ ಎಂದು ಹೇಳಿ ತೆಗೆದುಕೊಂಡು ಹೋಗಿ, ಹಿಂದಿರುಗಿಸಲೂ ಇಲ್ಲ. ಪ್ರಕಟಪಡಿಸಲೂ ಇಲ್ಲ. ಈಗ ಸದ್ಯ ಕಳೆದ ಹಲವು ವರ್ಷಗಳಲ್ಲಿ ರಚಿಸಿದ, ೧೦೦–೨೦೦ ಕೀರ್ತನೆಗಳು ಇವರಲ್ಲಿ ಇವೆ.

## ....ಪದವಿಟ್ಟಳುಪದೊಂದಗ್ಗಳಿಕೆ

ಆಗ ಹಣಮಂತಾಚಾರ್ಯರು ಕೊಪ್ಪಳದಲ್ಲಿ ಇದ್ದರು. ಪಂಢರಿನಾಥಾಚಾರ್ಯ ಗಲಗಲಿಯವರು ಅಲ್ಲಿಗೆ ದಯಮಾಡಿಸಿದ್ದರು. ಇಟಗಿಯವರ ಅಭಿಮಾನಿಗಳು. ಶ್ರೀ ಗಲಗಲಿಯವರಿಗೆ, ಹಣಮಂತಾಚಾರ್ಯರು ಒಂದು ರಚನೆ ಹಾಡಿ ತೋರಿಸಿ, ಇದನ್ನು ರಚಿಸಿದ ಹರಿದಾಸರು ಅಲ್ಲಿಯೇ ಇರುವವರೆಂದು ಹೇಳಿದರು. ಆ ಹಾಡು ಈಶ್ವರನನ್ನು ಕುರಿತದ್ದು. ಈಶನನ್ನು ಕವಿ 'ಕಾನನ ಭೇದಿಸಿ ಕಪ್ಪರ ಹಿಡಿದಂಥ' ಎಂದು ಅದರಲ್ಲಿ ವರ್ಣಿಸಿದ್ದಾನೆ. ಗಲಗಲಿಯವರಿಗೆ, ಅದು ಹಿಡಿಸಲಿಲ್ಲ. ಇದನ್ಯಾರು ಬರೆದಿದ್ದಾರೆ? ಏನು ಹೀಗೆಂದರೆ? ಈಶ್ವರ ಯಾವ ಅಡವಿಯನ್ನು ಸುಟ್ಟಿದ್ದಾನೆ? ಸುಮ್ಮ ಸುಮ್ಮನೇ ಏನೇನೋ ಬರೆದು ತಾವೂ ಕವಿ ಅನಿಸಿಕೊಳ್ಳುವ ಚಪಲ ಎಲ್ಲರಿಗೂ, ಎಂದು ಗಲಗಲಿಯವರು ನೊಂದು ನುಡಿದರು. ಕೂಡಲೇ ಹಣಮಂತಾಚಾರ್ಯರನ್ನು ಕರೆಸಲಾಯಿತು.

ಗಲಗಲಿಯವರು ಆಕ್ಷೇಪಿಸುತ್ತಲೇ "ಇದಕ್ಕೆ ಯಾವ ಅರ್ಥ?" ಎಂದು ಹಣಮಂತಾಚಾರ್ಯರನ್ನು ಕೇಳಿದರು.

"ಕಾನನ ಶಬ್ದಕ್ಕೆ ಬೇರೆ ಅರ್ಥವೂ ಇರಬೇಕು ನೋಡಿರಿ. ಅದು ಹಾಗೆ ಬಂತು ಬರೆದೆ. ಬರೆಯುವವನು ನಾನು ಅಲ್ಲ ಗುರುಪ್ರೇರಣೆ ಅಂದ ಮೇಲೆ ನನಗೆ ಅರ್ಥ ಹೇಗೆ ಗೊತ್ತಾಗಬೇಕು?" ಎಂದು ಹೇಳಿದರು.

"ಕಾನನ ಶಬ್ದಕ್ಕೆ ಬೇರೆ ಅರ್ಥವಿಲ್ಲ" ಎಂದರು ಗಲಗಲಿಯವರು. ಕೂಡಲೇ ಏನೋ ಹೊಳೆಯಿತು. ಗಲಗಲಿಯವರಿಗೆ ಹೇಳಿದರು– "ಕ" ಅಂದರೆ ಬ್ರಹ್ಮ ಎಂದು ಅರ್ಥವಾಗುತ್ತದೆ. 'ಕಸ್ಯ ಆನನ' ಎಂದು ವಿಗ್ರಹ ಮಾಡಿದರೆ ಕಾನನ ಶಬ್ದಕ್ಕೆ ಬ್ರಹ್ಮನ ತಲೆ ಎಂದು ಅರ್ಥ ಬರುತ್ತದೆ. ಬ್ರಹ್ಮಕಪಾಲವನ್ನು ಹಿಡಿದ ಶಿವನ ವರ್ಣನೆ ಸರಿಯಾಗಿಯೇ ಇದೆ. ಗಲಗಲಿಯವರು ಸ್ವಲ್ಪ ವಿಚಾರಮಾಡಿ, "ಹೌದಪಾ ಇದು ಸರಿ! ಆದರೆ ಇಂಥ ಕಠಿಣ ಪದಪ್ರಯೋಗ ಯಾರಿಗೆ ಅರ್ಥವಾದೀತು?" ಎಂದರು.

"ಅರ್ಥವಾಗದೇ ಇದ್ದರೆ ಅದು ನನ್ನ ತಪ್ಪಲ್ಲ. ಇಲ್ಲಿಯ ಪದಪ್ರಯೋಗ ಮಾತ್ರ ಸರಿ." ಮುಂದೆ ಗಲಗಲಿಯವರು ಹಣಮಂತಾಚಾರ್ಯರ ಕೀರ್ತನೆಗಳಿಗೆ ಮುನ್ನುಡಿಯನ್ನೂ ಬರೆದು ಕೊಟ್ಟು ಸುಲಭವಾಗಿ ಅರ್ಥವಾಗುವ ಪದ ಪ್ರಯೋಗ ಮಾಡಲು ಸೂಚಿಸಿದರು.

ಕೊಪ್ಪರದ ಶ್ರೀ ನಾರಸಿಂಹ ಕ್ಷೇತ್ರಕ್ಕೂ ಒಮ್ಮೆ ಹೀಗೆಯೇ ಪ್ರಥಮ ಬಾರಿಗೆ ಭೇಟ್ಟಿ ಇತ್ತಾಗ, ಇಟಗಿ ಅವರಿಂದ ಒಂದು ಕೀರ್ತನೆಯ ರಚನೆಯಾಯಿತು. ಅದರಲ್ಲಿ 'ನಾರಪ್ಪಯ್ಯ ನೊಲಿದ ನರಸಿಂಹ' ಎಂಬ ಪದಗಳು, ಇವರಿಗೆ ಗೊತ್ತಿಲ್ಲದಂತೆ ಮೂಡಿಬಂದವು. ನಂತರ ಸ್ಥಳೀಯ ಅರ್ಚಕರಿಂದ, ನೂರಾರು ವರ್ಷದ ಕೆಳಗೆ, ನಾರಪ್ಪಯ್ಯ ಎಂಬ ಅಜ್ಞ ಬ್ರಾಹ್ಮಣನಿಗೆ ತಿರುಪತಿ ತಿಮ್ಮಪ್ಪನ ಅನುಗ್ರಹದಿಂದ, ಕೊಪ್ಪರ ಕ್ಷೇತ್ರದಲ್ಲಿ ಶಾಲಿಗ್ರಾಮ ಶಿಲೆಯಲ್ಲಿ ನರಸಿಂಹ ದೇವರ ಆವಿರ್ಭಾವವಾದ ಕಥಾನಕ ಇವರಿಗೆ ತಿಳಿದು ಬಂದು, ಮೈ ಪುಳಕಿತವಾಯಿತು.

ಈಗ ಹಣಮಂಚಾರ್ಯರು ಧಾರವಾಡದಲ್ಲಿ ವಾಸವಾಗಿದ್ದಾರೆ. ಹೆಂಡತಿ–ಮಕ್ಕಳು–ಮೊಮ್ಮಕ್ಕಳಿಂದ ಕೂಡಿದ ತುಂಬು ಸಂಸಾರ ಅವರದು. ಮಾಧ್ವ ಮತದಲ್ಲಿ ಅಪಾರವಾದ ಶ್ರದ್ಧೆ-ವಿಶ್ವಾಸ ಅವರಿಗೆ. ಅವರ ಅಭಿಮಾನಿಗಳ ಸಂಖ್ಯೆ ಅಪಾರ. ಅವರೊಂದಿಗೆ ಮಾತನಾಡುವದೇ ಒಂದು ಹಬ್ಬ. ವಿಷಯ ವೈವಿಧ್ಯ, ಸರಸ ಸಂಭಾಷಣೆಯ ಗುಟ್ಟು, ತೆರೆದ ಮನಸ್ಸಿನಿಂದ ಎಲ್ಲರನ್ನೂ ಬರಮಾಡಿಕೊಳ್ಳುವ ಔದಾರ್ಯ ಅವರದು. ✡

# ಖೋಟಾನೋಟುಗಳಿಗೊಂದು ಪತ್ರಿಕೆ

ವಿ. ಎಸ್. ಸೂರ್ಯನಾರಾಯಣ

ಬೆಂಗಳೂರಿನ ಹೋಟೆಲೊಂದರಲ್ಲಿ ತಿಂಡಿ ತಿಂದು ಬಿಲ್ ಹಣ ನೀಡಲು ಯುವಕರಿಬ್ಬರು ಕೌಂಟರಿನ ಬಳಿ ಬಂದರು. ಒಬ್ಬ ಜೇಬಿನಿಂದ ೧೦ ರೂಪಾಯಿಯ ಹೊಸ ನೋಟು ನೀಡಿದ. ಬಾಕಿ ಚಿಲ್ಲರೆ ತೆಗೆದುಕೊಂಡು ಹೊರಗೆ ಬಂದು ಬೀದಿಯ ಬದಿ ಅಂಗಡಿಯಲ್ಲಿ ಸಿಗರೇಟ್ ಕೊಂಡು ಇನ್ನೊಂದು ಹೊಸ ನೋಟನ್ನು ಅಂಗಡಿಯವನಿಗೆ ನೀಡಿದರು. ಹೋಟೆಲಿನ ಮಾಲಿಕ, ಯುವಕ ಕೊಟ್ಟಿದ್ದ ನೋಟಿನ ಮೇಲೆ ಮತ್ತೊಮ್ಮೆ ಕಣ್ಣಾಡಿಸಿದ. ಮುಟ್ಟಿ ನೋಡಿದ. ಆತನ ಕಟ್ಟುಗಳಿಗೆ ಈ ಹೊಸ ನೋಟಿನ ಕಾಗದ ತುಂಬಾ ತೆಳುವಾಗಿರುವುದೂ, ಮುದ್ರಣ ಸ್ವಲ್ಪ ಅಸ್ಪಷ್ಟವಾಗಿರುವುದು ತೋರಿತು. ಅಷ್ಟರಲ್ಲಿ ಪೋಲೀಸ್ ಅಧಿಕಾರಿ ಮಿತ್ರರೊಬ್ಬರು ಕಾಫಿ ಕುಡಿಯಲು ಅಲ್ಲಿಗೆ ಬಂದರು. ಮಾಲಿಕ ಅವ-ರನ್ನು ಬದಿಗೆ ಕರೆದು ತನ್ನ ಅನುಮಾನ ತೋಡಿ ಕೊಂಡು ಹೊರಗೆ ಅಂಗಡಿಯ ಬಳಿ ನಿಂತಿದ್ದ ಯುವಕರನ್ನು ತೋರಿಸಿದ. ಪೋಲೀಸ್ ಅಧಿಕಾರಿಗೂ ಅನುಮಾನ ಬಂದು ಯುವಕರತ್ತ ನೋಡಿದರು. ಇವರಿಬ್ಬರೂ ಮಾತನಾಡುತ್ತ ತಮ್ಮ ಕಡೆ ನೋಡುತ್ತಿರುವುದನ್ನು ಕಂಡು, ಆ ಯುವಕರು ಅಲ್ಲಿಂದ ಧಾವಿಸಲು ತಯಾರಾದರು. ಆದರೆ ಪೋಲೀಸ್ ಅಧಿಕಾರಿ ಆಗಲೇ ಅವರನ್ನು ಸಮೀಪಿಸಿದ್ದರು. ಈಗ ಅವರಿಬ್ಬರೂ ನಿಜಕ್ಕೂ ಕಂಗಾಲಾದರು. ಅಧಿಕಾರಿಯ ಹದ್ದಿನ ಕಣ್ಣಿಗೆ ಅವರ ತಳಮಳ ಕಂಡಿತು. ಇಬ್ಬರನ್ನೂ ಸಮೀಪದ ಪೋಲೀಸ್ ಸ್ಟೇಷನ್ನಿಗೆ ತಮ್ಮೊಂದಿಗೆ ಬರಲು ಹೇಳಿದರು.

ಅಲ್ಲಿ ನೋಟಿನ ಕತೆ ಹೊರಬಿತ್ತು. ಇಬ್ಬರ ಬಳಿಯಲ್ಲೂ ಖೋಟಾ ನೋಟಿನ ದೊಡ್ಡ ಸಂಗ್ರಹವೇ ಇತ್ತು. ಇವರಿಬ್ಬರೂ ಖೋಟಾ ನೋಟಿನ ಚಲಾವಣೆಯ 'ಸರಪಳಿಯಲ್ಲಿನ ಕೊಂಡಿಗಳು.' ಇವರಿತ್ತ ಮಾಹಿತಿಯ ಆಧಾರದ ಮೇಲೆ ಬಲೆ ಬೀಸಿ, ಪೋಲೀಸರು ಈ ಖೋಟಾ ನೋಟುಗಳ ಮುದ್ರಣಾಲಯವನ್ನು ಪತ್ತೆ ಹಚ್ಚಿದರು.

ಹೋದ ವರ್ಷ ೨೦ ಡಾಲರ್ ಮೌಲ್ಯದ ಖೋಟಾ ನೋಟಿನ ತಯಾರಿಕೆಯಲ್ಲಿ ತೊಡಗಿದ್ದ ಮೂವರು ವಿದೇಶೀ ವಿದ್ಯಾರ್ಥಿಗಳನ್ನು ಧಾರ-ವಾಡದ ಪೋಲೀಸರು ಬಂಧಿಸಿದ್ದರು. ಬಡಾವಣೆಯೊಂದರಲ್ಲಿ ಬಾಡಿಗೆ ಮನೆಯಲ್ಲಿದ್ದ ಈ ವಿದ್ಯಾರ್ಥಿಗಳ ಸಂಶಯಾಸ್ಪದ ನಡವಳಿಕೆಯಿಂದ ಅನುಮಾನಗೊಂಡ ಸ್ಥಳೀಯ ಯುವಕ ಮಂಡಲಿಯ ಸದಸ್ಯರು ಪೋಲೀಸರಿಗೆ ಸುದ್ದಿ ಮುಟ್ಟಿಸಿದರು. ದಾಳಿ ನಡೆಸಿದಾಗ ಖೋಟಾ ನೋಟಿನ ಮುದ್ರಣ ಸಲಕರಣೆಗಳ ಸಹಿತ ಇವರು ಸಿಕ್ಕಿ ಬಿದ್ದರು.

ಎಲ್ಲಾ ಖೋಟಾ ನೋಟಿನ ತಯಾರಿ ಅಥವಾ ಚಲಾವಣೆಯ ಪ್ರಸಂಗಗಳು ಹೀಗೆ ಆಕಸ್ಮಿಕವಾಗಿ ಬಯಲಾಗುವುದು ಬಹು ಅಪರೂಪದ ಸಂಗತಿ. ಇದಕ್ಕೆ ಕಾರಣ ಸರಳ. ಖೋಟಾ ನೋಟನ್ನು ಆಕಸ್ಮಿಕವಾಗಿ ಪಡೆದ ಪ್ರತಿಯೊಬ್ಬನೂ

ಸಾಮಾನ್ಯವಾಗಿ ಅದನ್ನು ಮತ್ತೊಬ್ಬರಿಗೆ ದಾಟಿಸುವ ಅವಕಾಶಕ್ಕಾಗಿ ಕಾಯುತ್ತಾನೆಯೇ ಹೊರತು, ಸಂಬಂಧಿಸಿದ ಅಧಿಕಾರಿಗಳಿಗೆ, ಪೋಲೀಸರಿಗೆ ಅದನ್ನು ತಲಪಿಸುವುದು ಬಹಳ ಅಪರೂಪ. ತನ್ನ ಹಣ ನಷ್ಟ ಮಾಡಿಕೊಳ್ಳಲು, ತನಿಖೆಯಲ್ಲಿ ಸಾಕ್ಷಿ ಹೇಳಲು, ಪದೇ ಪದೇ ಪೋಲೀಸರಲ್ಲಿಗೆ ಹೋಗಿ ಬರಲು ಎಷ್ಟು ಜನ ಒಪ್ಪಿಯಾರು? ಇದು ಖೋಟಾ ನೋಟು ತಯಾರಕರಿಗೆ ಅನುಕೂಲ ಅಂಶ. ಆ ಖದೀಮರು ಒಮ್ಮೆ ನೋಟನ್ನು ಚಲಾವಣೆಗೆ ತಳ್ಳಿದರೆ ಸಾಕು, ಅದು ಪತ್ತೆಯಾಗುವಷ್ಟರಲ್ಲಿ ಎಲ್ಲಿಗೋ ಜಾರಿ ಬಿಡಬಹುದು.

ಬಹಳ ಪ್ರಾಚೀನ ಕಾಲದಿಂದ ಲೋಹಗಳನ್ನು ನಾಣ್ಯ ತಯಾರಿಕೆಯಲ್ಲಿ ಉಪಯೋಗಿಸುತ್ತ ಬಂದಿದ್ದಾರೆ. ಕ್ರಮೇಣ ಲೋಹಗಳ ಇತರ ಉಪಯೋಗ ಹೆಚ್ಚಾದ್ದರಿಂದ ಹಾಗೂ ನಾಣ್ಯಗಳನ್ನು ದೊಡ್ಡ ಪ್ರಮಾಣದಲ್ಲಿ ಒಯ್ಯುವುದು ಕಷ್ಟವಾದರಿಂದ, ಬೇರೆ ಮಾಧ್ಯಮವನ್ನು ವಿನಿಮಯ ಸಾಧನವನ್ನಾಗಿ ಉಪಯೋಗಿಸುವುದು ಅನಿವಾರ್ಯವಾಯ್ತು. ಹೀಗೆ, ಕಾಗದ ಚಲಾವಣೆಯ ಮಾಧ್ಯಮವಾಗಿ ಮುನ್ನೂರು ವರ್ಷಗಳಿಂದ ಬಳಕೆಯಲ್ಲಿದೆ. ಕಳೆದ ಶತಮಾನದ ಪೂರ್ವಾರ್ಧದಲ್ಲಿ ಇದರ ಬಳಕೆ ಹೆಚ್ಚಾಯಿತು. ಅದರ ಜೊತೆಗೇ ಖೋಟಾ ನೋಟುಗಳ ತಯಾರಕರ ಪೀಳಿಗೆಯೂ ಹುಟ್ಟಿಕೊಂಡಿತು.

ಜಿನೀವಾ ನಗರದಲ್ಲಿ ೧೯೨೯ರಲ್ಲಿ ಜರುಗಿದ ರಾಜತಾಂತ್ರಿಕ ಸಮ್ಮೇಳನವೊಂದರಲ್ಲಿ, ಖೋಟಾ ನಾಣ್ಯಗಳ ತಯಾರಕರಿಗೆ ಶಿಕ್ಷೆ ವಿಧಿಸಲು ಏಕ ರೂಪದ ಕಾಯ್ದೆ ಮಾಡಬೇಕೆಂದು ಜಗತ್ತಿನ ೩೨ ಪ್ರಮುಖ ರಾಷ್ಟ್ರಗಳು ನಿರ್ಣಯವೊಂದನ್ನು ಅಂಗೀಕರಿಸಿದವು. ಖೋಟಾ ನೋಟಿನ ಹಾವಳಿ ತಡೆಯುವ ಮುಖ್ಯ ಉದ್ದೇಶದಿಂದಲೇ ಜಾಗತಿಕ ಪೋಲೀಸ್ ಸಂಸ್ಥೆ 'ಇಂಟರ್‌ಪೋಲ್' ಸ್ಥಾಪನೆಯಾಯ್ತು ಎಂದು ಹೇಳಲಾಗಿದೆ.

ಪ್ರಾರಂಭದಲ್ಲಿ ಖೋಟಾ ನೋಟುಗಳ ಪತ್ತೆ ಹಚ್ಚುವ ಕೆಲಸ ತುಂಬಾ ಶ್ರಮದಾಯಕವೆನಿಸಿತ್ತು. ಇದಕ್ಕೆ ಕಾರಣ ನೋಟುಗಳ ಮುದ್ರಣವನ್ನು ಸರಕಾರ ಹಲವಾರು ಕಡೆ ಮಾಡುತ್ತಿದ್ದುದು. ಅಮೇರಿಕದಂಥ ದೇಶದಲ್ಲಿ ಇದು ಅನಿವಾರ್ಯವಾಗಿತ್ತು. ಒಂದೇ ಬೆಲೆಯ ನೋಟುಗಳು ಬೇರೆ ಬೇರೆ ಕಡೆ ಅಚ್ಚಾಗುವಾಗ ಬೇಕಾದಷ್ಟು ವ್ಯತ್ಯಾಸಗಳಿರುತ್ತಿದ್ದವು. ನಕಲಿ ನೋಟಿನ ತಯಾರಕರು ಈ ವ್ಯತ್ಯಾಸಗಳನ್ನು ತಮ್ಮ ಅನುಕೂಲಕ್ಕೆ ಉಪಯೋಗಿಸಿಕೊಂಡರು. ಈ ಖೋಟಾ ನೋಟಿನ ಹಾವಳಿಯಿಂದ ೧೯೩೩-೩೬ರ ಮೂರು ವರ್ಷದ ಅವಧಿಯಲ್ಲಿ, ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ಖೋಟಾ ನೋಟುಗಳಿಂದ ಜನರಿಗೆ ಸುಮಾರು ನಾಲ್ಕು ಲಕ್ಷ ಡಾಲರ್ ನಷ್ಟದ ವಂಚನೆಯಾಯಿತು.

ನಂತರ ಜನರನ್ನು ನಕಲಿ ನೋಟುಗಳ ವಂಚನೆಯಿಂದ ಪಾರು ಮಾಡಲು ಅಮೇರಿಕದ ಗುಪ್ತಚಾರ ಇಲಾಖೆ ೧೯೩೭ರಲ್ಲಿ "ನಿಮ್ಮ ನಾಣ್ಯ ಚಲಾವಣೆಯನ್ನು ತಿಳಿಯಿರಿ" ಎಂಬ ವ್ಯಾಪಕ ಕಾರ್ಯಕ್ರಮವನ್ನು ಆರಂಭಿಸಿತು. ಜನಸಾಮಾನ್ಯರಿಗೆ, ಸಾಚಾ ಮತ್ತು ಖೊಟ್ಟಿ ನೋಟುಗಳ ವ್ಯತ್ಯಾಸವನ್ನು ತಿಳಿ ಹೇಳುವುದೇ ಇವರ ಉದ್ದೇಶ. ಅದರ ಅಂಗವಾಗಿ ಮೂವತ್ತೆರಡು ಪುಟಗಳ ಪುಸ್ತಕವೊಂದನ್ನು ಮುದ್ರಿಸಿ, ಪ್ರಚಾರಕ್ಕೆ ಬಳಸಲಾಯಿತು. ಒಳ್ಳೆ ನೋಟುಗಳಲ್ಲಿ ವ್ಯಕ್ತಿಗಳ, ಕಟ್ಟಡಗಳ ಮುದ್ರಣ ಹೇಗೆ ಸ್ಪಷ್ಟವಾಗಿರುತ್ತವೆ, ಅತಿ ಸಣ್ಣ ಸರಳ ರೇಖೆಗಳು ಹೇಗೆ ಖಚಿತವಾಗಿ, ಸ್ಪಷ್ಟವಾಗಿರುತ್ತವೆ ಹಾಗೂ ನಕಲೀ ನೋಟುಗಳಲ್ಲಿ ಇವೆರಡೂ ಹೇಗೆ ಕಲಸುಮೇಲೋಗರವಾಗಿರುತ್ತವೆ ಎಂಬುದನ್ನು ಚಿತ್ರಗಳೊಂದಿಗೆ ವಿವರಿಸಲಾಗಿತ್ತು. 'ನಾಣ್ಯ ಚಲಾವಣೆಯ ವಿಧಾನ'ದ ಬಗ್ಗೆ ಚಲನ ಚಿತ್ರಗಳನ್ನು ನಿರ್ಮಿಸಿ, ಅವುಗಳನ್ನು ದೇಶದ ಎಲ್ಲೆಡೆಗಳಲ್ಲೂ ಸಾರ್ವಜನಿಕರಿಗೆ ಪ್ರದರ್ಶಿಸಲಾಯ್ತು. ಒಂದು ವೇಳೆ ನಕಲೀ ನಾಣ್ಯ ಅಥವಾ ನೋಟುಗಳು ಸಿಕ್ಕರೆ ನಾಗರಿಕರು ಏನು ಮಾಡಬೇಕು ಎಂಬುದರ ಬಗ್ಗೆ ಐದು ಅಂಶಗಳ ಸೂತ್ರವೊಂದನ್ನು ನಿರೂಪಿಸಿ, ಅದನ್ನು ವೃತ್ತಪತ್ರಿಕೆ ಹಾಗೂ ಬಾನುಲಿ ಮೂಲಕ ಸಾರ್ವಜನಿಕರಲ್ಲಿ ಪ್ರಚಾರ ಮಾಡಲಾಯಿತು. ಇವೆಲ್ಲ ಕಾರ್ಯಕ್ರಮ ಖೋಟಾ ನೋಟಿನ

ಖದೀಮರನ್ನು ಕಂಗಾಲು ಮಾಡಿದವು. ೧೯೩೪ರಲ್ಲಿ ಚಲಾವಣೆಯಾದ ಖೋಟಾ ನೋಟುಗಳ ಮೊತ್ತ ಕೆಲ ಸಾವಿರ ಡಾಲರುಗಳು. ಭಾರತದಲ್ಲೂ ಇಂಥ ಕಾರ್ಯಕ್ರಮ ಹಮ್ಮಿಕೊಳ್ಳುವುದು ಸೂಕ್ತ. ಒಂದು ದೇಶದ ನೋಟಿನಲ್ಲೆ ಸಾಚಾ ಯಾವುದು ನಕಲಿ ಯಾವುದು ಎಂದು ಗುರುತಿಸುವುದು ಕಷ್ಟವೆನಿಸುವಾಗ, ಬೇರೆ. ಬೇರೆ ದೇಶಗಳ ನೋಟುಗಳಲ್ಲಿ ಖೋಟಾ ನೋಟನ್ನು ಪತ್ತೆ ಹಚ್ಚುವುದು ಹೇಗೆ? ಈಗಿನ ಕಾಲದಲ್ಲಿ ಇತರ ದೇಶಗಳ ನೋಟುಗಳ ಬಗ್ಗೆ ಖಚಿತ ಜ್ಞಾನವು, ವಾಣಿಜ್ಯ ಪ್ರಪಂಚದಲ್ಲಿ ವ್ಯವಹರಿಸುವ ಹಲವರಿಗಾದರೂ ಇರಬೇಕಾದ್ದು ಅನಿವಾರ್ಯ. ಇವೆಲ್ಲವನ್ನೂ ಗಮನದಲ್ಲಿಟ್ಟು ಕೊಂಡು ಆಮ್‌ಸ್ಟರ್‌ಡ್ಯಾಂನ ಕೀಸಿಂಗ್ ಎಂಬುವವರು "ಖೋಟಾ ಮತ್ತು ಫೋರ್ಜರಿ ಪ್ರಕರಣಗಳ ದಾಖಲೆ" ಎಂಬ ನಿಯತಕಾಲಿಕದ ಪ್ರಕಟಣೆಯನ್ನು ೧೯೨೩ರಲ್ಲಿ ಆರಂಭಿಸಿದರು.

ಈ "ಖೋಟಾ ಮತ್ತು ಫೋರ್ಜರಿ ಪ್ರಕರಣಗಳ ದಾಖಲೆ" ಪ್ರಕಟಣೆಗೆ ಮುನ್ನ ಪೋಲೀಸರು, ಖೋಟಾ ನೋಟುಗಳನ್ನು ಪತ್ತೆ ಹಚ್ಚಿದಂತೆಲ್ಲಾ ಅವುಗಳ ವಿವರವನ್ನು ಒಂದು ರಿಜಿಸ್ಟರಿನಲ್ಲಿ ಬರೆದಿಟ್ಟುಕೊಳ್ಳುತ್ತಿದ್ದರು. ಈ ವಿವರಗಳು ಸಂಪೂರ್ಣವಾಗಿರುತ್ತಿರಲಿಲ್ಲ. ಅಲ್ಲದೆ ಬೇರೊಂದು ಖೋಟಾ ನೋಟು ಸಿಕ್ಕಾಗ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದರೂ ಗೊಂದಲವುಂಟು ಮಾಡುತ್ತಿತ್ತು. ಈ ರಿಜಿಸ್ಟರಿನ ದಾಖಲೆಗಳು ಎಲ್ಲಾ ಕಡೆಗೂ ಪೂರೈಕೆಯೂ ಆಗುತ್ತಿರಲಿಲ್ಲ. ಇದೆಲ್ಲದರಿಂದ ಬೇಸತ್ತ ಆಮ್‌ಸ್ಟರ್‌ಡ್ಯಾಂ ಪೋಲೀಸರು ಕೀಸಿಂಗರ ಮೊರೆ ಹೊಕ್ಕರು. ಆಗ ಕೀಸಿಂಗ್ ತಮ್ಮದೇ ಒಂದು ದಾಖಲೆ ಪತ್ರಾಗಾರ (ಕಾಂಟೆಂಪರರಿ ಆರ್ಕೈವ್ಸ್) ನಡೆಸುತ್ತಿದ್ದರು.

ಹಲವಾರು ದಿನಗಳ ನಿರಂತರ ಶ್ರಮದ ನಂತರ ಶ್ರೀ ಕೀಸಿಂಗ್ "ಖೋಟಾ ಮತ್ತು



ಧಾರವಾಡದಲ್ಲಿ ವಿದೇಶೀ ವಿದ್ಯಾರ್ಥಿಗಳು ೨೦ ಡಾಲರಿನ ನೋಟುಗಳನ್ನು ಮುದ್ರಿಸಲು ಬಳಸಿದ ಸಾಧನಗಳು

ಫೋರ್ಜರಿ ದಾಖಲೆ ಪುಸ್ತಕ"ದ ಮೊದಲ ಪ್ರತಿಯೊಂದನ್ನು ಸಿದ್ಧಪಡಿಸಿದರು. ಅದರಲ್ಲಿದ್ದ ಸಂಚಲಿತ ಸೂಚಿಪದ್ಧತಿ(ಕ್ಯುಮ್ಯುಲೇಟಿವ್ ಇಂಡೆಕ್ಸ್ ಸಿಸ್ಟಮ್)ಯಿಂದ ಪ್ರತಿಯೊಂದು ಹೊಸ ವಿವರವನ್ನು ಪ್ರಕಟಣೆಗಳಲ್ಲಿ ಸೇರಿಸಲು ಅನುಕೂಲವಿತ್ತು. ಹೀಗೆ ಈ ಪುಸ್ತಕ ಪ್ರಚಾರಕ್ಕೆ ಬಂತು.

ಈಗ ಈ ಪುಸ್ತಕವನ್ನು ಎರಡು ಬೇರೆ ಬೇರೆ ವಿಭಾಗಗಳನ್ನಾಗಿ ಮಾಡಿ ಪ್ರಕಟಿಸಲಾಗುತ್ತದೆ. ಮೊದಲ ವಿಭಾಗದ ಸಂಚಿಕೆ ಇಂಗ್ಲಿಷ್, ಫ್ರೆಂಚ್, ಜರ್ಮನ್ ಮತ್ತು ಸ್ಪ್ಯಾನಿಷ್ ಭಾಷೆಯಲ್ಲಿ ಪ್ರಕಟವಾಗುತ್ತದೆ. ಇದರಲ್ಲಿ ಪ್ರಪಂಚದ ಪ್ರತಿಯೊಂದು ದೇಶದ ನಾಣ್ಯ ಪದ್ಧತಿಯನ್ನೂ, ನೋಟು ನಾಣ್ಯಗಳ ಚಿತ್ರಗಳನ್ನೂ ಅವುಗಳ ಮೌಲ್ಯವನ್ನೂ ವಿವರಿಸಲಾಗುವುದು. ಈ ಸಂಚಿಕೆಗೆ ಯಾರು ಬೇಕಾದರೂ ಚಂದಾದಾರರಾಗಬಹುದು. ಎರಡನೆಯ ವಿಭಾಗದ ಸಂಚಿಕೆಯಲ್ಲಿ ಈ ಜಗತ್ತಿನ ಎಲ್ಲ ದೇಶಗಳ ಖೋಟಾ ನಾಣ್ಯ, ನೋಟುಗಳು, ಫೋರ್ಜರಿ ಮಾಡಿದ ಹುಂಡಿಗಳು ಮತ್ತು ದಾಖಲೆಗಳಲ್ಲಿ ಕಂಡುಬರುವ ನ್ಯೂನತೆ, ಕುಂದುಗಳನ್ನು ವಿವರವಾಗಿ ತಿಳಿಸಿರುತ್ತದೆ. ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಯಲ್ಲಿ ಮಾತ್ರ ಈ ಸಂಚಿಕೆ ಮುದ್ರಣಗೊಳ್ಳುತ್ತಿದ್ದು ಇದರ ಪ್ರತಿಗಳ ಹಂಚಿಕೆಗೆ ನಿರ್ಬಂಧಗಳಿವೆ. ಅದರ ಓದುಗರ ಸಂಖ್ಯೆ ನಿರ್ದಿಷ್ಟ ಹಾಗೂ ಸೀಮಿತ. ಜಾಗತಿಕ ಪೋಲೀಸ್ ಸಂಸ್ಥೆಯ ಮುಖ್ಯ ಕಾರ್ಯದರ್ಶಿಗಳಿಂದ ಲಿಖಿತ ಅನುಮತಿ ಪಡೆದವರನ್ನು ಮಾತ್ರ ಕೀಸಿಂಗ್ ಸಂಸ್ಥೆ ಚಂದಾದಾರರನ್ನಾಗಿ ತೆಗೆದುಕೊಳ್ಳುತ್ತದೆ ಅಷ್ಟೇ ಅಲ್ಲ, ಚಂದಾದಾರರೆಲ್ಲರ ಮೇಲೂ ನಿಗಾ ಇಟ್ಟಿರಲಾಗುತ್ತದೆ. ಜೊತೆಗೆ ಪ್ರತಿ ಸಂಚಿಕೆಯನ್ನೂ, ಅದು ಹಳೆಯದಾದರೂ ಜೋಪಾನವಾಗಿ ಕಾದಿರಿಸಲು ಹೇಳಲಾಗುತ್ತದೆ. ಇದರ ಬಗ್ಗೆ ಎಷ್ಟೆಲ್ಲ ಕಾಳಜಿ ವಹಿಸುವರೆಂಬ ಬಗ್ಗೆ ಒಂದು ಸಣ್ಣ ನಿದರ್ಶನ. ಒಮ್ಮೆ ಇಟಲಿಯ ಮಿಲಾನ್ ನಗರದ ಒಂದು ಪ್ರಮುಖ ಬ್ಯಾಂಕ್, ಹಳೆಯ ಸಂಚಿಕೆಗಳು ಕಳೆದುಹೋದವೆಂದೂ, ಆ ಸಂಚಿಕೆಗಳ ಬೇರೆ ಪ್ರತಿಗಳನ್ನು ಕಳುಹಿಸಬೇಕೆಂದೂ ಕೀಸಿಂಗ್ ಸಂಸ್ಥೆಗೆ ಮನವಿ ಮಾಡಿತು. ಆದರೆ ಪ್ರತಿಗಳನ್ನು ಪೂರೈಸುವ ಬದಲು ಸಂಸ್ಥೆ, ಇಂಟರ್‌ಪೋಲ್‌ಗೆ ಈ ವಿಷಯ ತಿಳಿಸಿತು. ತಕ್ಷಣ ಆ ಬಗ್ಗೆ ಪೂರ್ತಿ ತನಿಖೆ ನಡೆಸಲು ಸ್ಥಳೀಯ ಪೋಲೀಸರನ್ನು, ಇಂಟರ್‌ಪೋಲ್ ಕೇಳಿತು. ವಿವರ ತನಿಖೆಯ ನಂತರ ಕಳೆದುಹೋಗಿದ್ದ ಸಂಚಿಕೆಗಳ ಪ್ರತಿಗಳು ಬ್ಯಾಂಕಿನ ಹಳೆ ಕಡತಗಳ ಕೋಣೆಯಲ್ಲಿ ಸಿಕ್ಕವು. ಯಾವುದೋ ಹಳೇ ಕಾಗದವೆಂದು ತಿಳಿದು ಅವುಗಳನ್ನು ಅಲ್ಲಿರಿಸಲಾಗಿತ್ತು. ಮುದ್ರಣ, ಎನ್‌ಗ್ರೇವಿಂಗ್, ಡಿಸೈನಿಂಗ್ ಇತ್ಯಾದಿಗಳಲ್ಲಿ ಪರಿಣತರಾದ ಖೋಟಾ ನೋಟಿನ ಖದೀಮರಿಗೆ ಇವು ಸಿಕ್ಕಿದಲ್ಲಿ ಅವರು ತಮ್ಮ ಕಾರ್ಯ ಕೌಶಲವನ್ನು ಉತ್ತಮಪಡಿಸಿಕೊಳ್ಳಲು ಅವಕಾಶವಾಗಬಾರದು ಎಂದೇ ಇಷ್ಟೆಲ್ಲ ಕಾಳಜಿ.

ಯಾವುದಾದರೂ ಬ್ಯಾಂಕಿನವರಾಗಲಿ ಅಥವಾ ನಾಗರಿಕರಾಗಲಿ ಖೋಟಾ ನೋಟನ್ನು ಕಂಡುಹಿಡಿದು ಪೋಲೀಸರಿಗೆ ತಿಳಿಸಿ ನಂತರ ಏನಾಗುತ್ತದೆ? ಸ್ಥಳೀಯ ಪೋಲೀಸರು ತಮ್ಮಲ್ಲಿರುವ "ಖೋಟಾ ಮತ್ತು ಫೋರ್ಜರಿ ದಾಖಲೆಗಳು" ಸಂಚಿಕೆಯಲ್ಲಿ ಹುಡುಕಿ ಇಂಥಾ ನೋಟುಗಳು ಮುಂಚಿತವಾಗಿ ಸಿಕ್ಕಿದ್ದವೇ ಎಂದು ತಿಳಿದುಕೊಳ್ಳುತ್ತಾರೆ. ಪ್ರತಿಯೊಬ್ಬ ಖೋಟಾ ನೋಟಿನ ಖದೀಮನೂ ತನ್ನದೇ ಆದ ವಿಧಾನವನ್ನು ಅನುಸರಿಸುವುದರಿಂದ ಆಪಾದಿತ ಯಾರೆಂದು ಕಂಡುಕೊಳ್ಳಬಹುದು. ಒಂದು ವೇಳೆ ಈ ನೋಟಿನ ವಿವರಣೆ ಇಲ್ಲದಿದ್ದು ಅದು ಸಂಪೂರ್ಣ ಹೊಸ ರೀತಿಯದಾದರೆ ತಕ್ಷಣ ಬೇರೆ ರೀತಿಯಲ್ಲಿ ಕೆಲಸ ಆರಂಭ. ಸ್ಥಳೀಯ ಪೋಲೀಸರು ಆ ಖೋಟಾ ನೋಟನ್ನು ಸಂಪೂರ್ಣ ವಿವರಗಳೊಂದಿಗೆ ಆಯಾ ದೇಶದ ಖೋಟಾ ನಾಣ್ಯ ನಿರ್ಮೂಲೀಕರಣ ವಿಭಾಗಕ್ಕೆ ಕಳುಹಿಸುವರು. ಈ ವಿಭಾಗವು ಪರಿಶೀಲನೆಯ ನಂತರ ಅದನ್ನು ಆ ದೇಶದ ಇಂಟರ್‌ಪೋಲ್ ಬ್ಯೂರೋಗೆ ಕಳುಹಿಸುವುದು. ಇಲ್ಲಿಂದ ಮತ್ತಷ್ಟು ಅಮೂಲ್ಯ ವಿವರಗಳನ್ನೊಳಗೊಂಡ ಈ ಖೋಟಾ ನೋಟು ಸೈಂಟ್ ಕ್ಲಾಡ್‌ನಲ್ಲಿರುವ ಇಂಟರ್‌ಪೋಲ್ ಮುಖ್ಯ ಕಛೇರಿಯನ್ನು ತಲುಪುವುದು. ಅಲ್ಲಿರುವ ಸುಸಜ್ಜಿತ ಪ್ರಯೋಗಶಾಲೆಯಲ್ಲಿ ರಾಸಾಯನಿಕ ತಜ್ಞರು

ಆ ನೋಟಿನ ಕೂಲಂಕಷ ಪರೀಕ್ಷೆ ನಡೆಸಿ ಅವರ ಮೇಲಿನ ಚಿತ್ರಗಳ ಮತ್ತು ಅಕ್ಷರಗಳ ಮುದ್ರಣ, ಉಪಯೋಗಿಸಿರುವ ಬಣ್ಣ, ಕಾಗದ ಇವುಗಳ ನಿಖರವಾದ ಮಟ್ಟವನ್ನು ಅಳೆಯುವರು. ನಂತರ ಸಾಚಾ ನೋಟಿಗೂ ಈ ನೋಟೀಗೂ ಇರುವ ಪ್ರತಿಯೊಂದು ವ್ಯತ್ಯಾಸದ ವಿವರವನ್ನೂ, ಅದೆಷ್ಟೇ ಸಣ್ಣದಾಗಿರಲಿ, ನಮೂದಿಸಿ ಅದನ್ನು ಆಮ್‌ಸ್ಟರ್‌ಡ್ಯಾಂ ನಗರಕ್ಕೆ ಕಳುಹಿಸುವರು. ಅಲ್ಲಿ ಖೋಟಾ ನೋಟಿನ ಎರಡೂ ಬದಿಯ ಚಿತ್ರದ ಅಚ್ಚುಗಳು ಸಿದ್ಧವಾಗಿ ಮುದ್ರಣವಾಗುವುವು. ಕೆಲವೇ ಗಂಟೆಗಳಲ್ಲಿ ಖೋಟಾ ಮತ್ತು ಫೋರ್ಜರಿ ದಾಖಲೆಯ ಹೊಸ ಸಂಚಿಕೆಯೊಂದು ಸಿದ್ಧವಾಗಿ ಸಂಬಂಧಪಟ್ಟವರಿಗೆ ರವಾನೆಯಾಗುತ್ತದೆ.

೧೯೬೮ ರ ಅಕ್ಟೋಬರಿನಲ್ಲಿ ಆಫ್ರಿಕದ ಘಾನಾ ದೇಶದ ರಾಜಧಾನಿ ಅಕ್ರಾದಲ್ಲಿ ಐವತ್ತು ಅಮೇರಿಕನ್ ಡಾಲರಿನ ಖೋಟಾ ನೋಟು ಪೋಲೀಸರಿಗೆ ಸಿಕ್ಕಿತು. ಇಂಟರ್‌ಪೋಲ್ ವಿಚಾರಣೆಯಿಂದ ಅಂಥ ನೋಟು ಅದೇ ಮೊದಲ ಸಲ ಸಿಕ್ಕಿದ್ದು ಎಂದು ಖಚಿತವಾಯ್ತು. "ಖೋಟಾ ನೋಟು ಮತ್ತು ಫೋರ್ಜರಿ ದಾಖಲೆಗಳು" ಮೂಲಕ ಪ್ರಪಂಚದಾದ್ಯಂತ ಪೋಲೀಸರನ್ನು ಎಚ್ಚರಿಸಲಾಯ್ತು. ಅವರು ಇದರ ಮೇಲೆ ಹದ್ದಿನ ಕಣ್ಣು ಇಟ್ಟರು. ೧೯೬೯ರ ಆಗಸ್ಟ್‌ನಲ್ಲಿ ಸ್ವಿಸ್ ಪೋಲೀಸರು ಜಿನೀವಾ ನಗರದಲ್ಲಿ ಇಂಥವೇ ಇಪ್ಪತ್ತೊಂದು ನೋಟುಗಳನ್ನು ಪತ್ತೆ ಹಚ್ಚಿದರು. ಈ ನೋಟುಗಳನ್ನು ಯುರೋಪಿನ ಆಭರಣ ವ್ಯಾಪಾರಿಯೊಬ್ಬನಿಗೆ ನಾಲ್ಕು ಚಿನ್ನದ ಉಂಗುರ, ನಾಲ್ಕು ಕೈಗಡಿಯಾರಗಳ ಬೆಲೆಯ ಪಾವತಿ ಎಂದು ನೀಡಲಾಗಿತ್ತು. ಇವುಗಳನ್ನು ನೀಡಿದ ಇಬ್ಬರು ವ್ಯಕ್ತಿಗಳ ಚಹರೆ ಪಟ್ಟಿಯನ್ನು ಇಂಟರ್‌ಪೋಲ್‌ಗೆ ಕಳುಹಿಸಿದರು. ಈ ಚಹರೆಗೆ ಹೊಂದುವ ವ್ಯಕ್ತಿಯೊಬ್ಬ ಪಶ್ಚಿಮ ಜರ್ಮನಿಯ ವಿಸ್‌ಬೇಡನ್ ಎಂಬಲ್ಲಿ ಇದೇ ರೀತಿಯ ಐವತ್ತು ಡಾಲರ್ ಮೌಲ್ಯದ ನೋಟನ್ನು ತನ್ನ ಸ್ನೇಹಿತನೊಂದಿಗೆ ಹೋಟೆಲ್ ಬಿಲ್ ಪಾವತಿ ಮಾಡುವಾಗ ಕೊಟ್ಟಿದ್ದ. ಇವರಿಬ್ಬರಲ್ಲಿ ಒಬ್ಬನ ಹೆಸರು ಮೈಕ್ ಎಂದೂ ತಿಳಿಯಿತು. ಸಪ್ಟಂಬರ್‌ನಲ್ಲಿ ಹಾಲೆಂಡ್ ದೇಶದ ಹೇಗ್‌ನಲ್ಲಿ ಇಂಥಾ ಮೂವತ್ತೇಳು ನೋಟುಗಳ ಚಲಾವಣೆ ಬಗ್ಗೆ ಇಂಟರ್‌ಪೋಲ್ ಅಧಿಕಾರಿಗಳು ವರದಿ ಮಾಡಿದ್ದರು. ಆಮ್‌ಸ್ಟರ್‌ಡ್ಯಾಂ ನಗರದಲ್ಲೇ ಕೆಲ ಅಂಗಡಿಗಳಿಗೆ ಇಂಥ ನೋಟುಗಳನ್ನು ಇಬ್ಬರು ನೀಡಿದ್ದರು. ಹೆಚ್ಚಾಗಿ ಆಭರಣ ವ್ಯಾಪಾರಿಗಳಿಗೇ ಈ ಖೋಟಾ ನೋಟುಗಳನ್ನು ಕೊಡಲಾಗಿತ್ತು. ಮೈಕ್ ಮತ್ತು ಅವನ ಮಿತ್ರ ಆಮ್‌ಸ್ಟರ್‌ಡ್ಯಾಂ ಹೋಟೆಲ್ ಒಂದರಲ್ಲಿ ತಂಗಿದ್ದರೆಂದೂ, ಇವರಿಬ್ಬರೂ ಆಫ್ರಿಕದ ಲಿಬಿಯಾ ದೇಶದವರೆಂದೂ ಪತ್ತೇದಾರರ ಪರಿಶೀಲನೆಯಿಂದ ಗೊತ್ತಾಯಿತು. ಜಿನೀವಾ ಪೋಲೀಸರಿಗೆ ಇದು ತಿಳಿದೊಡನೆ ಅವರು ಆಭರಣ ವ್ಯಾಪಾರಿಗೆ ಖೋಟಾ ನೋಟುಗಳನ್ನು ನೀಡಿದ ಇಬ್ಬರು ಹೋಟೆಲಿನಲ್ಲಿ ತಂಗಿದ್ದರು ಎಂದು ಖಚಿತಪಡಿಸಿಕೊಂಡರು. ಈ ಖೋಟಾ ನೋಟಿನ ಚಲಾವಣೆಗಾರರ ವಿವರ ತಿಳಿದ ನಂತರ ಬಲೆಯನ್ನೊಡ್ಡಲಾಯ್ತು. ಸಪ್ಟಂಬರ್ ತಿಂಗಳ ಕೊನೆಗೆ ಇವರಿಬ್ಬರೂ ಲಿಬಿಯಾಕ್ಕೆ ವಾಪಸಾದರು. ಅವರು ವಿಮಾನ ನಿಲ್ದಾಣದಲ್ಲಿ ಇಳಿಯುತ್ತಿದ್ದಂತೆ ಬಂಧಿಸಿ ಅವರಲ್ಲಿದ್ದ ಐವತ್ತು ಡಾಲರ್ ಮೌಲ್ಯದ ನೂರಾ ಹದಿನೆಂಟು ಖೋಟಾ ನೋಟುಗಳನ್ನು ವಶಪಡಿಸಿಕೊಳ್ಳಲಾಯ್ತು. ಪ್ರಶ್ನಿಸಿದಾಗ ಅವರಲ್ಲೊಬ್ಬ ವಿವರಗಳನ್ನೆಲ್ಲಾ ತಿಳಿಸಿದ. ಈ ನೋಟುಗಳನ್ನು ಅವನು ಲೆಬನಾನ್ ದೇಶದ ಬೀರೂತ್ ನಗರಕ್ಕೆ ವ್ಯಾಪಾರಕ್ಕೆ ಹೋಗಿದ್ದಾಗ ಕೊಂಡಿದ್ದ. ತನ್ನ ನೆಂಟನೊಬ್ಬನ ಸಹಾಯದಿಂದ ಅವುಗಳನ್ನು ಪಶ್ಚಿಮ ಯೂರೋಪಿನ ಪಟ್ಟಣಗಳಲ್ಲಿ ಚಲಾವಣೆ ಮಾಡಲು ಪ್ರಯತ್ನಿಸಿದ್ದ. ಇಬ್ಬರ ಮೇಲೂ ಆರೋಪಗಳು ಸಿದ್ಧವಾಗಿ ಸೆರೆಮನೆಗೆ ಕಳುಹಿಸಲ್ಪಟ್ಟರು.

೧೯೭೩ರ ಅಕ್ಟೋಬರ್‌ನಲ್ಲಿ ಆಂಟ್‌ವರ್ಪ್ ಪೋಲಿಸರು ವಂಚಕರ ಜಾಲವೊಂದನ್ನು ಹಿಡಿದಾಗ ಒಬ್ಬನ ಬಳಿ ಇಪ್ಪತ್ತೊಂಬತ್ತು ಸಾವಿರ ಡಾಲರ್ ಮೌಲ್ಯದ ನೋಟುಗಳು ಸಿಕ್ಕವು ಮತ್ತು ಅಲ್ಲಿಯ ಮುದ್ರಣಾಲಯವೊಂದರಲ್ಲಿ ಎಂಟು ಲಕ್ಷ ಡಾಲರ್ ಮೌಲ್ಯದ ನೋಟುಗಳು ಪತ್ತೆಯಾದವು. ಆದರೆ ಡಚ್ ಪೋಲಿಸರು ೧೯೭೩ರ ಏಪ್ರಿಲ್‌ನಲ್ಲಿ ಪತ್ತೆ

ಮಾಡಿದ ಸುಮಾರು ಒಂದು ಕೋಟಿ ಡಾಲರ್ ಮೊತ್ತದ ಖೋಟಾ ನೋಟುಗಳ ಪ್ರಕರಣ ಅನೇಕರನ್ನು ತಲ್ಲಣಗೊಳಿಸಿತು. ಈ ನೋಟುಗಳನ್ನು ಪೂರ್ವ ಜರ್ಮನಿಗೆ ಒಯ್ಯಲು ತಯಾರಿ ನಡೆದಿತ್ತು.

ಸಣ್ಣ ದೇಶವೊಂದಕ್ಕೆ ಖೋಟಾ ನೋಟಿನ ಹಾವಳಿ ದೊಡ್ಡ ಆಪತ್ತನ್ನು ತರಬಲ್ಲದು. ಅದರ ಹಣಕಾಸಿನ ವ್ಯವಸ್ಥೆ ಇದರಿಂದ ಬುಡಮೇಲಾಗುವುದು. ೧೯೫೩ರಲ್ಲಿ ಸಿರಿಯಾ ಮತ್ತು ಲೆಬನಾನ್ ದೇಶಗಳ ರಿಜರ್ವ್ ಬ್ಯಾಂಕುಗಳು ತಮ್ಮ ದೇಶದ ಒಂದು ನೂರು ಪೌಂಡ್ ಮೌಲ್ಯದ ನೋಟುಗಳ ಇಡೀ ಸರಣಿಯನ್ನು ಚಲಾವಣೆಯಿಂದ ಸಂಪೂರ್ಣ ಸ್ಥಗಿತಗೊಳಿಸಬೇಕಾಯ್ತು. ಕಾರಣ ಈ ನೋಟುಗಳ ಪ್ರತಿರೂಪದ ಖೋಟಾ ನೋಟುಗಳಲ್ಲಿ ವ್ಯತ್ಯಾಸ ಬಹು ಸೂಕ್ಷ್ಮವಾಗಿತ್ತು. ಜನಸಾಮಾನ್ಯರು ಬೇಸ್ತು ಬೀಳುವ ಸಂಭವವೇ ಬಹಳವಾಗಿತ್ತು.

ಖೋಟಾ ನೋಟಿನ ಖದೀಮರಿಗೆ ಹೆಚ್ಚು ಆಸಕ್ತಿ ಇರುವುದು ಜಗತ್ತಿನ ದೃಢ ನಾಣ್ಯಗಳೆಂದು ಹೆಸರುಗಳಿಸಿರುವವುಗಳಲ್ಲಿ ಎಂಬುದು ಈಗ ಸಾಬೀತಾಗಿದೆ. ಜಗತ್ತಿನ ಎಲ್ಲೆಡೆಗಳಲ್ಲಿ ಜನ ಸ್ವೀಕರಿಸಲು ಒಪ್ಪುವ ಐದು, ಹತ್ತು, ಮತ್ತು ಇಪ್ಪತ್ತು ಡಾಲರಿನ ಅಮೆರಿಕನ್ ನೋಟುಗಳು, ಸ್ವಿಟ್ಸರ್‌ಲೆಂಡ್‌ದ ಕ್ರೋನರ್‌ಗಳು, ಜಪಾನಿನ ಯೆನ್, ಜರ್ಮನಿಯ ಮಾರ್ಕ್ ನೋಟುಗಳು ಜಗತ್ತಿನ ಅರ್ಧಕ್ಕೂ ಹೆಚ್ಚು ಖೋಟಾ ನೋಟು ತಯಾರಕರ ಮುಖ್ಯ ಆಕರ್ಷಣೆಯಾಗಿವೆ ಎಂದು ಹೇಳಬಹುದು.

ಖೋಟಾ ನೋಟಿನ ತಯಾರಕರಿಗೆ ವಿಧಿಸಬಹುದಾದ ಶಿಕ್ಷೆ ಎಲ್ಲಾ ದೇಶಗಳಲ್ಲೂ ಉಗ್ರವಾಗಿದೆ. ಇಂಗ್ಲೆಂಡಿನ ೧೯೮೧ ರ ನಾಣ್ಯ ಚಲಾವಣೆ ಕಾಯ್ದೆ ಅನ್ವಯ ಖೋಟಾ ನೋಟು ನಾಣ್ಯ ತಯಾರಕರಿಗೆ ಮತ್ತು ಅವರ ಸಹಾಯಕರಿಗೆ ೩ ರಿಂದ ೧೪ ವರ್ಷ ಕಠಿಣ ಶಿಕ್ಷೆ ವಿಧಿಸಲು ಅವಕಾಶವಿದೆ. ಅಮೆರಿಕದಲ್ಲಿ ಇಂಥ ಅಪರಾಧಗಳಿಗೆ ಐದು ಸಾವಿರ ಡಾಲರ್ ದಂಡ ಮತ್ತು ಹದಿನೈದು ವರ್ಷದ ವರೆಗೆ ಕಠಿಣ ಶಿಕ್ಷೆ ವಿಧಿಸಬಹುದು.

ಭಾರತೀಯ ದಂಡ ಸಂಹಿತೆ ಕಲಂ ೨೩೨ರ ಪ್ರಕಾರ, ಖೋಟಾನಾಣ್ಯ ತಯಾರಕರಿಗೆ ಜೀವಾವಧಿ ಶಿಕ್ಷೆ, ದಂಡ ವಿಧಿಸಬಹುದು. ಖೋಟಾ ನಾಣ್ಯ ಅಥವಾ ನೋಟೆಂದು ತಿಳಿದ ನಂತರವೂ ಅದರ ಚಲಾವಣೆಗೆ ಯತ್ನಿಸಿದರೆ, ೨೩೯ ಹಾಗೂ ೨೪೦ನೆಯ ಕಲಂ ಪ್ರಕಾರ ಎರಡರಿಂದ ಐದು ವರ್ಷಗಳ ಶಿಕ್ಷೆ ಹಾಗೂ ಆ ಖೋಟಾ ನಾಣ್ಯದ ಮುಖ ಬೆಲೆಯ ಹತ್ತು ಪಟ್ಟನ್ನು ದಂಡ ತೆರಬೇಕಾಗುವುದು. ೨೩೭ನೇ ಕಲಮಿನ ಪ್ರಕಾರ ಯಾವುದೇ ದೇಶದ ಖೋಟಾ ನಾಣ್ಯವನ್ನು, ಗೊತ್ತಿದ್ದೂ ಭಾರತದಲ್ಲಿ ಚಲಾವಣೆಗೋಸ್ಕರ ತಂದರೆ ಮೂರುವರ್ಷಗಳ ಕಠಿಣ ಶಿಕ್ಷೆ ಅನುಭವಿಸಬೇಕಾಗುವುದು.

ಇಷ್ಟೆಲ್ಲ ನಿರ್ಬಂಧಗಳಿದ್ದರೂ ನಕಲೀ ನೋಟುಗಳ ತಯಾರಿಕೆ ಆಕರ್ಷಣೀಯವಾಗಲು ಕಾರಣ ಅತಿ ಸುಲಭವಾಗಿ ಶ್ರೀಮಂತರಾಗುವ ಕನಸು, ಹಣದ ಆಮಿಷ ಅಷ್ಟೆ.

ನಿರಂತರ ಎಚ್ಚರಿಕೆ, ಸಮಯಪ್ರಜ್ಞೆ ಇವು ಖೋಟಾನೋಟಿನ ಹಾವಳಿ ತಡೆಯಲು ಮುಖ್ಯವಾಗಿ ಬೇಕಾದವು. 'ಖೋಟಾನೋಟು ಮತ್ತು ಫೋರ್ಜರಿ ದಾಖಲೆ' ನಿಯತಕಾಲಿಕ ಈ ವಿಷಯದಲ್ಲಿ ಅತ್ಯುತ್ತಮ ನೆರವು ನೀಡುತ್ತಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈ ನಿಯತಕಾಲಿಕ ೧೯೪೭ರಿಂದ ೧೯೭೩ರ ವರೆಗೆ ಪ್ರಪಂಚದ ತೊಂಭತ್ತೊಂದು ದೇಶಗಳಲ್ಲಿ ಚಲಾವಣೆ ಮಾಡಲಾಗಿದ್ದ ಆರು ಸಾವಿರದ ಒಂದು ನೂರಾ ಎಂಟು ಖೋಟಾ ನೋಟು ಹಾಗೂ ನಾಣ್ಯಗಳ ವಿವರ ನೀಡಿದೆ.

ಖೋಟಾನೋಟಿನ ಚಲಾವಣೆಯಿಂದ ನಮ್ಮೆಲ್ಲರಿಗೂ ತೊಂದರೆಯಾಗುತ್ತದೆ ಎಂಬ ಮನೋಭಾವ ಸಾರ್ವಜನಿಕರಲ್ಲಿ ಬೆಳೆದು, ಅದರ ನಿವಾರಣೆಗೆ ಸಹಕರಿಸಿದರೆ ಈ ಪಿಡುಗನ್ನು ಇಲ್ಲವಾಗಿಸಲು ಸಾಧ್ಯವಾದೀತು. ⊙

# ಇದುವೇ ಜೀವ ಇದು ಜೀವನ

ಕರ್ನಾಟಕದ ಹೆಸರಾಂತ ವ್ಯವಸಾಯಿ ನಾಟಕಕಾರರೆನಿಸಿದ್ದ ಸಿರಹಟ್ಟಿ ವೆಂಕೋಬರಾಯರು ನನ್ನ ಸೋದರಮಾವ. ಅವರ ಕಂಪನಿ ಒಮ್ಮೆ ರಾಮದುರ್ಗದಲ್ಲಿ ಬೀಡುಬಿಟ್ಟಾಗ ನಾನು ಅವರೊಡನೆ ಕೆಲ ದಿನ ಇದ್ದೆ. ಬ್ರಿಟಿಶ್ ಸಾಮ್ರಾಜ್ಯದ ಅಂದಿನ ದಿನಗಳಲ್ಲಿ ದೇಶೀಯ ಸಂಸ್ಥಾನಗಳಲ್ಲಿ 'ನರಗುಂದ ಬಂಡಾಯ', 'ಕಿತ್ತೂರ ಚೆನ್ನಮ್ಮ', 'ಝಾಂಸಿ ಲಕ್ಷ್ಮೀಬಾಯಿ'ಗಳಂಥ ನಾಟಕಗಳನ್ನು ಆಡಲು ಅನುಮತಿ ಕೊಡಲು ಹಿಂಜರಿಯುತ್ತಿದ್ದರು.

ನಾನಲ್ಲಿದ್ದಾಗಲೇ ಬ್ರಿಟಿಶ್ ಸರಕಾರದ ಪ್ರತಿನಿಧಿ ರಾಮದುರ್ಗಕ್ಕೆ ಬಂದಿದ್ದರು. ವೆಂಕೋಬರಾಯರು ಸಂತೆಯ ದಿನ 'ಕಿತ್ತೂರ ಚೆನ್ನಮ್ಮ'ವನ್ನು ಆಡುವುದಾಗಿ ಭರ್ಜರಿ ಪ್ರಚಾರ ಮಾಡಿಬಿಟ್ಟರು. ಜನತೆಗೆಲ್ಲ ಆಶ್ಚರ್ಯ. ಪೊಲಿಟಿಕಲ್ ಏಜಂಟ್ ಸಾಹೇಬರು ಊರಲ್ಲಿ ಬೀಡುಬಿಟ್ಟಾಗ ಇವರು ಇಂಥ 'ರಾಜದ್ರೋಹಿ' ನಾಟಕವನ್ನು ಹೇಗೆ ಆಡುವರೆಂಬ ಕುತೂಹಲ. ಕೆಲವರು ಹಿತಚಿಂತಕರು ಅದಕ್ಕಾಗಿ ಸರಕಾರದಿಂದ ಪರವಾನಗಿ ಪಡೆದಿದ್ದೀರಾ? ಎಂದು ವೆಂಕೋಬರಾಯರನ್ನು ಕೇಳಿಯೂ ಹೋದರು. ಅದಕ್ಕಾಗಿ ವ್ಯವಸ್ಥೆಯಾಗಿದೆಯೆಂದು ವೆಂಕೋಬರಾಯರು ಸಮಾಧಾನ ಹೇಳುತ್ತಿದ್ದರು.

ನಾಟಕದ ದಿನ ಬೆಳಿಗ್ಗೆದ್ದು ಪೊಲಿಟಿಕಲ್ ಏಜೆಂಟರವರಲ್ಲಿಗೆ ಸ್ವತಃ ಹೋಗಿ ವೆಂಕೋಬರಾಯರು ತಾವು ಪ್ರದರ್ಶಿಸಲಿದ್ದ ನಾಟಕದ ಹೆಸರು ಹೇಳದೇ ಅವರನ್ನು ಅವರ ಕುಟುಂಬ ಸಮೇತ ನಾಟಕಕ್ಕೆ ಬರಬೇಕೆಂದು ಆಮಂತ್ರಿಸಿ ಒಪ್ಪಿಸಿಕೊಂಡು ಬಂದರು.

ಅಂದು ನಾಟಕಕ್ಕೆ ವಿಪರೀತ ಗದ್ದಲ. ನಾಟ್ಯಗೃಹದಲ್ಲಿ ಪ್ರೇಕ್ಷಕರು ಕಿಕ್ಕಿರಿದು ತುಂಬಿದರೂ ಹೊರಗೆ ಇನ್ನೂ ಭಾರೀ ದಟ್ಟಣೆಯಿತ್ತು. ಹತ್ತು ರೂಪಾಯಿ ಕೊಟ್ಟಾದರೂ ನಾಟಕ ನೋಡಲೇಬೇಕೆಂಬ ಹವ್ಯಾಸದವರೂ ಅಂದು ಅಲ್ಲಿದ್ದರು. ಪೊಲಿಟಿಕಲ್ ಏಜಂಟ್ ಸಾಹೇಬರೇ ನಾಟಕಕ್ಕೆ ಬರುವರೆಂದಾಗ ಪೋಲೀಸರೂ ಸಾಕಷ್ಟು ಸಂಖ್ಯೆಯಲ್ಲಿ ಅಲ್ಲಿದ್ದರು. ಆದರೂ ಅವರಿಗೆ ಜನರನ್ನು ನಿಯಂತ್ರಿಸುವುದು ಕಷ್ಟವಾಗತೊಡಗಿತು. ವೆಂಕೋಬರಾಯರೇ ಬಂದು ಒಂದು ಸೂಚನೆಯನ್ನು ಪೋಲೀಸರಿಗೆ ನೀಡಿದರು. ಥೇಟರಿನ ಹಿಂದಿನ ಗೋಡೆ(ತಟ್ಟೆಯದು)ಯನ್ನು ಅಂದು ಕೀಳಿಸಿಬಿಡುವದಾಗಿಯೂ ಅಲ್ಲಿಗೆ ಜನರನ್ನು ಬಿಟ್ಟು ಮುಂದೆ ಗದ್ದಲವಾಗದಂತೆ ಎಚ್ಚರ ವಹಿಸಬೇಕೆಂದೂ ಸೂಚಿಸಿದರು. ಅದರಂತೆ ತಲಾ ಹತ್ತು ರೂಪಾಯಿ ಟಿಕೆಟ್ಟು ಪಡೆದ ಜನರೆಲ್ಲ ಹಿಂದೆ ಹೋಗಿ ನಿಲ್ಲಬೇಕಾಯಿತು. ಆದರೂ ಗದ್ದಲ ಕಡಿಮೆಯಾಗದಾದಾಗ ದೇವರ ಮೇಲೆ ಭಾರ ಹಾಕಿ ನಾಟಕವನ್ನು ಪ್ರಾರಂಭಿಸಿಬಿಟ್ಟರು.

ಆದರೆ ಅದಕ್ಕೆ ಮುಂಚೆ ಸರಕಾರದಿಂದ ಅನುಮತಿ ಪಡೆಯುವ ಬದಲು ವೆಂಕೋಬರಾಯರು ಅಂದಿನ ಅತಿಥಿಗಳಾಗಿದ್ದ ಸಾಹೇಬ–ಸಾಹೇಬಿಣಿಯರನ್ನು ಗ್ರೀನ್ ರೂಮಿನಲ್ಲಿ ಕರೆದೊಯ್ದು ಅವರ ಬಾಯಿ ರುಚಿಗೆ ಸಾಕಷ್ಟು ಖಾದ್ಯಗಳನ್ನೂ ಮದ್ಯಾದಿಗಳನ್ನೂ ಯಥೇಚ್ಛ ನೀಡಿದರು. ಸಾಹೇಬರಿಗೆ ಮತ್ತೇರುವಷ್ಟು ಹೊತ್ತು ಕಾಯ್ದು ಅನಂತರವೇ ಅವರನ್ನೂ ಅವರ ಧರ್ಮಪತ್ನಿಯನ್ನೂ ಉಚಿತ ಆಸನಗಳಲ್ಲಿ ಒಯ್ದು ಕೂಡಿಸಲು ವೆಂಕೋಬರಾಯರು ಮರೆಯಲಿಲ್ಲ. ಸಾಹೇಬರೇ ಸ್ವತಃ ನಾಟಕ ನೋಡುತ್ತಿರುವಾಗ (ಏನು ನೋಡಿದರೋ ದೇವರೇ ಬಲ್ಲ!) ವೆಂಕೋಬರಾಯರನ್ನು ಪ್ರಶ್ನಿಸುವ ಎದೆಗಾರಿಕೆ ಯಾವ ಅಧಿಕಾರಿಯಲ್ಲಿತ್ತು?

—ನಾಗೇಶ್ವರರಾವ್ ಹಡಗಲಿ

ಇದು ಮದರಾಸಿನಲ್ಲಿ ಒಂದು ಹುಡುಗರ ಹಾಸ್ಟೆಲಿನಲ್ಲಿ ನಡೆದ ಸ್ವಾರಸ್ಯ.

ಇಬ್ಬರು ಹುಡುಗರು ಒಬ್ಬ ಹುಡುಗಿಯನ್ನು ಹಾಸ್ಟೆಲಿನೊಳಗೆ ಸ್ಮಗಲ್ ಮಾಡಿ ತರಲು ಯೋಚಿಸಿದರು. ಅವಳಿಗೆ ಹುಡುಗನಂತೆ ವೇಷ ಹಾಕಿದರು. ಷರಟು, ಪ್ಯಾಂಟು, ಪೂಸು ಎಲ್ಲ ಹಾಕಿದರು. ಉಬ್ಬು–ತಗ್ಗುಗಳು ಮುಚ್ಚುವಂತೆ ಮೇಲೆ ಒಂದು ಉದ್ದನೆಯ ಕೋಟು, ಕೇಶರಾಶಿಯನ್ನು ಮುಚ್ಚಲು ಒಂದು ಹ್ಯಾಟು, ಕಣ್ಣಿಗೆ ಕಪ್ಪು ಕನ್ನಡಕ. ಫ್ಯಾನ್ಸಿ ಡ್ರೆಸ್ ಸ್ಪರ್ಧೆಯ

ಫ್ಯಾಂಟಮ್ ಅಥವಾ ಷರ್ಲಾಕ್ ಹೋಮ್ಸ್‌ನಂತೆ ತುಂಬ ವಿಚಿತ್ರವಾಗಿ ಕಾಣುತ್ತಿತ್ತು. ಇಷ್ಟೆಲ್ಲ ಸಾಲದೆಂಬಂತೆ, ಗಂಡಸುತನವನ್ನು ಇನ್ನೂ ಒತ್ತಿ ತೋರಿಸಲು ಒಂದು ಸಿಗರೇಟನ್ನು ಬೇರೆ ಹಚ್ಚಿ ಅವಳ ಬಾಯುಲ್ಲಿಟ್ಟರು. ಇದೇ ಅವರಿಗೆ ಕುತ್ತು ತಂದದ್ದು.

ಕಳ್ಳನ ಮನಸ್ಸು ಹುಳ್ಳಗೆ ಅಂದ ಹಾಗೆ ಇಬ್ಬರೂ ಮುಂದಾಗಿಯೇ ಕೋಣೆಗೆ ಹೋಗಿ, ಒಂದೈದು ನಿಮಿಷ ಬಿಟ್ಟು ಒಬ್ಬಳೇ ಬರುವಂತೆ ಅವಳಿಗ ಹೇಳಿದ್ದರು. ಅದರಂತೆ ಸ್ವಲ್ಪ ಹೊತ್ತಿನ ಬಳಿಕ ಈ ಗಂಡು ವೇಷಧಾರಿ ಹೆಣ್ಣು ಕಾರಿಡಾರಿನಲ್ಲಿ ಹಾದು ತನ್ನ ಗೆಳೆಯರ ರೂಮಿನ ಕಡೆ ಹೊರಟಿತ್ತು. ದಾರಿಯುಲ್ಲೊಂದು ರೂಮು. ಅದರ ಬಾಗಿಲು ಅರ್ಧ ತೆಗೆದಿತ್ತು. ಒಳಗಡೆ ಮಿತ್ರಮಂಡಳಿಯೊಂದು ಭಜನೆ ಮಾಡುತ್ತಿತ್ತು (ಇಸ್ಪೀಟಾಟ). ಫ್ಯಾಂಟಮ್‌ನ ಗ್ರಹಚಾರ ಸರಿಯಿದ್ದಿಲ್ಲ ಅಂತ ಕಾಣುತ್ತದೆ. ಒಳಗಿನ ಮಂಡಲಿಯುಲ್ಲೊಬ್ಬ ಸಿಗರೇಟು ಸೇದಲು ತೆಗೆದ, ಆದರೆ ಬೆಂಕಿ ಪೆಟ್ಟಿಗೆ ಖಾಲಿಯಾಗಿತ್ತು. ದುರದೃಷ್ಟವಶಾತ್ ಉಳಿದವರ ಯಾರ ಹತ್ತಿರವೂ ಇದ್ದಿಲ್ಲ. ಅದೇ ಸಮಯಕ್ಕೆ ಸರಿಯಾಗಿ ಷರ್ಲಾಕ್ ಹೋಮ್ಸ್ ಬಾಯುಲ್ಲಿ ಸಿಗರೇಟು ಕಚ್ಚಿಕೊಂಡು ಬಾಗಿಲೆದುರು ಹೋದ. ತಕ್ಷಣ ಇವನು ಕೂಗಿದ- "ಡೇಯ್, ಕೊಂಜಂ ಡೀ ಕುಡುಡಾ (ಲೇ, ಸ್ವಲ್ಪ ಬೆಂಕಿ ಕೊಡೋ)". ಉತ್ತರ ಬಾರದಿದ್ದನ್ನು ನೋಡಿ, ಇವನೇ ಅವಸರದಿಂದ ಎದ್ದು ಹೊರಕ್ಕೋಡಿದ, ಸಿಗರೇಟು ಹತ್ತಿಸಿಕೊಳ್ಳಲಿಕ್ಕೆ. ಅವನು ಕಂಡದ್ದು ಫ್ಯಾಂಟಮನ ರನ್ನಿಂಗ್ ರೇಸ್. ಆಶ್ಚರ್ಯದಿಂದ ನೋಡುತ್ತಿದ್ದಂತೆ, ಆ ಗಡಿಬಿಡಿಯಲ್ಲಿ ಫ್ಯಾಂಟಮ್ ಹ್ಯಾಟೇ ಬಿದ್ದು ಹೋಗಬೇಕೆ! —ವಿಜಯ

ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗದ ಚಿನ್ನದ ಹಬ್ಬದ ಪ್ರಯುಕ್ತ ಶೇಕಡಾ ೫೦ರ ರಿಯಾಯಿತಿ ದರದಲ್ಲಿ ಪುಸ್ತಕಗಳ ಮಾರಾಟವನ್ನು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದರು. ಬೇರೆಡೆ ದೊರೆಯದ ಹಲವಾರು ಹಳೆಯ ಗ್ರಂಥಗಳು ಅರ್ಧ ಬೆಲೆಗೆ ದೊರೆಯುತ್ತವೆಂದರೆ ಪುಸ್ತಕ ಪ್ರೇಮಿಗಳಿಗೆ ಇದಕ್ಕಿಂತ ಸಂತಸದ ಸುಗ್ಗಿ ಬೇಕೆ!

ನಾನೂ ನನ್ನ ಹೆಂಡತಿಯೂ ಅಂದು ಸಂಜೆ ಅಲ್ಲಿಗೆ ಹೋದೆವು. ೧೯೫೦ರ ದಶಕದಲ್ಲಿ ಪ್ರಕಟವಾಗಿದ್ದ ಹಲವಾರು ಉಪಯುಕ್ತ ಗ್ರಂಥಗಳು ದೊರೆತವು. ಅವುಗಳಲ್ಲಿ ದೇವೀರಪ್ಪನವರ "ಬಸವರಾಜ ಚಾರಿತ್ರ್ಯ"ವೂ ಒಂದು. ಅಲ್ಲಿ ಒಂದೇ ಪ್ರತಿಯಿದ್ದುದರಿಂದ ನನಗೆ ನಿಧಿ ಸಿಕ್ಕಷ್ಟೇ ಸಂತಸವಾಗಿ ಕೈಗೆತ್ತಿಕೊಂಡು ಹಿಂದೆ ಬರುತ್ತಿದ್ದ ನನ್ನಾಕೆಯ ಕೈಗೆ ಕೊಟ್ಟೆ. ನಾನು, ನನ್ನವಳೂ ಆರಿಸಿಕೊಂಡಿದ್ದ ಪುಸ್ತಕಗಳನ್ನು ಹೊರಲಾರದೆ ಹೊತ್ತು ಕ್ಯಾಷಿಯರ್ ಬಳಿ ಹೋದೆವು. ಬಿಲ್ ಹಾಕುವಾಗ ನೋಡಿದರೆ "ಬಸವರಾಜ ಚಾರಿತ್ರ್ಯ" ನಾಪತ್ತೆ. ನಾನೂ ನನ್ನವಳೂ ಮೆಲು ದನಿಯಲ್ಲಿಯೇ ವ್ಯಾಗ್ಯುದ್ಧಕ್ಕೆ ತೊಡಗಿದೆವು. ನಾನು ತೆಗೆದು ಅವಳ ಕೈಗೆ ಕೊಟ್ಟಿದ್ದೆನೆಂದರೆ ಅವಳು ತನ್ನ ಕೈಗೆ ಕೊಡಲೇ ಯಿಲ್ಲವೆಂದು ವಾದಿಸುತ್ತಿದ್ದಳು. ಪುನಃ ಎಲ್ಲೆಡೆಯೂ ಹುಡುಕಿದೆವು. ಹೋಗಲಿ ಮತ್ತೊಂದು ಪ್ರತಿ ಕೊಳ್ಳೋಣವೆಂದರೆ ಇದ್ದದ್ದು ಒಂದೇ. ಅಂತಹ ಹಳೇ ಗ್ರಂಥ ಸಿಕ್ಕಿದ್ದು ಕಳೆದುಕೊಂಡಿದ್ದುದರಿಂದ ನಿಜಕ್ಕೂ ನನಗೆ ಅಸಾಧ್ಯ ಕೋಪ ಬಂದಿತ್ತು. ಉಕ್ಕುತ್ತಿದ್ದ ಕೋಪವನ್ನು ತಡೆಹಿಡಿದು, ಹಣ ತೆತ್ತು ಹೊರಬಾಗಿಲ ಬಳಿ ಬಂದಾಗ ಅದೇ ಪುಸ್ತಕವನ್ನು ಹಿಡಿದು ಮತ್ತೊಬ್ಬ ಹೆಂಗಸು ನಗುತ್ತಿದ್ದರು. ನಾನು ಆರಿಸಿದ ಪುಸ್ತಕ ಕೈ ತಪ್ಪಿ ಯಾರ ಕೈಗೂ ಸಿಕ್ಕದೆ ಹೋಗಿದ್ದರೆ ಮನಸ್ಸಿಗೆ ಸಮಾಧಾನವಾಗುತ್ತಿತ್ತು. ಅದು ನನ್ನೆದುರಿಗೇ ಮತ್ತೊಬ್ಬರ ಕೈಸೇರಿದ್ದು ನೋಡಿ ಮತ್ತಷ್ಟು ಕೋಪದಿಂದ ನಾನು ನನ್ನಾಕೆಯ ಮುಖ ನೋಡಿದರೆ, ಆಕೆ ನಮ್ಮಿಬ್ಬರನ್ನು ನೋಡಿ ಇನ್ನೂ ನಗುತ್ತಾ ಹತ್ತಿರ ಬಂದು, "ನೀವು ನಿಮ್ಮಾಕೆಯ ಕೈಗೆ ಕೊಡುವುದರ ಬದಲು ಹಿಂದೆಯಿದ್ದ ನನ್ನ ಕೈಗೆ ಕೊಟ್ಟಿರಿ. ನಾನು ತಮಾಷೆ ನೋಡೋಣವೆಂದು ಸುಮ್ಮನಾದೆ, ತೆಗೆದುಕೊಳ್ಳಿ, ಹಣ ನಾನೇ ಕೊಟ್ಟಿದ್ದೇನೆ" ಎಂದಾಗ ನಡೆದ ಅಚಾತುರ್ಯದಿಂದ ನಾನು ತಲೆ ತಗ್ಗಿಸಿದರೆ, ನನ್ನಾಕೆ ಅವಳ ನಗುವಿನಲ್ಲಿ ಪಾಲ್ಗೊಂಡಿದ್ದಳು. —ವೈ. ಎನ್. ಗುಂಡೂರಾವ್

# ವಿದ್ಯಾವರ್ಧಕ ಸಂಘ ಧಾರವಾಡ

[ನೂರು ವರುಷಗಳಿಗೆ ಸಮೀಪಿಸುತ್ತಿರುವ ಕರ್ನಾಟಕದ ಹೆಮ್ಮೆಯ ಸಂಸ್ಥೆ ಧಾರವಾಡದ ಕರ್ನಾಟಕದ ವಿದ್ಯಾವರ್ಧಕ ಸಂಘವು ತನ್ನ ೨೫ ವರುಷಗಳನ್ನು ದಾಟಿದಾಗ ವಿಜಾಪುರದ 'ಕರ್ನಾಟಕ ವೈಭವ' * ವಾರ ಪತ್ರಿಕೆಯು ದಿನಾಂಕ ೨೧-೩-೧೯೧೫ರ ತನ್ನ ಸಂಚಿಕೆಯಲ್ಲಿ ಒಂದು ಸುದೀರ್ಘ ಅಗ್ರ ಲೇಖವನ್ನು ಪ್ರಕಟಿಸಿತು. ಅದನ್ನು ಬರೆದವರು ಅಂದಿನ ಅದರ ಸಂಪಾದಕರಾದ ಶ್ರೀ ಜಿ. ಆರ್. ಮಣೂರಕರ ಎಂಬವರು. ಅವರ ಅಂದಿನ ವಿಚಾರಗಳು ಇಂದು ಕೂಡ ಆಲೋಚನೆಗೆ ಅರ್ಹವಾಗಿವೆಯೆ? ನೋಡಿ—ಕೃಷ್ಣ ಕೊಲ್ಹಾರ ಕುಲಕರ್ಣಿ]

ಉತ್ತರ ಕರ್ನಾಟಕವು ಮಹಾರಾಷ್ಟ್ರದ ಆಡಳಿತಕ್ಕೆ ಒಳಗಾದಂದಿನಿಂದ ಅಲ್ಲಿ ಮರಾಠಿ ಭಾಷೆಯ ಪ್ರಾಬಲ್ಯವಾಯಿತೆಂಬುದು ಅರಿದಾದ ಮಾತಲ್ಲ. ಅಲ್ಲಿಯ ಜನರು ತಮ್ಮ ಮನೆಗಳಲ್ಲಿ ಕನ್ನಡ ಮಾತಾಡುತ್ತಿದ್ದರೂ ಸರಕಾರ ದರಬಾರ ಗಳಲ್ಲಿಯೂ ವ್ಯವಹಾರದಲ್ಲಿಯೂ ಮರಾಠೀ ಭಾಷೆಯೇ ನಡೆಯುತ್ತಿತ್ತು. ಇಷ್ಟೇ ಅಲ್ಲ ಉತ್ತರ ಕರ್ನಾಟಕಕ್ಕೆ ದಕ್ಷಿಣ ಮಹಾರಾಷ್ಟ್ರವೆಂಬ ಅಡ್ಡ ಹೆಸರು ಬಿದ್ದು ಹೋಯಿತು.

ಅನರ್ಥವಿಷ್ಟಕ್ಕೇ ಮುಗಿಯಲಿಲ್ಲ. ಕನ್ನಡ ಭಾಷೆಯು ಕೇವಲ ಬಾಯಿ ಮಾತಿನ ನುಡಿಯೇ ಆಗಿ ಉಳಿದಿತು. ಅದರ ಬರವಣಿಗೆಯು ಮುಳುಗಿ ಹೋಯಿತು. ಅಂಕಿ, ಮೊಗ್ಗಿ-ಲೆಕ್ಕ-ಪತ್ರಗಳೆಲ್ಲ ಮರಾಠಿಯಲ್ಲಿ. ನೂರರ ಅರ್ಧಕ್ಕೆ 'ಪನ್ನಾಸ' ಅಂದರೆ ಪ್ರೌಢಿಮೆ. 'ಐವತ್ತು' ಎಂದು ಯಾವನಾದರೂ ಹೇಳಿದರೆ ನಗೆಗೆ ಈಡಾಗುವನು? ಇಪ್ಪತ್ತೈದು ವರ್ಷದ ಮಾತು. ಹಳಬನಾದ ವಕೀಲನೊರ್ವನ ಮಗನು ತಂದೆಗೆ ಕನ್ನಡದಲ್ಲಿ ಪತ್ರ ಬರೆದದ್ದು ನೋಡಿ ಆ ತಂದೆಗೆ ವಿಷಾದವಾಗಿ "ಬ್ರಾಹ್ಮಣರು ಕನ್ನಡದಲ್ಲಿ ಪತ್ರ ಬರೆಯುವದು ಗರ್ಹಣೀಯವಾದದ್ದು" ಎಂದು ಮಗನನ್ನು ಆಕ್ಷೇಪಿಸಿ ಬರೆದನು.

ದಕ್ಷಿಣ ಮಹಾರಾಷ್ಟ್ರವು ಬ್ರಿಟಿಶ್ ಸಾಮ್ರಾಜ್ಯದ ಆಡಳಿತಕ್ಕೆ ಒಳಗಾದ ಬಳಿಕ ಕನ್ನಡ ನಾಡಿನಲ್ಲಿ ರಾಜವ್ಯವಹಾರವೆಲ್ಲ ಕನ್ನಡದಲ್ಲಿ ಬೇಕೆಂದು ಸರಕಾರದವರು ನಿಯಮ ಮಾಡಿದ್ದಲ್ಲದೆ ಅಲ್ಲಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸಿದರು. ಆದರೆ ಒಂದು ಕಾಲದಲ್ಲಿ ಘನತೆಯನ್ನು ಹೊಂದಿದ ಕನ್ನಡ ಭಾಷೆಯು ಬ್ರಿಟಿಶ್ ಸಾಮ್ರಾಜ್ಯದ ಪ್ರಾರಂಭದ ಕಾಲದಲ್ಲಿ ಅತಿ ದೀನವಾದ ಅವಸ್ಥೆಯಲ್ಲಿತ್ತು. ಶುದ್ಧವಾದ ಕ್ರಮಿಕ ಪುಸ್ತಕಗಳಿದ್ದಿಲ್ಲ. ಮಿಶನರಿ ಜನರು ಪ್ರಸಿದ್ಧ ಮಾಡಿದ 'ಶಾಲಾ ವ್ಯಾಕರಣ' ವೇ ವ್ಯಾಕರಣವು. ಶಾಲೆಯ ಗುರುಗಳು ಅಂಕಗಣಿತವನ್ನು

## ಕರ್ನಾಟಕ ವೈಭವ

* 'ಕರ್ನಾಟಕ ವೈಭವ' ಕುರಿತು ಡಿಸೆಂಬರ್ ಆಚರ 'ಕಸ್ತೂರಿ' ನೋಡಿ.

ಕಲಿಸುವಾಗ 'ಏಕ ದ್ವಿತೀಯಾಂಶ, ಗುಣಿಲೆ ತೀನ ಚತುರ್ಥಾಂಶ' ವೆಂದು ಕಲಿಸುತ್ತಿದ್ದರು. ಇತಿಹಾಸ ಮುಂತಾದ- ವಿಷಯುಗಳನ್ನು ಮರಾಠಿಯಲ್ಲಿ ಕಲಿಸುತ್ತಿದ್ದರು. ಹಳೇ ಕ್ರಮಿಕ ಪುಸ್ತಕಗಳಲ್ಲಿ ಎರಡನೆಯ ಪುಸ್ತಕದ ಮೊದಲನೆಯ ಪಾಠದಲ್ಲಿಯ ಪಟ್ಟದಿಯ ಸೊಬಗು ನೋಡಿರಿ!

"ಬಾಲಕರೆ ನಿಮ್ಮೊದಲು ಪುಸ್ತಕ
ಸಾಲ್ಯೊಳೋದಿದಿರಲ್ಲವದರೊಳು!!"

ಅಹಾಹಾ ಕನ್ನಡವೆ!!! ನಿಮ್ಮ+ ಮೊದಲು ಇವುಗಳ ಸಂಧಿ 'ನಿಮ್ಮೊದಲು' ಸಾಲೆ+ಒಳ್ ಸಾಲ್ಯೊಳ್.

ಮುಂದೆ ಪಂಡಿತ ಗಂಗಾಧರ ಮಡಿವಾಳೇಶ್ವರ, ಶಾಂತವೀರಸ್ವಾಮಿ ಕಿತ್ತೂರ, ಸಿದ್ಧರಾಮಯ್ಯನವರು ಹಿರೇಮಠ, ವೆಂಕಟ ರಂಗೋ ಕಟ್ಟಿ ಮುಂತಾದ ಬುದ್ಧಿಶಾಲಿಗಳಾದ ಸಾಹಸಿಗಳು ಒಳ್ಳೇ ಪರಿಶ್ರಮ ಮಾಡಿ ಗುರುಮುಖವಿಲ್ಲದೆ ತಮ್ಮಿಂದ ತಾವೆ ಕನ್ನಡದಲ್ಲಿಯ ಪ್ರಾಚೀನ ಗ್ರಂಥಗಳನ್ನೋದಿ ಶುದ್ಧವಾದ ಗ್ರಂಥಗಳನ್ನೂ ಕ್ರಮಿಕ ಪುಸ್ತಕಗಳನ್ನೂ ಬರೆದು ಕನ್ನಡಿಗರಿಗೆಲ್ಲ ಹರಿಯುದಂಥ ಉಡುಗರೆಯನ್ನು ಮಾಡಿದರು. ಆದರೆ ಸಂಪೂರ್ಣವಾಗಿ ಹುಗಿದುಹೋಗಿರುವ ಕನ್ನಡದ ಅಪಾರವಾದ ನಿಧಿಯನ್ನೆಲ್ಲ ಅಗಿದು ತೆಗಿಯುವದು ಆ ಸಾಹಸಿಗಳ ಚಿಕ್ಕ ವೇಳೆಯಿಂದ ಹೇಗಾದೀತು? ಕನ್ನಡವಾದರೂ ಒಂದು ಭಾಷೆಯಾಗಿರುವದೆಂದು ಹೇಳಿಸಿಕೊಳ್ಳಲಾರಂಭಿಸಿತು ಇಷ್ಟೇ ಸರಿ.

ಕನ್ನಡವು ಒಂದು ಪ್ರೌಢವಾದ ಭಾಷೆ! ಕನ್ನಡವು ನಮ್ಮ ಮಾತೃ ಭಾಷೆ!! ಎಂದು ನಾವೆಲ್ಲರೂ ಹೇಳಿಕೊಳ್ಳುತ್ತಿದ್ದೇವಾದರೂ ಮೊನ್ನೆ ಮೊನ್ನಿನ ವರೆಗೆ ಮಹಾರಾಷ್ಟ್ರ ಭಾಷೆಯೇ ನಮ್ಮಲ್ಲಿ ಪ್ರಚಲಿತವಾದ ಭಾಷೆಯಾಗಿತ್ತು. ಯಾವನ ಕೈಯಲ್ಲಿ ನೋಡಿದರೂ '**विविध ज्ञान विस्तर**' ದ ಒಂದು ಪ್ರತಿಯು ಕಂಡೇ ಕಾಣುವದು. ವೃದ್ಧರು ನೆರೆದು **अलिकुल वहनाचे वहन आणीत होते** ಎಂಬ ಮರಾಠೀ ಕೂಟ ಶ್ಲೋಕದ ಅರ್ಥ ಮಾಡುತ್ತ ಕವಿಯ ಜಾಣ್ಮೆಗೆ ತಲೆದೂಗುತ್ತಿದ್ದರು. ಲಗ್ನ ಪತ್ರಗಳಾಗಲೀ ಕ್ಷೇಮ ಸಮಾಚಾರದ ಪತ್ರಗಳಾಗಲೀ ಮರಾಠಿಯಲ್ಲಿಯೇ ಬರೆಯಲ್ಪಡುತ್ತಿದ್ದವು. (ಈಗಲಾದರೂ ಕೆಲವು ಜನ ಅಭಿಮಾನ ಶೂನ್ಯರು ಹಾಗೆ ಮಾಡುತ್ತಲೇ ಇದ್ದಾರೆ.)

ಹೀಗೆ ನಮ್ಮ ಭಾಷೆಯು ದುರ್ದೆಸೆಯಲ್ಲಿರುವಾಗ ಅದರ ಉದ್ಧರಣಾರ್ಥವಾಗಿ ವಿದ್ಯಾವರ್ಧಕ ಸಂಘದಂಥ ಸಂಘವು ಅವಶ್ಯವಾಗಿ ಬೇಕಾಗಿತ್ತು. ತಡವಾಗಿಯಾದರೂ ಚಿಂತೆಯಿಲ್ಲ ದೇವರ ಕೃಪೆಯಿಂದ ಈ ಸಂಘವು ಸ್ಥಾಪಿತವಾಯಿತು.

ಮಹತ್ವವಾದ ಕಾರ್ಯಾರಂಭಕ್ಕೆ ಸಜ್ಜನರು ಮನ ಮುಟ್ಟಿ ಕೈಗೊಡುವರು. ನಿಂದಕರು ಅದನ್ನು ಹೀಯಾಳಿಸುವದಾದರೂ ಉಂಟು. ಸೂರ್ಯೋದಯವಾಗಲು ಧರ್ಮನಿಷ್ಠರು ಸ್ನಾನ ಮಾಡಿ ಉದಿಸುವ ಸೂರ್ಯನಾರಾಯಣನಿಗೆ ಅರ್ಘ್ಯವನ್ನು ಕೊಟ್ಟೇ ಕೊಡುತ್ತಾರೆ. ಆದರೆ ಸೋಮಾರಿಗಳು 'ಕಿಟಕಿಗಳನ್ನಿಕ್ಕಿರೊ ಕಣ್ಣು ಕುಕ್ಕುತ್ತವೆ' ಎಂದು ಮಲಗಿದಲ್ಲಿಯೇ ಕೂಗಿ ಹಿತಕರವಾದ ಆ ಪ್ರಕಾಶರಾಶಿಯನ್ನು ನಿಂದಿಸುವದಾದರೂ ಹೊಸ ಸುದ್ದಿಯಲ್ಲ; ಸನ್ ೧೮೯೦ ರಲ್ಲಿ 'ಸಂಘ'ವು ಸ್ಥಾಪಿತವಾದಾಗ "ಈ ಸಂಘವು ಅನವಶ್ಯಕವಾದದ್ದು! ಈ ಸಂಘದಿಂದ ಏನಾಗಬೇಕಾಗಿದೆ!" ಎಂದು ಕರಿಬಾಯಿಯವರು ಹರಿಸಿದರು. ಆದರೆ ಲೋಕ ಕಲ್ಯಾಣಾರ್ಥವಾಗಿ ಹುಟ್ಟಿದ 'ಸಂಘ'ವು ಮೆಲ್ಲಮೆಲ್ಲನೆ ತನ್ನ ಸದುದ್ಯೋಗವನ್ನು ವ್ಯವಸ್ಥಿತವಾಗಿ ನಡಿಸಿತು. ಆರಂಭದಲ್ಲಿಯೇ ಯಾವ ಕೆಲಸವೂ ವಿಸ್ತಾರವನ್ನು ಹೊಂದುವದಿಲ್ಲ. ಉಗಮಸ್ಥಾನದಲ್ಲಿ ಮಹಾನದಿಯಾದರೂ ಹಳ್ಳಕ್ಕಿಂತಲೂ ದೊಡ್ಡದಾಗಿ ಕಾಣುವದಿಲ್ಲ. ಹಾಗೆಯೇ ನಮ್ಮ ಸಂಘದ ಸ್ಥಿತಿಯು.

"ಸಂಘದ" ಉತ್ಪತ್ತಿಯಿಂದಲೇ ಕನ್ನಡಿಗರಲ್ಲಿ

ಮಾತೃಭಾಷೆಯ ಅಭಿಮಾನವು ಹೆಚ್ಚಾಯಿತು. ಸಂಘದ ಪ್ರೋತ್ಸಾಹನದಿಂದಲೇ ಅನೇಕ ಜನ ಬುದ್ಧಿವಂತರು ಕನ್ನಡದಲ್ಲಿಯ ಗ್ರಂಥಗಳನ್ನು ಆಸ್ಥೆಯಿಂದ ಓದಲಾರಂಭಿಸಿದರು. ಸಂಘದವರ ಪ್ರಕಾಶದಿಂದಲೇ ಕನ್ನಡದಲ್ಲಿ ನುಸುಳಿಕೊಂಡಿರುವ ಮರಾಠೀ ಶಬ್ದಗಳನ್ನು ತೆಗೆದು ಹಾಕಿ ಅವಕ್ಕೂ ಹೆಚ್ಚಾಗಿ ಅರ್ಥಪೂರ್ಣವಾಗಿರುವ ಕನ್ನಡ ಶಬ್ದಗಳನ್ನು ಯೋಜಿಸಲು ನಮಗೆ ಅನುವಾಯಿತು. ಸಂಘದ ಕೈಯಾಸರದಿಂದಾಗಲಿ, ಸಂಘದವರು ಕೆಡವಿದ ಹಾದಿಯಿಂದ ನಡೆದಾಗಲಿ, ಅನೇಕರು ಅನೇಕ ಗ್ರಂಥಗಳನ್ನು ಬರೆದರು. ಹೊಸಬರ ಕೃತಿಗಳವು. ಅವುಗಳಲ್ಲಿ ಅಲ್ಪ ಸ್ವಲ್ಪ ತಪ್ಪು ತಡೆಗಳಿರಬಹುದು. ಆದರೂ ಅವುಗಳಲ್ಲಿ ಗುಣಕ್ಕೆ ಕೊರತೆಯಿಲ್ಲ.

ಹೀಗೆ ಹುಟ್ಟುತ್ತಲೆ ಭರದಿಂದ ಬೆಳೆಯುತ್ತ ಬಂದ ಗಿಡವು ಬೇಗನೆ ದೊಡ್ಡದಾಗಿ ಹೂ-ಕಾಯಿಗಳನ್ನು ಬಿಟ್ಟು ಕನ್ನಡಿಗರಿಗೆ ಅಮೃತೋಪಮವಾದ ಫಲಗಳನ್ನೀಯುವದೆಂದು ನಾವೆಲ್ಲರೂ ಸುಖ ಪಟ್ಟಿಕೊಂಡಿರುವಾಗಲೇ ಅದಕ್ಕೆ ಯಾವ ಪಾಪಿಯ ದೃಷ್ಟಿಯಾಯಿತೋ ಆಯಿತು! ಸಂಘವು ಹುಟ್ಟಿ ಇಂದಿಗೆ ಇಪ್ಪತ್ತೈದು ವರ್ಷಗಳಾಗಿ ಹೋದರೂ ಅದು ಹುಟ್ಟುವರ ಅಣ್ಣ, ಬೆಳೆಯುವವರ ತಮ್ಮನೆಂಬಂತೆ ಅದರ ಗತಿಯು ವಿಲಕ್ಷಣವಾಗಿ ಕುಂಠಿತವಾಗಿರುವದು. ಹೀಗೇಕೆಂದು ಎಲ್ಲರೂ ಸಹಜವಾಗಿ ಕೇಳುವರು. ಮುತ್ತು ಮೊದಲನೆಯ ಕಾರಣವೆಂದರೆ ಕನ್ನಡಿಗರ ದುರ್ದೈವವೇ! ನಿರೀಕ್ಷಿಸಿ ನೋಡಲು ಇನ್ನೂ ಅನೇಕವಾದ ಕಾರಣಗಳನ್ನು ಕಾಣಬಹುದು.

ಸಂಘದ ಉದ್ದೇಶಗಳು ಶ್ಲಾಘ್ಯವಾಗಿದ್ದರೂ ವ್ಯವಸ್ಥಾಪಕರ ಕರ್ತವ್ಯ ದೃಷ್ಟಿಯಲ್ಲಿ ತುಸು ದೋಷವಿರುವದು. ಕನ್ನಡ ಭಾಷೆಯಲ್ಲಿದ್ದ ದೋಷಗಳನ್ನು ತೆಗೆದು ಹಾಕಿ ಅದರ ಸರಣಿ

ಕನ್ನಡದ ಗುಡಿ ಚಿತ್ರ: ಕೃಪೆ— ಕಾರ್ಯದರ್ಶಿ, ಕರ್ನಾಟಕ ವಿದ್ಯಾವರ್ಧಕ ಸಂಘ



ಯನ್ನೂ ಸೌಂದರ್ಯವನ್ನೂ ಹೆಚ್ಚಾಗಿ ಬೆಳೆಸುವಂತೆ ಯತ್ನ ಮಾಡುವದು—ಸಂಘದ ಮೊದಲನೆಯ ಕೆಲಸವು. ಇತ್ತಲು ಸಂಘದವರು ಏನೂ ಪ್ರಯತ್ನ ಮಾಡಿದಂತೆ ತೋರುವದಿಲ್ಲ. ದೋಷ ರಹಿತವಾದ ಶಬ್ದಗಳುಳ್ಳ ಕನ್ನಡ ಕೋಶವೊಂದನ್ನು ಸಂಘದವರು ವಿದ್ವಾಂಸರ ಕಡೆಯಿಂದ ಈ ಮೊದಲೆ ಸಿದ್ಧಮಾಡಿಸಬೇಕಾಗಿತ್ತು. ಗ್ರಂಥಕರ್ತರು ತಮ್ಮ ಗ್ರಂಥಗಳನ್ನು ಸಂಘದ ಅವಲೋಕನಾರ್ಥವಾಗಿ ಕಳಿಸಿದರೆ ಆ ಗ್ರಂಥಗಳಲ್ಲಿ ಗುಣದೋಷಗಳಾವುವೆಂಬುದನ್ನು ಸಂಘದವರು ತಿಳಿಸಿಕೊಡುವ ಏರ್ಪಾಡು ಮಾಡಿಲ್ಲ. ಪುಸ್ತಕಗಳನ್ನು ಬರೆದ ಮಾತ್ರಕ್ಕೆಯೇ ಸಂಘದವರು ತಮ್ಮ ಅನಿಯಂತ್ರಿತವಾದ ಇಚ್ಛೆಯ ಮೇರಿಗೆ ಹೆಚ್ಚು ಕಡಿಮೆಯಾದ ಹಣವನ್ನು “ಇನಾಮು”ದ ರೂಪವಾಗಿ ಕೊಡುತ್ತಾರೆ. ಹೀಗೆ ಮಾರ್ಗದರ್ಶಕರಿಲ್ಲದ ಮೂಲಕವಾಗಿ 'ಗ್ರಂಥಕರ್ತರ' ತಪ್ಪುಗಳು ವಜ್ರಲೇಪವಾಗಿ ಉಳಿಯದೆ ಏನು ಮಾಡುವವು?

ಪ್ರಾಚೀನ ಗ್ರಂಥಗಳನ್ನು ಹುಡುಕಿಕೊಂಡು ಅವುಗಳನ್ನು ಸುವಾಚ್ಯವಾಗಿ ಮುದ್ರಿಸುವದೂ ತಕ್ಕ ಸ್ಥಳಗಳಲ್ಲಿ ಯೋಗ್ಯವಾದ ಟೀಕೆ, ಟಿಪ್ಪಣಿಗಳನ್ನು ಕೊಡುವದೂ, ಅನುಕೂಲವಾದ ಬೆಲೆಗೆ ಗ್ರಂಥಗಳು ಎಲ್ಲರಿಗೆ ದೊರಕುವಂತೆ ಮಾಡುವದೂ ಮುಂತಾದ ಕೆಲಸಗಳನ್ನಾದರೂ ಸಂಘದವರೇ ಮಾಡಬೇಕಲ್ಲವೆ? ಶಬ್ದಗಳನ್ನು ಬಿಡಿಸದೆ ಎತ್ತು ಹಚ್ಚೀ ಮೊಪ್ಪ ಹಾಗೆ ತಪ್ಪು ತಡೆಯಾಗಿ ಅಚ್ಚು ಹಾಕಿಸಿರುವ ಗ್ರಂಥಗಳನ್ನೇ ನಾವು ಓದಬೇಕಾಗಿದೆ.

ಅತಿ ಪುರಾತನವಾದ ಕಾಲದಲ್ಲಿ ಪ್ರಚಲಿತವಾಗಿದ್ದ ಕನ್ನಡಕ್ಕೆ ಹಳೆಗನ್ನಡವೆಂಬ ಹೆಸರು ಬರಬರುತ್ತ ಪ್ರಚಲಿತವಾದ ಕನ್ನಡಕ್ಕೂ ಮುಂಚಿನ ಹಳೆಗನ್ನಡಕ್ಕೂ ಹೆಚ್ಚು ಕಡಿಮೆ ತೋರಿ ಆಗ ಪ್ರಚಲಿತವಾದ ಕನ್ನಡಕ್ಕೆ ಹೊಸಗನ್ನಡವೆಂಬ ಹೆಸರು ಬಂದಿತು. ಆ ಮಾತಿಗೆ ಈಗ ಅನೇಕ ಶತಮಾನಗಳಾದವು. ಈಗಿನ ಕಾಲದಲ್ಲಿ ಪ್ರಚಲಿತವಾಗಿರುವ ಕನ್ನಡಕ್ಕೂ ಮುಂಚಿನ ಹೊಸಗನ್ನಡಕ್ಕೂ ಹೆಚ್ಚು ಕಡಿಮೆ ಉಂಟೇ ಉಂಟು. ಹಳೆಗನ್ನಡಕ್ಕೂ ವ್ಯಾಕರಣವುಂಟು. ಅದರ ಪ್ರಯೋಗಗಳಾದರೂ ಬೇರೆ. ಒಳಗಡೆಯ ಹೊಸಗನ್ನಡಕ್ಕೂ ವ್ಯಾಕರಣವಾಯಿತು. ಅದರ ಪ್ರಯೋಗಗಳಾದರೂ ಬೇರೆ. ಮಧ್ಯಕಾಲದಲ್ಲಿ ಹೊಸಗನ್ನಡವಾಗಿದ್ದ ಕನ್ನಡವು ಈ ಕಾಲದಲ್ಲಿ ಹೊಸಗನ್ನಡವಾಗಲಿಕ್ಕಿಲ್ಲ. ಎಂಭತ್ತು ವರುಷದ ವೃದ್ಧನಾದ Young Husband ಸಾಹೇಬನು ಈ ಹೊತ್ತು Young Husbandನೇ? ವಿನೂತನವಾದ ಕನ್ನಡ ಭಾಷೆಯನ್ನು ಹಳೆದಾಗಿ ಎಣ್ಣೆ ಸತ್ತಿರುವ ವ್ಯಾಕರಣ ಸೂತ್ರದಮೇಲೆ ನಡಿಸಲಿಸಗುತ್ತಿರುವ ಕೆಲಜನ ಮೈಸೂರ ಪಂಡಿತರ ಕೃತಿಗಳು ಹೊಸ ಭಾಷೆಯ ಪ್ರಗತಿಗೆ ನಿರೋಧಕವಾಗಿರುವವೆಂದು ನಮ್ಮ ಅಭಿಪ್ರಾಯವು. ಹಿಂದುಳಿದ ಭಾಷೆಯ ವ್ಯಾಕರಣ ನಿಯಮಗಳನ್ನು ಸುಸ್ವರೂಪವನ್ನು ಹೊಂದುತ್ತಿರುವ ಹೊಸ ಭಾಷೆಗೆ ಹಚ್ಚುವದೂ ತಂದೆಯು ಚಲ್ಲಿ ಕೊಟ್ಟು ಹೋಗಿರುವ ಹರಕು ಬಗಲಬಂಡಿಯನ್ನು



“ನನ್ನ ‘ಅಣುಕು ಚಿತ್ರ’ ಬರೀ ಅಂದ್ರೆ ಹೀಗೇನೋ ಬರ್ಕ್ಯೋದು??”

ತರುಣನಾದ ಮಗನ ಮೈಗೆ ತೊಡಿಸುವದೂ ಒಂದೇ. ಐವತ್ತು ವರ್ಷಗಳಾಚೆಗೆ ಬರೆದಿರುವ ಕಥಾಸಂಗ್ರಹವೆಂಬ ಗ್ರಂಥವು ಮೈಸೂರ ಪ್ರಾಂತದಲ್ಲಿಯೇ ಹುಟ್ಟಿತು. ಅದರಲ್ಲಿ ಕಂಡು ಬರುವ ಸುರುಚಿತವಾದ ಹೊಸಗನ್ನಡದ ಶಬ್ದ ರೂಪಗಳನ್ನು ನೋಡಿರಿ! ಈಗ ಮೈಸೂರವರು ಉಪಯೋಗಿಸಲಾರಂಭಿಸಿದ ಶಬ್ದರೂಪಗಳನ್ನು ನೋಡಿರಿ! ಈಗಿನವರು ಉಪಯೋಗಿಸುವ ಭಾಷೆಗೆ ಹಳೆಗನ್ನಡ ವ್ಯಾಕರಣದ ಕೊಳೆತ ವಾಸವು ಬರುತ್ತಿರುವದು. ವಿದ್ಯಾವರ್ಧಕ ಸಂಘದವರು ಈ ಮಹತ್ವವಾದ ವಿಷಯವನ್ನು ಕೈಕೊಂಡು ಭಾಷಾಶುದ್ಧಿಯ ಮಾರ್ಗವನ್ನು ಲೇಖಕರಿಗೆ ತೋರಿಸಿ ಕೊಡತಕ್ಕದ್ದು. ಹೊಸಗನ್ನಡ ವ್ಯಾಕರಣಗಳೆಂಬ ಹಳೆಯವಾದ ಭಾಷಾ ನಿಯಮಗಳು ಈಗಿನ ಭಾಷೆಯನ್ನು ನಿರ್ಬಂಧಿಸಬಲ್ಲವು, ಇಲ್ಲವೇ ಈಗಿನ ಭಾಷೆಗೆ ಸರಿಯಾಗುವಂತೆ ವ್ಯಾಕರಣಗಳನ್ನೇ ಪರಿಶೋಧಿಸತಕ್ಕದ್ದೇ ಎಂಬ ಮಹತ್ವವಾದ ವಿಷಯವನ್ನು ಸಂಘದವರು ಕೈಕೊಂಡಿಲ್ಲ.

ಇಷ್ಟೆಲ್ಲ ಕೆಲಸಗಳು ಸಂಘದಿಂದಾಗಬೇಕಾದರೆ ಸಂಘಕ್ಕೆ ಜನಸಹಾಯವೂ ದ್ರವ್ಯಸಹಾಯವೂ ಹೇರಳವಾಗಿ ಬೇಕೆಂಬುದನ್ನು ನಾವು ಅರಿಯದಿಲ್ಲ. ಆದರೆ ಇಂಥ ಕೆಲಸಗಳನ್ನು ಮಾಡುವ ಹವಣಿಕೆಯನ್ನು ಸಂಘವು ಮಾಡಿಲ್ಲ; ಹವಣಿಕೆಯಿದ್ದರೆ ಹಾಗೆ ಜನರಿಗೆ ತಿಳಿಸಿ ಅವರಿಂದ ಸಹಾಯವನ್ನು ಪಡೆಯಲು ಸಂಘವು ಯತ್ನವನ್ನು ಮಾಡಿಲ್ಲ.

ಸಂಘವು ಕಡಿದ ಮೈ ತುರಿಸಿಕೊಳ್ಳುತ್ತಿರುವುದು; ಹರಿದ ಮೈ ಹೊಲಿಕೊಳ್ಳುತ್ತಿದೆ.

ಕರ್ನಾಟಕಸ್ಥರಾದರೂ ಕನ್ನಡ ಭಾಷೆಯ ಏಳ್ಗೆಗೆ ಯತ್ ಕಿಂಚಿತ್ತಾದರೂ ಸಹಾಯವನ್ನು ಮಾಡುವದಿಲ್ಲವೆಂದು ಹೇಳಲು ನಮಗೆ ನಾಚಿಕೆ ಬರುತ್ತದೆ. "ಕನ್ನಡ ಭಾಷೆ! ನಮ್ಮ ಕನ್ನಡ ಭಾಷೆ!! ಅದಕ್ಕೆ ನಾವೆಲ್ಲರೂ ಉತ್ತೇಜನ ಕೊಡಬೇಕು!!!" ಎಂದು ಎಲ್ಲರೂ ಬಾಯಿ ಹಿಡಿಸಲರಿಯದೆ ಮಾತಾಡುತ್ತಾರೆ. ನಿಜವಾದ ಸಹಾಯವನ್ನು ಮಾಡುವವರು ಕಡಿಮೆ! "ಅಧಮತಾ-ನಾಡಿ ಮಾಡದವ ಸರ್ವಜ್ಞ" ಎಂಬ ಉಕ್ತಿಯು ಬಾಯಿ ಬಡುಕರ ಬೆನ್ನಿಗೆ ಹತ್ತುವದಿಲ್ಲವೆ? ಪ್ರಸಿದ್ಧ ಮಾಡಿದ ಗ್ರಂಥಗಳ ಪತ್ರಿಕೆಗಳನ್ನು ಕೊಂಡು ಕೊಂಡು ಓದುವ ಗೋಜಿಗೆ ಕನ್ನಡಿಗರು ಹೋಗುವದೇ ಇಲ್ಲ. ಬೀ. ಎ., ಎಂ. ಎ. ಮುಂತಾದ ದೊಡ್ಡ-ದೊಡ್ಡ ಪದವೀಧರರಾದ ಕನ್ನಡಿಗರು ನಮ್ಮ ಪ್ರಾಂತದಲ್ಲಿ ಸಾವಿರಾರು ಜನರಿರುವರು. ಅವರು ಮನಮುಟ್ಟಿ ಕಂನಡ ಗ್ರಂಥಗಳನ್ನೋದಿ ಹೊಸ ಗ್ರಂಥಗಳಂನು ಬರೆಯಲು ಯತ್ನಿಸಬಾರದೆ? ಇಚ್ಛೆಯಿದ್ದರೆ ಯತ್ನಮಾಡುವ ಮನಸ್ಸು ಆಗಿಯೇ ಆಗುವದು. ಇಚ್ಛಾಪ್ರಯತ್ನಗಳ ಸಂಯೋಗದಿಂದ ಪುರುಷಸಿಂಹನಿಗೆ ಸ್ವರ್ಗಲೋಕವೇಕೆ? ಪ್ರತ್ಯಕ್ಷ ಪರಮಾತ್ಮನೇ ಸಾಧ್ಯವಾಗುತ್ತಿರಲು ಕಂನಡ ಭಾಷೆಯಲ್ಲಿ ಗ್ರಂಥಗಳನ್ನು ಬರೆಯುವದಾಗದೆ?

ಮೇಲೆ ಹೇಳಿದಂತೆ ಕಂನಡಿಗರಲ್ಲಿ ಸ್ವಭಾವ ದುರ್ಗುಣಗಳಿರುವದಲ್ಲದೆ, ಅವರಲ್ಲಿ ನಿರರ್ಥಕವಾದ ಜಾತಿ ಮತ್ಸರಗಳೂ ಪಕ್ಷ-ಪರಪಕ್ಷಗಳ ದುರಭಿಮಾನವೂ, ನಾನೇ ಲೋಕನಿಯಾಮಕನೆಂಬ ಅಹಂಕಾರವೂ ಇಂನೂ ಅನೇಕವಾದ ಅನಿಷ್ಟಗಳೂ ವಾಸ ಮಾಡಿಕೊಂಡಿರುವದರಿಂದ ಸಂಘಕ್ಕೆ ತಕ್ಕದಾದ ರೀತಿಯಿಂದ ಸಹಾಯವಿಲ್ಲವೆಂದು ನಮಗೆ ತಿಳಿದಿದೆ. ಹೀಗೆ ಇಂದು ಅನೇಕವಾದ ಕಾರಣಗಳಿಂದ ಕಂನಡ ಭಾಷೆಗೆ ತಕ್ಕದಾದ ಸಹಾಯವಿಲ್ಲದ್ದರಿಂದ ಅದರ ಪ್ರಗತಿಯು ಹೇಗೆ ಬೇಕಾದ ಹಾಗೆ ಆಗಿಲ್ಲ. ✡

# ಹೀಗೊಂದು ಪ್ರೇಮಕಥೆ

ಮಿನಿ ಕಥೆ

ಸಾಮಾನ್ಯವಾಗಿ ಪ್ರೇಮಕಥೆಗಳಲ್ಲಿ ಕಂಡು ಬರುವಂತೆಯೇ ನಮ್ಮ ವಿಷಯದಲ್ಲೂ ನಡೆಯಿತು. ಮೊದಲ ಭೇಟಿಯಲ್ಲಿಯೇ ಅನುರಾಗ ಅಂಕುರಿಸಿತು. ನಾನು ವಿದ್ಯಾವಂತನೂ ನಿರುದ್ಯೋಗಿಯೂ ಆದ ತರುಣನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಲ್ಲ.

ನಮ್ಮ ಗುಂಪಿನ ಸ್ಥಿರವಾದ ಸ್ವಭಾವವನ್ನೇ ನಾನೂ ಅನುಸರಿಸುತ್ತಿದ್ದೆ. ಬೆಳಗಿನ ರೇಷನ್ ಸಿಕ್ಕೊಡನೆ ಮನೆಯಿಂದ ಹೊರಕ್ಕೆ ಜಾರುತ್ತೇನೆ. ನಂತರ ಸೀದಾ ಬಸ್‌ಸ್ಟ್ಯಾಂಡನ್ನು ತಲುಪುತ್ತೇನೆ. ಅಂದವಾದ ಕಾಲೇಜ್ ಬಸ್ ಹಾದು ಹೋಗುವವರೆಗೆ ಅಲ್ಲೆಲ್ಲಾ ಸುತ್ತಾಡಿ ನಡೆಯುವೆ. ಆ ನಂತರವೇ ವಾಚನಾಲಯಕ್ಕೆ ಹೋಗುವೆ.

ಹಾಂ. ಏನು ಹೇಳುತ್ತಿದ್ದೆ? ಓ... ಪ್ರೇಮದ ವಿಚಾರ.

ಒಂದು ದಿನ ಬೆಳಿಗ್ಗೆ ಬಸ್‌ಸ್ಟ್ಯಾಂಡಿಗೆ ಎಂದಿನ ಭೇಟಿ ನೀಡಿದಾಗ ಬಸ್ಸಿಗೆ ಕಾದು ನಿಂತವರೆಡೆಯಲ್ಲಿ ಒಂದು ಹೊಳಪು. ಎರಡು ಬಾಲದ ಹಕ್ಕಿಯಂತೆ ಎರಡು ಜಡೆಯ ಓರ್ವ ಹುಡುಗಿ ಎದೆಗಾನಿಸಿ ಹಿಡಿದ ಪುಸ್ತಕಗಳ ಹೊರೆ. ನೆಲವನ್ನು ಗುಡಿಸುತ್ತಿದ್ದ ನೆರಿಗೆಗಳುಳ್ಳ ಸ್ಯಾಟಿನ್ ಲಂಗ. ಮೃದುವಾದ ಎಳೆಗೂದಲುಗಳು, ಎದ್ದು ನಿಂತ ಕೈ ದಿಂಡಿನಲ್ಲಿ ಸುತ್ತಿ ಮಲಗಿದ್ದ ರಬ್ಬರ್ ಬಳೆಗಳು.

ಯಾಂತ್ರಿಕವಾಗಿ ಕಣ್ಣು ಹಾಯಿಸಿ ಬರುತ್ತಿರು-ವಾಗ, ಮೊದಲೆ ಹೇಳಿದಂತೆ ಪ್ರಥಮವಾಗಿ ನಮ್ಮ ಕಣ್ಣುಗಳು ತಮ್ಮತಮ್ಮಲ್ಲಿ ಬೆಸೆದವು. ಎಲ್ಲವನ್ನೂ ಮರೆಯುವ ಕ್ಷಣಗಳು. ತಟ್ಟನೆ ನಾವು ಕಣ್ಣುಗಳನ್ನು ಹಿಂದೆಗೆದೆವು. ಅವಳು ನಾಚಿ ತಲೆತಗ್ಗಿಸಿದಳು. (ನಿಜ ಹೇಳುವುದಾದರೆ ನನಗೂ ಒಂದಿಷ್ಟು ನಾಚಿಕೆ ಎನಿಸಿತು).

ಅಂದು ಕಾಲೇಜ್ ಬಸ್ ಹಾದು ಹೋದಾಗ ನನ್ನ ಎದೆಯಮೇಲೆ ಏನೋ ಭಾರವೊಂದನ್ನು ಹೇರಿದಂತಹ ಅನುಭವ.

ಮರುದಿನದಿಂದ ನನ್ನ ಪ್ರಭಾತಗಳು ಅರ್ಥಪೂರ್ಣವಾಗುತ್ತಿದ್ದವು. ಬೆಳಿಗ್ಗೆ ಎದ್ದೊಡನೆ ಸ್ನಾನ, ಶೇವ್, ಇತ್ಯಾದಿಗಳನ್ನು ತಪ್ಪದೆ ಮಾಡುತ್ತಿದ್ದೆ. ಶರ್ಟು, ಪಂಚೆಗಳನ್ನು ಇಸ್ತ್ರಿ ಮಾಡುತ್ತಿದ್ದೆ. ಅಂಗಡಿಯ ಕಂಞಿ ಫರೀದ್ ಸಾಲ ಕೊಟ್ಟ ಪೌಡರಿನಿಂದ ಬೆಳ್ಳಗಾಗುತ್ತಿದ್ದೆ. ಮುಳ್ಳು ಹಂದಿಯ ಮುಳ್ಳಿನಂತೆ ನಿಲ್ಲುವ ಕೂದಲೊಡನೆ ಸೆಣಸಿ ಒಂದು ವಿಧವಾಗಿ ಅಡಗಿಸುತ್ತಿದ್ದೆ. ಕಪ್ಪು ಬೆಂಕಿ ಕಡ್ಡಿಯಿಂದ ಮೀಸೆಯನ್ನು ಕರ್ರಗಾಗಿಸುತ್ತಿದ್ದೆ. ನಂತರ ಎಲ್ಲಿಗೋ ಅಂದದ ರಾವಣನ ಯಾತ್ರೆ? ಎಂಬ ಮನೆಯವರ ಪ್ರಶ್ನೆ ಬೀಳುವ ಮೊದಲು ಹೊರಕ್ಕೆ ಜಾರುತ್ತಿದ್ದೆ. ಬಸ್‌ಸ್ಟ್ಯಾಂಡಿನ ಹತ್ತಿರವಿರುವ ಶ್ರೀ ಭೂತನಾಥ ವಿಲಾಸಂ ಹೇರ್ ಕಟಿಂಗ್ ಸಲೂನ್‌ಗೆ ಹೋಗಿ ಮತ್ತೊಮ್ಮೆ ತಲೆಗೂದಲನ್ನು ಬಾಚುತ್ತಿದ್ದೆ. ಆತ್ಮವಿಶ್ವಾಸವನ್ನು ತಂದುಕೊಂಡು ಬಸ್‌ಸ್ಟ್ಯಾಂಡ್‌ಗೆ ಹೋಗುತ್ತಿದ್ದೆ.

---

ಮೂಲ ಮಲಯಾಳಂ : ಟಿ. ಆರ್ಬನ್
ಕನ್ನಡಕ್ಕೆ: ಅಶೋಕ ಕುಮಾರ

---

ಕಾಲೇಜ್ ಬಸ್ ಬಂದು ಹೋಗುವವರೆಗೆ ಮನಸ್ಸಲ್ಲಿ ಒಂದು ರೀತಿಯ ಉಬ್ಬರವಿಳಿತಗಳು. ಹೋದನಂತರವೋ ತುಂಬಲಾರದ ನಷ್ಟದ ಭಾವನೆ.

ಹೆಚ್ಚು ಹೇಳುವುದೇಕೆ? ಒಂದು ದಿನ ಒಂದು ಬಾರಿಯಾದರೂ ನಾವು ಭೇಟಿಯಾಗದಿದ್ದರೆ ಸಾಯುವೆವು ಎಂಬ ಸ್ಥಿತಿ ಉಂಟಾಯಿತು. ಇದಕ್ಕಿಂತ ಹೆಚ್ಚು ಹೇಳುವುದೇನು? ಇನ್ನು ಇರುವುದೇ ಕಥೆಯ ಅಂತ್ಯ. ಅದೂ ಎಲ್ಲಾ ಪ್ರೇಮಕಥೆಗಳಂತೆ ಟ್ರಾಜೆಡಿ.

ಒಂದು ದಿನ ತೋಳ್ಬಲವುಳ್ಳ ಅವಳ ಸೋದರರು ನನ್ನ ಶರ್ಟಿನ ಕುತ್ತಿಗೆಪಟ್ಟಿಯನ್ನು ಹಿಡಿದು ಬಲವಾಗಿ ನಾಲ್ಕು ಪೆಟ್ಟಿನ ಮಳೆಗರೆದು ಬಿಟ್ಟರು.

ಕೊನೆಗೆ ನಾನು ಅವಳನ್ನೇ ಮದುವೆಯಾಗಬೇಕಾಯಿತು ಎಂದು ಚುಟುಕಾಗಿ ಹೇಳಿದರೆ ಸಾಕಲ್ಲ. ✩

ರಘುರಾಯ ಮತ್ತು ಶ್ರೀಮತಿ ಪುಪುಲ್ ಜಯಕರ ಕೂಡಿ ಬರೆದ 'ಇಂದಿರಾಗಾಂಧಿ' ಪುಸ್ತಕವನ್ನು ಅಂತಾರಾಷ್ಟ್ರೀಯ ಅನುಭವದ ಖ್ಯಾತಿ ಹೊತ್ತ ವರದಿಗಾರರೂ ಈಚೆಗೆ 'ಇಲಸ್ಟ್ರೇಟೆಡ್ ವೀಕ್ಲಿ'ಯ ಸಂಪಾದಕತ್ವದಿಂದ ನಿವೃತ್ತರಾದ ಉತ್ಕೃಷ್ಟ ಬರಹಗಾರರೂ ಟೀಕಾಕಾರರೂ ಮತ್ತು ಕನ್ನಡಿಗರೇ ಆದ ಶ್ರೀ ಮಾಧವ ಕಾಮತರು 'ಟೈಮ್ಸ್ ಆಫ್ ಇಂಡಿಯಾ' ದೈನಿಕದ ಒಂದು ರವಿವಾರದ ಸಂಚಿಕೆಯಲ್ಲಿ ಸಮೀಕ್ಷಿಸಿದರು. ಸಮೀಕ್ಷೆಯ ಅಂಗವಾಗಿ ತನ್ನ ಹಾಗೂ ಶ್ರೀಮತಿ ಗಾಂಧಿಯವರ ಸಂಪರ್ಕದ ಕೆಲವು ಹೃದಯಸ್ಪರ್ಶಿಯಾದ ನೆನಪುಗಳನ್ನು ಓದುಗರೊಂದಿಗೆ ಹಂಚಿಕೊಂಡರು. ಅವನ್ನೇ ಕ್ರೋಢೀಕರಿಸಿ ಇಲ್ಲಿ ಕೊಡುತ್ತಿದ್ದೇವೆ—ಅವರು ಅರುಹಿಕೊಂಡಂತೆ.

# ಮಾಯಿಯ ಮೂರು ಮುಖಗಳು

ಮೂಲ: ಎಂ. ವಿ. ಕಾಮತ್
ಅನುವಾದ: **ಗೌರೀಶ ಕಾಯ್ಕಿಣಿ**

ನಾನು ಇಂದಿರಾ ಗಾಂಧಿಯವರನ್ನು ಚೆನ್ನಾಗಿ ಬಲ್ಲವನಲ್ಲ. ಕೇವಲ ಸಂಕ್ಷಿಪ್ತವಾಗಿ, ಹೊರ ಪರಿಧಿಯಲ್ಲಿ ನಿಂತು ಬಲ್ಲೆನು. ಆದಾಗ್ಯೂ, ಅವರೊಂದಿಗೆ ನನ್ನ ಅನಂತರದ ಸಂಪರ್ಕದ ಕೆಲವು ಸಂದರ್ಭಗಳು ಅವರ ಬಗೆಗೆ ಗಹನವಾಗಿಯೇ ಅಲ್ಲದಿದ್ದರೂ ಹೆಚ್ಚು ಪೂರಕವಾಗಿ ಬೆಳಕು ಚೆಲ್ಲುತ್ತವೆ—ಅವರ ಸ್ವಭಾವ ಶೀಲಗಳ ಕುರಿತು.

ಅವರು ವಾರ್ತಾ ಮತ್ತು ಆಕಾಶವಾಣಿ ಇಲಾಖೆಯ ಕೇಂದ್ರ ಮಂತ್ರಿ ಆದಾಗಲೇ ಒಮ್ಮೆ ಪ್ಯಾರಿಸ್ಸಿಗೆ ಬಂದಿದ್ದರು. ಯುನೆಸ್ಕೋ ಭಾರತೀಯ ಪ್ರತಿನಿಧಿ ಮಂಡಳಕ್ಕೆ ಧುರೀಣರಾಗಿ—ಶ್ರೀ ಎಂ.ಸಿ.ಛಾಗಲಾರ ಬದಲಾಗಿ. ಅಂದು ನಾನು ಟೈಮ್ಸ್ ಆಫ್ ಇಂಡಿಯಾದ ಪ್ಯಾರಿಸ್ ಸುದ್ದಿಗಾರನಾಗಿದ್ದೆ. ಪ್ಯಾರಿಸ್ಸಿನಲ್ಲಿ ಅವರು ಓರ್ಲೀ ವಿಮಾನ ತಳದಿಂದ ಭಾರತೀಯ ರಾಯಭಾರಿ ಕಚೇರಿಯ ಕಾರಿನಲ್ಲಿ ಅವರಿಗಾಗಿ ಕಾದಿರಿಸಿದ ಹೋಟೇಲಿಗೆ ಬರುತ್ತಿದ್ದರು. ಆಗ ಕಾರು ಕೆಟ್ಟು ಅಪಘಾತಕ್ಕೆ ಗುರಿ ಆಯಿತು. ನುಗ್ಗುನುಗ್ಗಾಯಿತು. ರಾಯಭಾರಿ ಕಚೇರಿಯ ಅಧಿಕಾರಿ ವರ್ಗ ಈ ವಾರ್ತೆಯನ್ನು ಪತ್ತಿಕ್ಕಲು ಯತ್ನಿಸಿದರು.

ಆದರೆ ನನಗೆ ಈ ಅಪಘಾತದ ಸುಳಿವು ಹತ್ತಿತ್ತು. ನಾನು ಹೋಟೇಲಿನಲ್ಲಿ ಶ್ರೀಮತಿ ಗಾಂಧಿಯವರಿಗಾಗಿ ಫೋನು ಮಾಡಿದೆನು. ಅವರ ಕಾರ್ಯದರ್ಶಿ-ಜನರಲ್ ತಿಮ್ಮಯ್ಯನವರ

ಸೋದರಿ—ನನಗೆ ಇಂದಿರಾಜಿಯೊಂದಿಗೆ ಮಾತಾಡಲು ಬಿಡಲು ಅನುಮಾನಿಸಿದರು. ಆಗ ನಾನು ಅವರಿಗೆ ಎಚ್ಚರಿಕೆ ಕೊಟ್ಟೆನು—"ನಾನೇ ಸ್ವಯಂ ಶ್ರೀಮತಿ ಗಾಂಧಿಯವರನ್ನು ಮಾತನಾಡಿಸದಿದ್ದಲ್ಲಿ ಅವರಿಗೆ ಅಪಘಾತದಲ್ಲಿ ಕೆಟ್ಟ ಅಪಾಯವಾಗಿದೆಯೆಂಬ ಗಾಳಿ ಸುದ್ದಿ ಹಬ್ಬುವದು!" ಆಗ ಶ್ರೀಮತಿ ಗಾಂಧಿಯವರೊಡನೆ ನನ್ನ ಸಂಪರ್ಕ ಜೋಡಿಸಲಾಯಿತು. ಅವರೆಂದರು–ಕಾರು ನುಗ್ಗುನುಗ್ಗಾದದ್ದೂ ನಿಜ. ಆದರೆ ತನಗೇನೂ ಅಪಾಯವಾಗಲಿಲ್ಲ. ನಾನು ನನ್ನ ಪತ್ರಿಕೆಗೆ ಒಂದು ಸಂಕ್ಷಿಪ್ತ ವೃತ್ತವನ್ನು ರೂಪಿಸಿದೆನು. ಇತರ ಸುದ್ದಿ ಸಂಸ್ಥೆಗಳಿಗಿಂತ ಮುಂದಾಗಿ ನನ್ನ ವೃತ್ತಾಂತ ಮೊದಲಿಗೆ ಪ್ರಕಟವಾಯಿತು.

ಆಗ ಅನಿವಾರ್ಯವಾದದ್ದೇ ಕೆಲವೇ ತಾಸುಗಳಲ್ಲಿ ಘಟಿಸಿತು. ಶ್ರೀಮತಿ ಗಾಂಧಿಯವರಿಗೆ ಅವರ ಕ್ಷೇಮ–ಕುಶಲಕ್ಕಾಗಿ ಫೋನು ಹಾಗೂ ತಂತಿ ಸಂದೇಶಗಳ ಮಹಾಪೂರವೆ ನುಗ್ಗಿ ಬಂದು ಮುತ್ತಿಕೊಂಡಿತು. ಅವರೇ ನನ್ನನ್ನು ಫೋನಿನಲ್ಲಿ ಕರೆದು ದೂರಿಕೊಂಡರು. 'ಇದೇನು ಮಾಡಿದಿರಿ ನೀವು—ನನಗೆ?" ಅವರು ತಣ್ಣನೆ ಕೇಳಿದರು. "ಭಾರತದಿಂದ ಎಷ್ಟೆಲ್ಲ ಚೌಕಶಿಯ ದಾಳಿ......ಇದೆಲ್ಲ ಹೇಗೆ ಪತೋಟಿಗೆ ತರಬೇಕೋ ನನಗೆ ತಿಳಿಯದಾಗಿದೆ!" "ಚಿಂತೆ ಬಿಡಿ, ಮ್ಯಾಡಂ," ನಾನು ಹಗುರವಾಗಿಯೇ ಹೇಳಿದೆ. "ತಮಗೆ ಬಂದ ತಂತಿಗಳ ಬಗೆಗೆ ಇನ್ನೊಂದು ವರದಿ ಸಿದ್ಧಮಾಡುತ್ತೇನೆ. ನಾನು ನಿಮ್ಮನ್ನು ಕಂಡಿದ್ದೇನೆ; ನಿಮ್ಮ ಮೈಯ ಮೇಲೆ ಒಂದೂ ಗಾಯವಿಲ್ಲವೆಂದು ಆಶ್ವಾಸನೆ ಕೊಡುತ್ತೇನೆ!" ನನ್ನ ಧಾರ್ಷ್ಟ್ಯದ ನನಿಗೆ ಅವರು ಕ್ಷಣಕಾಲ ತಬ್ಬಿಬ್ಬಾಗಿರಬೇಕು. ಒಂದು ಕ್ಷಣ ಫೋನಿನ ಆಚೆಗೆ ನಿಶ್ಶಬ್ದ. ಆ ಮೇಲೆ ಅವರು ಅಂದರು, "ನೀವು ಪತ್ರಿಕಾ ವರದಿಗಾರರು ಸುದ್ದಿ ನಿರ್ಮಿಸುವದು ಹೀಗೇನೇ?" ಈಗ ಅವರ ದನಿಯಲ್ಲಿ ರೊಚ್ಚು ಕಡಿಮೆ ಇತ್ತು. "ಇಲ್ಲ. ಇಲ್ಲ, ಮ್ಯಾಡಂ." ನಾನು ಉತ್ತರಿಸಿದೆ. "ರಾಜಕಾರಣಿಗಳು ತೊಂದರೆಗೆ ಸಿಲುಕಿಕೊಳ್ಳುತ್ತಾರೆ. ಮತ್ತೆ ನಾವು ಅದನ್ನು ಸುದ್ದಿ ಮಾಡುತ್ತೇವೆ!" ಬಹುಶಃ ಅವರು ಈ ಉತ್ತರ ನನ್ನಿಂದ ನಿರೀಕ್ಷಿಸಿದ್ದೇ ಇಲ್ಲ. ಅವರು ಶಾಲಾ ಬಾಲಿಕೆಯಂತೆ ಕಿಲ ಕಿಲ ನಕ್ಕಿದ್ದು ನನಗೆ ಕೇಳಿಸಿತು. ಆ ಮೇಲೆ ಅವರು ಅಂದರು, "ನಾನು ನಾಳೆ ಸಂಜೆ ಯುನೆಸ್ಕೋದಲ್ಲಿ ಶ್ರೀ ಭಾಗಲಾ ಅವರಿಗಾಗಿ ಒಂದು ಪಾರ್ಟಿ ನೀಡುವೆ. ಅಲ್ಲಿ ನಿಮ್ಮನ್ನು ಕಾಣುವೆನೆಂದು ಆಶಿಸುವೆ."

ನನಗೆ ಬೇರೆಯಾಗಿ ಆಮಂತ್ರಣವೂ ಇತ್ತು, ಸ್ಥಾನಿಕ ಭಾರತೀಯ ವರದಿಗಾರನೆಂದು, ನನ್ನ ಹೆಂಡತಿ ಎಲಿಮೊರ್(ಅಮೇರಿಕನ್)ಳೊಂದಿಗೆ. ಎಲಿಮೊರ್‌ಳಿಗೆ ಶ್ರೀಮತಿ ಗಾಂಧಿಯವರರೊಡನೆ ತುಂಬ ಚೆನ್ನಾಗಿಯೇ ಕೂಡಿ ಬಂತು.

ಪಾರ್ಟಿ ಮುಗಿಯುತ್ತಿದ್ದಂತೆ, ಶ್ರೀಮತಿ ಗಾಂಧಿಯವರೊಡನೆ ನಾವು ಕೂತಿದ್ದೆವು. ಭಾರತೀಯ 'ಕಾಕ್‌ಟೇಲ್' ಪಾರ್ಟಿಗಳಲ್ಲಿ ಸ್ಥಾಪಿತ ನೈವೇದ್ಯವಾದ ಭಜಿ ಪಕೋಡಾಗಳ ಬಗೆಗೆ ಇಂದಿರಾ ಗಾಂಧಿ ವಾಡಿಕೆಯ ಅಭಿಪ್ರಾಯಗಳನ್ನು ಪ್ರಕಟಿಸಿದರು. ಆಗ ಎಲಿಮೊರ್‌ಳಿಗೆ ಒಂದು ಯೋಜನೆ ತೋಚಿತು– ಶ್ರೀಮತಿ ಗಾಂಧಿಯನ್ನು ಆ ಸಂಜೆ ಇಡೀ ನಮ್ಮೊಂದಿಗೇ ಇಟ್ಟುಕೊಳ್ಳಬೇಕು. ಸ್ಥಾನಿಕ ಅಮೇರಿಕನ್ ಸೊಸೈಟಿ 'ಅಧ್ಯಕ್ಷ ಕೆನ್ನಡಿಯ ಕೊನೆಯ ಮೂರು ದಿನ'ಗಳ ಕುರಿತು ೮ ಗಂಟೆಗೆ ಚಿತ್ರಪಟ ತೋರಿಸಲಿತ್ತು. "ಅದನ್ನು ಶ್ರೀಮತಿ ಗಾಂಧಿ ನೋಡುವರೇ?" ಎಲಿಮೊರ್ ಕೇಳಿದಳು. ಶ್ರೀಮತಿ ಗಾಂಧಿ ಖುಷಿಯಿಂದ ಒಪ್ಪಿದರು. ಆಗ ಎಲಿಮೊರ್ ಅವರನ್ನು ಜತೆಯಲ್ಲಿಯೇ ಕರೆದುಕೊಂಡು ಹೊರಟಳು. ತಾನೇ ಕಾರು ನಡೆಯಿಸಲು ಕೂತಳು. ಶ್ರೀಮತಿ ಗಾಂಧಿಯನ್ನು ಮುಂದುಗಡೆಗೆ ತನ್ನ ಪಕ್ಕದಲ್ಲಿಯೇ ಕೂಡ್ರಿಸಿಕೊಂಡಳು.

ಶ್ರೀಮತಿ ಗಾಂಧಿ ಆ ಚಲನಚಿತ್ರವನ್ನು ನೋಡಿ ಸ್ಪಷ್ಟವಾಗಿಯೇ ಸಂತೋಷಪಟ್ಟರು. ಆ ಹಂತದಲ್ಲಿ ಎಲಿಮೋರ್‌ಳಿಗೆ ಇನ್ನೊಂದು ಹೊಂಚು ತೋಚಿತು. "ಶ್ರೀಮತಿ ಗಾಂಧಿಯವರೇ, ನಾವು ಏನೂ ತಿಂದಿಲ್ಲ. ನೀವೂ ಇಲ್ಲ. ನೀವು ನಮ್ಮ ಮನೆಗೆ ಬಂದರೆ, ನಮ್ಮೊಂದಿಗೇ ಊಟ ಹಂಚಿಕೊಂಡರೆ-ಪಾಲಿಗೆ ಬಂದ ಊಟ!-ನಮಗೆ ತುಂಬ ಗೌರವ. ನಾವು ನಿಮಗೆ ಪಂಚತಾರಾ ಊಟ ಕೊಡಲಾರೆವು..." "ಓ ನನಗೆ ಖುಷಿಯೇ!" ಇಂದಿರಾಜೀ ಅಂದರು. ಎಲಿಮೋರ್‌ಳಿಗೂ ಕಡಿಮೆ ಖುಷಿ ಆಗಲಿಲ್ಲ. ನಾವು ಶ್ರೀಮತಿ ಗಾಂಧಿಯನ್ನು ನಮ್ಮ ಒನ್ ಬೆಡ್ ರೂಂ ಅಪಾರ್ಟಮೆಂಟಿನ ಮನೆಗೆ ಕರೆದೊಯ್ದೆವು (ಅದು ರೂಪಿರ್ಸುರೆ ನಿಕೋಲದ ಎಡದಂಡೆಯಲ್ಲಿ). ನನ್ನ ಹೆಂಡತಿ ಸೂಪ್, ಸ್ಕ್ರಾಂಬಲ್ಡ್ ತತ್ತಿ ಹಾಗೂ ಸ್ಪೆಘೇಟಿ ಅಣಿಗೊಳಿಸಲು ಅಡುಗೆ ಕೋಣೆ ಹೊಕ್ಕಾಗ ನಾನು ಊಟದ ಮೇಜನ್ನು ಸಿದ್ಧಪಡಿಸತೊಡಗಿದೆನು.

ನಾನು ದಾರಿಯಲ್ಲಿಯೇ ಶ್ರೀಮತಿ ಗಾಂಧಿಯವರಿಗೆ ಆಶ್ವಾಸನೆ ನೀಡಿದ್ದೆ, ಅವರೊಂದಿಗೆ ರಾಜಕಾರಣ ಮಾತಾಡಲಿಕ್ಕೆ ನಾವು ಅವರನ್ನು ಮನೆಗೆ ಕರೆಯುತ್ತಿಲ್ಲವೆಂದು. ಆಗ ಅವರು ತುಸು ಸಿಡುಕಿನ ದನಿಯಲ್ಲಿ ಅಂದಿದ್ದರು "ಯಾಕೆ ನಾವು ಮಾತಾಡಬಾರದು?". ತಮ್ಮನ್ನು ಒಬ್ಬ ರಾಜಕಾರಣಿ ಘಟಾನುಘಟಿಯೆಂದು ನಾನು ಪರಿಗಣಿಸಿಲ್ಲವೆಂದು ಅವರು ಭಾವಿಸಿ ನೊಂದಿರಬೇಕು. ನಾನು ಅವರಿಗೆ ಮೊದಲೇ ಸಮಜಾಯಿಸಿ ಕೊಡಬೇಕಾಯಿತು—"ನಿಮ್ಮನ್ನು ನಾವು ಆಮಂತ್ರಿಸಿದ್ದು ಕೇವಲ ನಿಮಗಾಗಿಯೇ ಹೊರತು ನೀವೊಬ್ಬ ಪ್ರಖ್ಯಾತ ವ್ಯಕ್ತಿಯೆಂದಲ್ಲ!"

ಈಗ ನಾನು ಮೇಜು ಸಜ್ಜುಗೊಳಿಸುತ್ತಿರುವಾಗ ಅವರು ನೋಡುತ್ತಿದ್ದಂತೆ ಸಡಿಲಾದರು:. "ನಾನು ನೋಡ್ತೇನೆ. ನಮ್ಮ ಭಾರತೀಯ ಗಂಡಂದಿರಿಗೆ ಗೊತ್ತು ಹೇಗೆ ಕೆಲಸ ಮಾಡಬೇಕಂತ" ಅವರು ಸುರು ಮಾಡಿದರು, ತುಸು ಛೇಡಿಸುವ 'ಮೂಡಿ'ನಲ್ಲಿ. ನಾನೂ ಸಮಯೋಚಿತ ಮಟ್ಟಕ್ಕೆ ಏರಿ ಅಂದೆ, "ಚೆನ್ನಾಗಿ ಸಂಬಳ ಸಿಗದ ಭಾರತೀಯ ಗಂಡಂದಿರು ಏನೂ ಮಾಡಬಲ್ಲರು." ಇದೇ ಸರಸ-ಸಲ್ಲಾಪವನ್ನು ನಾವು ಮುಂದುವರಿಸಿದೆವು. ನಾನು ಶ್ರೀಮತಿ ಗಾಂಧಿಯವರಿಗೆ ನಮ್ಮಲ್ಲಿದ್ದ ಉತ್ತಮ ಬ್ಯೂಜೋಲಾಯ (Beaujolais?) ಸವಿಯಲು ಕೊಟ್ಟೆ. ಮತ್ತು ಆ ಸಂಜೆಯ ಮೂಡಿಗೆ ಸಂವಾದಿಯಾಗುವಂತೆ ಮೊಜಾರ್ಟ್‌ನ ಸಂಗೀತವನ್ನು ರಿಕಾರ್ಡ್ ಪ್ಲೇಯರ ಮೇಲೆ ಹಾಕಿದೆ. ಎಲಿಮೊರಳೂ ನಮ್ಮನ್ನು ಸೇರಿಕೊಂಡಳು ಊಟದ ಮೇಜಿಗೆ. ಶ್ರೀಮತಿ ಗಾಂಧಿಯಂತೂ ಹಿರಿದಾದ form ನಲ್ಲಿ ಇದ್ದರು. ಅವರು ತಾವು ವಾಸಿಸುವ ಜನ ವಿರಳ (ಸೇವಕರ ನೆರವಿಲ್ಲದ) ಮನೆಯ ಬಗೆಗೆ, ತನ್ನ ಪ್ರವಾಸದ ಪ್ರೀತಿಯ ಬಗೆಗೆ, ಫಿರೋಜ ಗಾಂಧಿ ಪ್ಯಾರಿಸ್ಸಿನ ಸಕ್ರೆಕೋರ್ ಚರ್ಚಿನ ಮೆಟ್ಟಲುಗಳ ಮೇಲೆ ತನ್ನ ಮದುವೆಗೆ ಬೇಡಿಕೆ ಹಾಕಿದ ಬಗೆಗೆ ಎಲ್ಲಕ್ಕೂ ಹೆಚ್ಚಾಗಿ ತನಗೆ ಫ್ರೆಂಚ್ ಬ್ರೆಡ್ ಮೆಚ್ಚಿಗೆ ಆಗುವದರ ಬಗೆಗೆ, (ಅಷ್ಟು ತಡವಾದ ಹೊತ್ತಿಗೂ ನಾವು ನಮ್ಮ ಬ್ರೆಡ್ ತಯಾರಿಕೆಯವನಿಂದ ಹೊಸತಾಗಿ ತಾಜಾ ಬ್ರೆಡ್ ಟೋಸ್ಟ್ ಪಡೆಯುವ ಶ್ರಮಪಟ್ಟಿದ್ದೆವು.) ದೈನಂದಿನ ನಿರ್ವಾಹ ಜಾಯಿಗೂಡಿಸುವದು ಎಷ್ಟು ಬಿಗಿ ಎಂಬುದರ ಬಗೆಗೆ, ವಿದೇಶ ಸಂಚಾರದಲ್ಲಿ ತಾನು ಊಟ ತಪ್ಪಿಸಿ ಹಣ ಶೇಖರಿಸುತ್ತಿದ್ದ ಬಗೆಗೆ — ಇಂಗ್ಲಂಡಿನಲ್ಲಿ ಕಲಿಯುತ್ತಿದ್ದ ತನ್ನ ಇಬ್ಬರು ಹುಡುಗರಿಗೆ ಕಳುಹಿಸಲಿಕ್ಕೆ, (ನನಗೆ ಆಮೇಲೆ ಯಾರೋ ಅಂದರು ಡಾ. ಧರ್ಮತೇಜಾ ಈ ಹುಡುಗರ ವೆಚ್ಚ ಭರಿಸುತ್ತಿದ್ದರೆಂದು. ಆದರೆ ಇದು ದುಷ್ಟ ಪ್ರಚಾರವೂ ಇದ್ದಿರಬಹುದು.) ಪ್ಯಾರಿಸ್ಸಿನಲ್ಲಿಯೂ ಅವರು ಹೋಟೇಲಿಗೆ ಹೋಗದೆ ಹಾದಿಯ ಪಕ್ಕದ 'ಬಿಸ್ಟ್ರೊ'ಕ್ಕೆ ನಾಶ್ತ್ಯಾಕ್ಕಾಗಿ ತಾನು ಹೋಗುವದರ ಬಗೆಗೆ,— ಹೀಗೆ ಮುಂತಾಗಿ ಹರಟಿದರು.

ನಾವು ೧೦ ರ ಸುಮಾರಿಗೆ ಮನೆಗೆ ಬಂದಿ

ದ್ದೆವು. ನಸುಕಿನ ೨-೩೦ ಬಡಿದಾಗಲೂ ಹರಟುತ್ತಲೇ ಇದ್ದೆವು! ಅದು ತಡವಾಯಿತೆಂದು ನಮಗ್ಯಾರಿಗೂ ಅನಿಸಲೇ ಇಲ್ಲ. ನಾವು ಹಳೆಯ ಗೆಳೆಯರೋ ಎಂಬಂತೆ ಶ್ರೀಮತಿ ಗಾಂಧಿ ನಮ್ಮೊಡನೆ ಹರಟುತ್ತಿದ್ದರು. ಅಲ್ಲಿ ಯಾವ ಆತಂಕದ ನಾಲಿಗೆಯ ಹಿಡಿತ ಬಿಗಿತ ಏನೂ ಇದ್ದಿಲ್ಲ. ಅವರು ನನ್ನನ್ನು ನನ್ನ ಹೆಂಡತಿಯನ್ನು ಪೂರ್ತಿ ನಂಬಿದಂತೆ ಕಂಡಿತು.

ನಮಗೆ ಈಗ ತಿಳಿಯಿತು. ಶ್ರೀಮತಿ ಗಾಂಧಿ ಪ್ಯಾರಿಸ್ಸನ್ನು ಬಹಳವಾಗಿ ಪ್ರೀತಿಸುತ್ತಾರೆ. ಆದರೆ ಅದನ್ನು ನೋಡಲು ಅವರಿಗೆ ಸಾಕಷ್ಟು ಸಮಯ ಸಿಗುತ್ತಿದ್ದಿಲ್ಲ. ಪ್ಯಾರಿಸ್ಸಿನ ಆಹ್ಲಾದಕರ ಮೂಲೆಮೂಲೆಗಳನ್ನು ಸುತ್ತಾಡಿ ನೋಡಲಿಕ್ಕೆ. ನಾನು ಈ ನಗರವನ್ನು ನನ್ನ ಅಂಗೈಯಷ್ಟು ಬಲ್ಲೆನೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದೆ. ಅವರನ್ನು ನಾನೇ ನಗರದ ಸುತ್ತು ಸಂಚಾರಕ್ಕೆ ಒಮ್ಮೆ ಒಯ್ಯುವೆನೆಂದು ಮಾತು ಕೊಟ್ಟೆ — ಮತ್ತೆ ಮುಂದಿನ ಸಲ ಅವರು ಪ್ಯಾರಿಸ್ಸಿಗೆ ಭೆಟ್ಟಿ ಕೊಟ್ಟಾಗ. "ಈ ಮಾತು ಗಟ್ಟಿ ತಾನೇ?" ಆಕೆ ಹಿಗ್ಗಿ ಕೇಳಿದರು. ನಾನು ಹೌದೆಂದೆನು. ಇಬ್ಬರೂ ಕೈಕುಲುಕಿದೆವು.

ಆಗ ವೇಳೆ ೨-೩೦ ಕಳೆದುಹೋಗಿತ್ತು. ಇದನ್ನು ಕಂಡು ಅವರು ಅಣಕದ ಶಾಕ್ ಕಾಣಿಸಿ ಅಂದರು, "ಸಂಜೆ ಇಲ್ಲಿಗೇ ಮುಗಿಸೋಣ ಎಂದು ಅನ್ನಬೇಡಿ, ಮತ್ತೆ!" ನಾನು ಒಲ್ಲೆ ಅಂದೆ. ಅವರ ವೇಳೆಯನ್ನು ನಾನೇ ಒಕ್ಕೈಯಾಗಿ ಹಿಡಿದಿಟ್ಟುಕೊಂಡರೆ ಭಾರತ ಸರಕಾರ ಏನೆನ್ನಬಹುದು! ಈಗ ನಾನು ಅವರನ್ನು, ಅವರ ಕಾರ್ಯದರ್ಶಿಯನ್ನು ಅವರ ಹೊಟೇಲಿಗೆ ಒಯ್ದು ಬಿಟ್ಟೆನು. ಅಗಲುವಾಗ ಅವರೆಂದರು, "ನೀವು ಕೊಟ್ಟ ಮಾತು ನೆನಪಿರಲಿ!" ನಾನೆಂದೆ, "ನೆನಪಿಡುವೆ."

ಆಮೇಲೆ ಅದು ಘಟಿಸಿತು. ಶ್ರೀ ಲಾಲಬಹಾದ್ದೂರ ಶಾಸ್ತ್ರಿ ನಿಧನ ಹೊಂದಿದರು. ಶ್ರೀಮತಿ ಗಾಂಧಿ ಪ್ರಧಾನಿಯಾಗಿ ಆಯ್ಕೆಯಾದರು. ಆಗ ಅವರು ಲಂಡನ್ನಿನಿಂದ ಪ್ಯಾರಿಸ್ಸಿಗೆ ಬಂದರು ಜನರಲ್ ದ ಗಾಲ್ ಅವರನ್ನು ಭೆಟ್ಟಿಯಾಗಲಿದ್ದರು. ಈ ಸಲ ಅವರು ಹಳೆಯ ಹೋಟೇಲಿನಲ್ಲಿ ಇಳಿಯಲಿಲ್ಲ. ಭಾರತದ ರಾಯಭಾರಿ ನವಾಬ ಯಾರ್‌ಜಂಗರೊಂದಿಗೆ ತಂಗಿದ್ದರು. ನನ್ನ ಮಿತ್ರ ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾದ ಪ್ರತಿನಿಧಿ ಶ್ರೀ ಮಾಲ್ಕಾನಿಯೊಂದಿಗೆ ಅವರ ಸಂದರ್ಶನಕ್ಕೆ ಸಮಯ ಕೇಳಿದೆ. "ಈಗ ನೀನು ಶ್ರೀಮತಿ ಗಾಂಧಿಗೆ ಏನನ್ನುವಿ?" ನನ್ನ ಹೆಂಡತಿ ಕೇಳಿದಳು. "ನನಗೆ ಗೊತ್ತಿಲ್ಲ. ಆದರೆ ಅವರು ನನ್ನ ಗುರುತು ಹಿಡಿಯದಿದ್ದರೆ ನಾನೂ ಹಾಗೆಯೇ ಮಾಡುವೆ":

ಮತ್ತೆ ಆದದ್ದೂ ಹಾಗೆಯೇ. ಅವರು ಒಂದನೇ ಮಹಡಿಯಿಂದ ಪಾವಟಿಗೆ ಇಳಿದು ಬಂದರು ದಿವಾನಖಾನೆಯಲ್ಲಿ ನಮ್ಮನ್ನು ಕಾಣಲು. ಆದರೆ ಅವರ ಕಣ್ಣನಲ್ಲಿ ಗುರುತಿನ ಯಾವ ಸುಳಿವೂ ಇದ್ದಿಲ್ಲ. ಅವರು ತಣ್ಣಗೇ ದೂರ ತಟಸ್ಥರಾಗಿದ್ದರು. ಕೇವಲ ಕೆಲವು ತಿಂಗಳು ಹಿಂದೆ ಇವರು ನನ್ನ ಮನೆಯಲ್ಲಿ ನನ್ನ ಅತಿಥಿಯಾಗಿದ್ದು, ಹಳೆಯ ಆತ್ಮೀಯ ಸಲುಗೆಯ ಗೆಳೆಯರೊ ಎಂಬಂತೆ ನಾವು ಹರಟೆ ಹೊಡೆದಿದ್ದೆವು ಎಂಬ ಸಂಗತಿಗೆ ಅವರು ತುಸುವೂ ರಿಯಾಯತಿ ತೋರಿಸಲಿಲ್ಲ. ನಾನೂ ಅಷ್ಟೇ ತಣ್ಣಗೆ ದೂರಸ್ಥನಾಗಿ ವರ್ತಿಸಿದೆ.

ಆಮೇಲೆ ಬೇರೆ ಬೇರೆ ಪತ್ರಿಕಾ ಪರಿಷತ್ತುಗಳಲ್ಲಿ ಅವರನ್ನು ಭೆಟ್ಟಿಯಾಗುವ ಸಂದರ್ಭಗಳು ಒದಗಿದವು. ಆರಂಭದ ದಿನಗಳಲ್ಲಿ ಅವರು ಪತ್ರಿಕಾ ಪ್ರಪಂಚದೊಂದಿಗೆ ಸ್ವಸ್ಥ ಚಿತ್ತದಿಂದ ನೆಮ್ಮದಿಯಾಗಿ ಎಂದೂ ಇರುತ್ತಿದ್ದಿಲ್ಲ. ಅರ್ಥಪೂರ್ಣ ಒತ್ತಡಗಳನ್ನು ಕೊಡುವದೂ ವಿರಳವಾಗಿತ್ತು. ನಾನು ಮನಸ್ಸಿನಲ್ಲಿ ನಿರ್ಧರಿಸಿಕೊಂಡೆ, ಶಕ್ಯವಿದ್ದಷ್ಟು ಏನೂ ಪ್ರಶ್ನೆ ಕೇಳಕೂಡದು.

ಒಂದು ಸಂದರ್ಭದಲ್ಲಿ ನ್ಯೂಯಾರ್ಕಿನಲ್ಲಿ

ಸುದ್ದಿಗಾರರ ಸಭೆಯಲ್ಲಿ ನಾನು ಹಿಂಬದಿಗೆ ಕುಳಿತುಕೊಂಡು ಬರಕೊಳ್ಳುತ್ತಲಿದ್ದೆ. ಸಭೆ ಮುಗಿಯಲು ಬಂತು; ನನ್ನ ಮುಂದೆ ಕೂತ ಸಹಚಾರಿಗಳು ಹೊರಟೆದ್ದು ಹೋದರು. ನಾನು ಹೊರಡಲು ಕೊನೆಯವನಾದೆ. ನಾನು ಶ್ರೀಮತಿ ಗಾಂಧಿಗೆ ಯಾವ ಗುರುತನ್ನೂ ಕಾಣಿಸಿಕೊಂಡಿದ್ದಿಲ್ಲ. ನನಗೆ ನೋವಾಗಿದ್ದಿಲ್ಲ. ಆದರೆ ನನ್ನ ಸ್ವಭಾವವನ್ನು ಅವರು ತಪ್ಪು ತೀರ್ಮಾನಿಸಿದ ಬಗೆಗೆ ಬೇಸರವೆನಿಸಿತ್ತು. ಬಹುಶಃ ಅವರಿಗೂ ಅನಿಸಿರಬೇಕು– ತಾನೂ ನನಗೆ ತಪ್ಪು ಮಾಡಿದೆನೆಂದು. ಅವರಿಗೆ ನಮಸ್ಕರಿಸಿ ನಾನು ದೂರ ಹೋಗಲು ಸರಿದಂತೆ ಅವರು ಮೃದು ದನಿಯಲ್ಲಿ ಕೇಳಿದರು, "ನೀವೇಕೆ ನನಗೆ ಒಂದೂ ಪ್ರಶ್ನೆ ಕೇಳಲಿಲ್ಲ?" ಪ್ರಾಂಜಲವಾಗಿಯೂ ನಾನು ಕೇಳಬೇಕಾದದ್ದು ಏನೂ ಇದ್ದಿಲ್ಲ. ಮತ್ತು ಹಾಗೆಯೇ ನಾನು ಅವರಿಗೆ ಹೇಳಿದೆ. ಆಮೇಲೆ, ನಾನು ಸಿಡುಕುಗೊಂಡಿರಬಹುದೆಂದು ಕಾಣಿಸಿಕೊಳ್ಳಬಾರದೆಂದು ಅಂದೆ, "ನ್ಯೂಯಾರ್ಕಿನಲ್ಲಿ ಯಾವದೆ ನಾಟಕ ನೋಡಿದಿರಾ?"

ಅವರಿಗೆ ಸಂತೋಷವಾಯಿತು. ನಾನು ಅವರನ್ನು ಅರ್ಥಮಾಡಿಕೊಳ್ಳಲು ಯತ್ನಿಸಿದೆನೆಂದು. ಅವರು ನೋಡಲಿಕ್ಕೆ ಒಂದೆರಡು ನಾಟಕಗಳನ್ನು ಶಿಫಾರಸು ಮಾಡಲು ನನಗೆ ಹೇಳಿದರು. ಅವರು ನನ್ನೊಡನೆ ಮಾತಾಡುತ್ತಿರಲು ಉತ್ಸುಕರಾಗಿ ಕಂಡರು ಅಲ್ಲದೆ ನಾನು ಹೋಗಬೇಕೆಂದು ಅವರಿಗೆ ಆತುರವಿದ್ದಂತೆ ಕಂಡು ಬರಲಿಲ್ಲ. ನಾನು ಕೇಳಿದೆ, "ಸದ್ಯ ನೀವು ಯಾವ ಪುಸ್ತಕಗಳನ್ನು ಓದುತ್ತಿರುವಿರಿ?". ಅವರೆಂದರು, "ಏನು ಓದಬೇಕೆಂಬುದರ ಕುರಿತು ಸೂಚನೆಗಳಿಗಾಗಿ ನಟವರಸಿಂಗರನ್ನು (ಇವರು ಅಂದು ಅಮೇರಿಕೆಯಲ್ಲಿ ನಮ್ಮ ರಾಯಭಾರಿ ಅನುವಾದಕ) ಕೇಳಬೇಕೆಂದಿದ್ದೇನೆ" ನಾನು ಅಣಕದ ತುಚ್ಛತೆಯಿಂದ ಅಂದೆ "ಅವರಿಗೆ ಅಮೇರಿಕನ್ ವಾಙ್ಮಯದ ಬಗೆಗೆ ಏನು ಗೊತ್ತು? ನ್ಯೂಯಾರ್ಕಿನಲ್ಲಿ ನನಗೆ ಕೇಳಿರಿ." ಈ ಸಲ ಅವರು ನಕ್ಕರು. ಈಗ ನನಗೆ ಮನದಟ್ಟಾಯಿತು.

## ವ್ಯವಸ್ಥೆ

ಯಾರೋ ಮಂತ್ರಿಗಳು ಬರುವವರಿದ್ದರು. ಸ್ವಾಗತ ದ್ವಾರ ಸಿದ್ಧವಾಗಿತ್ತು. ಮಂತ್ರಿಗಳ ದರ್ಶನಕ್ಕಾಗಿ ದೊಡ್ಡ ಜನಸಂದಣಿ ಸೇರಿತ್ತು. ಪೋಲೀಸು ವ್ಯವಸ್ಥೆಯೂ ಬಲವಾಗಿತ್ತು.

ಗುಂಪಿನಲ್ಲಿದ್ದ ಒಬ್ಬವ್ಯಕ್ತಿ ತನ್ನ ಹತ್ತಿರ ನಿಂತಿದ್ದವನನ್ನು ಕೇಳಿದ, "ಎದುರಿಗೆ ನಿಂತಿರುವ ಆ ಖಾದಿಧಾರಿ ನಾಯಕನಾರು?"

"ನಾಯಕನಲ್ಲ, ಈ ಪ್ರದೇಶದ ಪ್ರಸಿದ್ಧ ದಾದಾ. ಕಳ್ಳತನ, ಡಕಾಯಿತಿ, ಖೂನಿ, ಬೆಂಕಿ, ಬಲಾತ್ಕಾರ ಎಲ್ಲವೂ ಈತನ ಸಂಜ್ಞೆಯಿಂದಲೇ ನಡೆಯುತ್ತದೆ-, ತಿಳಿದವನೊಬ್ಬ ತೀಕ್ಷ್ಣವಾದರೂ ಮೆಲ್ಲಗಿನ ಸ್ವರದಲ್ಲಿ ಉತ್ತರಿಸಿದ.

ಅಷ್ಟರಲ್ಲಿ ಮಂತ್ರಿಗಳ ಕಾರು ಅಲ್ಲಿಗೆ ಬಂತು. ಮಂತ್ರಿಗಳು ಇಳಿಯುತ್ತಿದ್ದಂತೆಯೇ ಉತ್ಸಾಹದಿಂದ ಆ ಖಾದಿಧಾರಿಯತ್ತ ನಡೆದರು. ನಗುತ್ತಾ ಇಬ್ಬರೂ ಆರಾಮವಾಗಿ ಮಾತನಾಡತೊಡಗಿದರು.

ಇತ್ತ ಮಂತ್ರಿಗಳ ದರ್ಶನಕ್ಕಾಗಿ ಕಾತರರಾಗಿದ್ದ ಜನರ ಗುಂಪನ್ನು ಪೋಲೀಸರು ದೊಣ್ಣೆ ತಿರುಗಿಸುತ್ತಾ ನಿಯಂತ್ರಿಸುತ್ತಿದ್ದರು.

ಹಿಂದಿಯಲ್ಲಿ: ಶ್ರೀ ಸುರೇಶ್ ರಾಠಿ
ಕನ್ನಡಕ್ಕೆ: ಎಸ್. ಎ. ಸುಜಾತ

ಸುತ್ತಲೂ ಯಾರೂ ಇರದಿದ್ದರೆ ಅವರು ಇನ್ನೂ ಹೆಚ್ಚು ಖುಶಿಯಾಗಿ ತೋರಬಹುದಿತ್ತು. ಆದಾಗ್ಯೂ ಅವರ ಮುಂಚಿನ ತಣ್ಣಗಿನ ತುಪ್ಪಿೀ ಭಾವ ನನ್ನಲ್ಲಿ ಇನ್ನೂ ಕಡಿಯುತ್ತಿತ್ತು. ನಾನು ತೀರ್ಮಾನಿಸಿದೆ, ತೀರ ಅಗತ್ಯವಿರುವದಕ್ಕಿಂತ ಹೆಚ್ಚು ಅವರ ಮೇಲೆ ಆಕ್ರಮಿಸಬಾರದು. ಹಿಂದೊಮ್ಮೆ ಅವರು ನನ್ನಲ್ಲಿಟ್ಟ ವಿಶ್ವಾಸವನ್ನು ಮುರಿಸಿಕೊಳ್ಳಲು ಹವಣಿಸುವೆನೆಂದು ಭಾವಿಸಲು ಅವರಿಗೆ ನೆಪಕೊಡಬಾರದು ಎಂದು ನಿರ್ಧರಿಸಿದೆ.

ಇದೆ ಕಥಾಪ್ರಸಂಗ ಮತ್ತೊಮ್ಮೆ ೧೯೭೩ರ ಮೇ ತಿಂಗಳಲ್ಲಿ ಜಮೈಕಾದಲ್ಲಿ ಪುನರಾವೃತ್ತಿಗೊಂಡಿತು. ಅವರು ಕಾಮನ್‌ವೆಲ್ತ್ ಪ್ರಧಾನಿಗಳ ಪರಿಷತ್ತಿನ ಅಧಿವೇಶನಕ್ಕೆ ಹಾಜರಾಗಿದ್ದಾಗ ಎಂದಿನಂತೆ, ನಾನು ದೂರ ಹಿಂದೆ ಕುಳಿತೆ— ಪ್ರಶ್ನೋತ್ತರಗಳಲ್ಲಿ ಪಾಲುಗೊಳ್ಳಲು ಅಕ್ಷರಶಃ ನಿರಾಕರಿಸಿ. ಮತ್ತೆ ಈ ಪತ್ರಿಕಾಪರಿಷತ್ತು ಮುಗಿಯುತಿದ್ದಂತೆ ನಾನು ಹೊರಟು ನಿಂತಾಗ ಅದೇ ಪ್ರಶ್ನೆ ಎದುರಾಯಿತು, "ನೀವೇಕೆ ನನಗೆ ಒಂದೂ ಪ್ರಶ್ನೆ ಕೇಳಲಿಲ್ಲ?" ಪ್ರಧಾನಿಯಾಗಿ ಅವರ ನಿಲುಮೆ ನಾನು ಅರಿತಿರುವೆನೆಂದು ಅವರಿಗೆ ಮನವರಿಕೆ ಮಾಡಿಕೊಡಬೇಕೆಂದು ಅವರಿಗೆ ತೋರಿರಬೇಕು. ಆದರೆ ನಾನು ಹಾಗೇನು ಮಾಡಲಾರದಾದೆ. ನಾನು ನನ್ನ ಠರಾವಿಕ ಉತ್ತರವಿತ್ತೆ, "ನನಗೇನೂ ಕೇಳುವದಿದ್ದಿಲ್ಲ." ಈಗ ಅವರು ನನಗೆ ಒಂದು ವೈಯಕ್ತಿಕ ಪ್ರಶ್ನೆ ಎಸೆದರು ಹಿರಿಯಕ್ಕನ ಠೀವಿಯಲ್ಲಿ. "ಕಳೆದ ಸಂಜೆ ನೀವು ಏನು ಮಾಡುತ್ತಿದ್ದಿರಿ?" ಕಳೆದ ಅಪರಾಹ್ನ ಅಧಿವೇಶನ ಮುಗಿದಿತ್ತು. ಮತ್ತು ಪತ್ರಿಕಾಕರ್ತರನ್ನು ಪಾರ್ಟಿಗಳಿಗೆ ಕರೆಯುತ್ತಿದ್ದರು. "ನಾನು ಕುಡಿಯುತಿದ್ದೆ, ಕುಣಿಯುತಿದ್ದೆ!"— ಅಂದೆ. "ಯಾರೊಂದಿಗೆ?" "ಚೆಲುವೆ ಹುಡುಗಿಯರೊಂದಿಗೆ— ಸ್ವಾಭಾವಿಕವಾಗಿಯೇ"

ಅವರ ಮೊಗದಲ್ಲಿ ಕಿರುನಗೆ ಮಿನುಗಿತು. ಅವರು ಕೇಳಿದರು, "ಪಾರ್ಟಿಯಲ್ಲಿ ಸ್ವಾರಸ್ಯದ ವ್ಯಕ್ತಿ ಯಾರಾದರೂ ಇದ್ದರೇ?" "ಹೌದು: ಜಾರ್ಜ ಮೈಕ್ಸ್". ಈ ಮೈಕ್ಸ್ ಹಂಗೇರಿಯಲ್ಲಿ ಹುಟ್ಟಿದ ಬ್ರಿಟಿಷ್ ವ್ಯಕ್ತಿ. ನಗೆಬರಹಗಳಿಗಾಗಿ ಪ್ರಸಿದ್ಧ. "ಈತ ಬಹಳ ವಿನೋದಿಯಾಗಿದ್ದನೆ?" "ಇಲ್ಲ, ವ್ಯಾಪಂ ಈತ ಬಲು ಗಂಭೀರ ಮನುಷ್ಯ" ಶ್ರೀಮತಿ ಗಾಂಧಿ ಇದಿರುತ್ತರ ಎಸೆದರು "ಎಲ್ಲ ವಿನೋದೀ ಮಂದಿ ಗಂಭೀರರಾಗಿರುತ್ತಾರೆ!"

•

ತುರ್ತುಪರಿಸ್ಥಿತಿಯ ಮೊದಲ ಕೆಲವು ತಿಂಗಳಲ್ಲಿ ನಾನು ಅವರನ್ನ ಸಮರ್ಥಿಸಿದ್ದೆ ಮತ್ತು ವಾಶಿಂಗಟನ್ನಿನಲ್ಲಿ ಎಡಕ್ಕೂ ಬಲಕ್ಕೂ ನನ್ನ ಮಿತ್ರರಲ್ಲ ಶತ್ರುಗಳನ್ನು ಮಾಡಿಕೊಂಡಿದ್ದೆ. ನನ್ನ ಊಹೆಯಂತೆ ನನ್ನ ಸಮಕಾಲೀನರಿಂದ ಅತ್ಯಂತ ತಿರಸ್ಕಾರಕ್ಕೆ ಗುರಿಯಾದ ಮನುಷ್ಯ ನಾನಾಗಿದ್ದೆ. ಭಾರತದಲ್ಲಿಯ ನನ್ನ ಗೆಳೆಯರ ವರದಿಗಳು ಬಂದ ಮೇಲೆಯೇ ನಾನು ಪಾಪ ಮಾಡಿದೆನೆಂದು ಮನಗಂಡೆ— ಅದೂ ಅಕ್ಷಮ್ಯವಾಗಿ.

ನಾನು ಭಾರತಕ್ಕೆ ಮರಳಿದ ಮೇಲೆ ಇಂದಿರಾ ಗಾಂಧಿಯವರ ಟೀಕಾಕಾರನಾಗಿ ಮಾರ್ಪಟ್ಟೆ. ಅನಂತರ ನಾನು ಅವರನ್ನು ಭೆಟ್ಟಿಮಾಡಿದ್ದು ಒಮ್ಮೆ ಮಾತ್ರ, ೧೯೮೦ರ ಚುನಾವಣೆಗಳಿಂತ ತುಸು ಮುಂಚೆ. ಅಂದು ಮುಂಬಯಿಯ ಕಾಂಗ್ರೆಸ್ ಅಧ್ಯಕ್ಷ ಶ್ರೀ ಮುರಲಿ ದೆವ್ರೊರಾ ತಾಜಮಹಲ ಹೋಟೇಲಿನಲ್ಲಿ ಶ್ರೀಮತಿ ಗಾಂಧಿಯವರ ಗೌರವಾರ್ಥ ಏರ್ಪಡಿಸಿದ ಪಾರ್ಟಿಗೆ ಆಮಂತ್ರಿಸಿದ್ದರು. ಇಂದಿರಾಜಿಯನ್ನು ಅಲ್ಲಿ ಭೆಟ್ಟಿಯಾಗಲಿಕ್ಕೆ ನಾನು ಅವರಿಗೆ ಕೇಳಬೇಕಾದದ್ದಾಗಲಿ ಹೇಳಬೇಕಾದದ್ದಾಗಲೀ ಏನೂ ಇದ್ದಿಲ್ಲ. ಆದರೂ ಮುರಲಿ ದೇವ್ರೋರಾರ ಒತ್ತಾಯ. ತಾನು ೩೦ ಮಿತ್ರರನ್ನು ಕರೆದಿದ್ದೇನೆ. (ಅಲ್ಲಿ ಇಂದಿರಾ ಗಾಂಧಿಯವರನ್ನು ಅಭಿನಂದಿಸಲು ಬಂದವರು ೨೦೦ ಮಂದಿ!) ಇನ್ನು ಇವರನ್ನು ಭೇಟಿಯಾಗಲೇ ಬೇಕೆಂದು ಶ್ರೀ ದೇವ್ರೊರಾ ಅವರ ಆಗ್ರಹ.

ಒಬ್ಬ ಅಮೇರಿಕನ್ ವಿದುಷಿಯನ್ನು ನಾನು ಇಂದಿರಾಜೀಯ ಆಫೀಸಿಗೆ ಕಳುಹಿಸಿದೆ. ಅವರ ಪತ್ರಿಕಾಸಲಹೆಗಾರರಾದ ಶ್ರೀ ಎಚ್. ವೈ. ಶಾರದಾ ಪ್ರಸಾದರ ಮುಖಾಂತರ ಈ ವಿದುಷಿ ಇಂದಿರಾ ಗಾಂಧಿಯ ಕುರಿತು ಒಂದು ಪುಸ್ತಕವನ್ನು ಬರೆದಿದ್ದು ಸಮೀಕ್ಷೆಗಾಗಿ ನನಗೆ ಅದರ ಒಂದು ಪ್ರತಿ ಮುಂಚಿತವಾಗಿಯೇ ಕಳುಹಿಸಿದ್ದಳು.

ಇಂದಿರಾಗಾಂಧಿಯನ್ನು ಪರಿಚಯಿಸುವ ಪಕ್ಕಾಗಿ ಸುತ್ತಲೂ ಕರೆದೊಯ್ಯುವಾಗ ಮುರಲಿಯವರು ಕೇಳಿದರು "ನೀವು ಮಾಧವ ಕಾಮತರನ್ನು ಬಲ್ಲಿರಾ?" ಅವರು "ಹೌದು, ಬಲ್ಲೆ" ಅಂದರು— ನನ್ನ ಬಳಿಗೆ ಬರುತ್ತಿರುವಾಗ. ಆದರೆ ಅವರ ದನಿಯಲ್ಲಿ ಕಾವು ಇದ್ದಿಲ್ಲ. ಅವರನ್ನು ಮೆಚ್ಚುವದನ್ನು ಎಂದೋ ಮುಗಿಸಿದ್ದೆ. ಈಗ ಏನನ್ನಬೇಕೆಂದು ತೋಚದೆ ನಾನು ಕೇಳಿದೆ, "ಮೇರಿ ಕ್ಯಾನಾಸ್ ನಿಮ್ಮ ಬಗೆಗೆ ಬರೆದ ಪುಸ್ತಕವನ್ನು ಓದಿದಿರಾ?" "ನನ್ನ ಬಗೆಗೆ ಬರೆದ ಪುಸ್ತಕಗಳನ್ನು ನಾನು ಓದುವದಿಲ್ಲ," ಎಂದು ಇಂದಿರಾ ಗಾಂಧಿ ತುಸು ಅನವಶ್ಯಕ ತೀವ್ರತೆಯಿಂದ ಹೇಳಿ ಇನ್ನೊಂದು ನಮಸ್ಕಾರವನ್ನು ಸ್ವೀಕರಿಸಲು ಮುಂದಾದರು. ನಾನೂ ಪಾರ್ಟಿಯನ್ನು ಬಿಟ್ಟು ಹೊರಟುಬಂದೆ.

*

ಈ ರಾಜಕೀಯ ವ್ಯಕ್ತಿಯ ಹಿಂದೆ ಒಬ್ಬ ಉತ್ಕಟ ಮಾನವೀಯ ವ್ಯಕ್ತಿ ಇತ್ತು. ಅದರ ತೀರ ಸಂಕ್ಷಿಪ್ತ ಇಣುಕು ನೋಟವನ್ನು ನಾನು ಕಂಡಿದ್ದೆ. ನನ್ನ ಅಪೇಕ್ಷೆ ಏನೆಂದರೆ ಶ್ರೀ ಲಾಲ ಬಹಾದ್ದೂರ ಶಾಸ್ತ್ರಿ ಇನ್ನೂ ದೀರ್ಘಕಾಲ ಬದುಕುಳಿದು ಶ್ರೀಮತಿ ಗಾಂಧಿಯವರನ್ನೂ ದೇಶವನ್ನೂ ಅವರ ಪ್ರಧಾನಿ ಪಟ್ಟದ ಯಾತನೆಗಳಿಂದ ಉಳಿಸಬಹುದಾಗಿತ್ತು. ಯಾರಿಗೆ ಗೊತ್ತು ಅವರು ವಾರ್ತಾ ಇಲಾಖೆಯ ಮಂತ್ರಿಯಾಗಿಯೇ ಮುಂದುವರಿದಿದ್ದರೆ, ನನ್ನ ಹೆಂಡತಿ ಮತ್ತು ನಾನು

ಪ್ಯಾರಿಸ್ಸನ್ನು ಅದರ ವಿವಿಧ ಭಾವಭಂಗಿಗಳಲ್ಲಿ ಅವರಿಗೆ ತೋರಿಸಬಹುದಿತ್ತು. ಮತ್ತು ಅವರು ಇನ್ನೂ ದೀರ್ಘಕಾಲ ಬದುಕುಳಿದು ಅಂದವಾಗಿ ಮುದುಕರಾಗಿ ಮಾಗಬಹುದಿತ್ತು. ಆದರೆ ನಿಯತಿಯ ಸಂಕಲ್ಪ ಬೇರೆಯೇ ಆಯಿತು...

ಅವರ ನಿಧನಕ್ಕೆ ನಾನು ಶೋಕಪಟ್ಟೆ. ಆದರೆ ಅವರ ರಾಜಕೀಯ ನಿಲುಮೆಗೆ ನನ್ನ ವಿರೋಧ ಯಾವ ಬದಲಾವಣೆಯನ್ನೂ ಹೊಂದದೇ ಇದೆ. ಅವರು ಚುನಾವಣೆಗಳಲ್ಲಿ ಸೋಲುವದು ನನಗೆ ಇಷ್ಟವಿತ್ತು– ಅವರ ಕೈಯ ಉಪ್ಪು ಉಂಡವರಿಂದಲೇ ಹೀಗೆ ಕೊಲೆಯಾಗುವದಕ್ಕಿಂತ! ಆದರೆ ವ್ಯಕ್ತಿಶಃ ನಾನು ಇಂದಿರಾ ಗಾಂಧಿಯನ್ನು ನೆನಪಿಡಲು ಇಷ್ಟಪಡುವದು, ಒಮ್ಮೆ ನನ್ನ ಅತಿಥಿಯಾಗಿ ನನ್ನ ಹೆಂಡತಿ ಮತ್ತು ನಾನು ಆರು ಗಂಟೆ ಕಾಲ ಹಾಯಾಗಿ ಅವರೊಡನೆ ಹರಟೆಯಲ್ಲಿ ಕಳೆದ ಆ ಪ್ರಸನ್ನ ಅನುಗ್ರಹಶಾಲಿನಿ ಮಹಿಳೆಯಾದ ಶ್ರೀಮತಿ ಗಾಂಧಿಯನ್ನು.

ಅವರು ಅತ್ಯುತ್ತಮ ಅಕ್ಕಳಾಗುತ್ತಿದ್ದಳು– ಸಂರಕ್ಷಕ, ಕಾಳಜಿಯುಳ್ಳ ಸೊಗಸಿನ ಗೆಳತಿ. ಬಹಳಷ್ಟು ಹಾಸ್ಯ ವಿನೋದ ಹಾಗೂ ತಿಳುವಳಿಕೆಯುಳ್ಳವಳು. ಆದರೆ ಆದದ್ದೇನೆಂದರೆ ಅವರು ಕೆಡುಕಿನ ಪ್ರಧಾನಿ ಆಗುವಂತಾಯಿತು.

ಪ್ರಪಂಚ ಕೊನೆಗಾಣುವದು, ವರಕವಿ ಟಿ. ಎಸ್. ಇಲಿಯಟ್ಟನ ಉಕ್ತಿಗೆ ವಿಪರೀತವಾಗಿ, "ಒಂದು ಗೊಣಗಿನೊಂದಿಗಲ್ಲ, ದೊಡ್ಡ ಸದ್ದಿನೊಂದಿಗೆ!" ✡

ರಾಮಚಂದ್ರ ಕಿತ್ತೂರ

# ಮೂಕ-ರೋದನ

ಬೀದಿಯಲ್ಲಿ ಓಡಾಡುವ ಅಸಂಖ್ಯ ದಾರಿಹೋಕರೇ, ಪಾದಚಾರಿಗಳೇ, ನಾಗರಿಕರೇ, ಘಟ್ಟ- ಪಥಿಕರೇ ... ಹಾಂ ... ಗಾಬರಿಯಾಗಬೇಡಿ, ನಾನೇನೂ ಧುರೀಣರ ಹಾಗೆ ಭಾಷಣ ಬಿಗಿಯಲು ನಿಮ್ಮನ್ನು ಸಂಬೋಧಿಸುತ್ತಿಲ್ಲ; ನಾನು ಇಷ್ಟು ಕೂಗಿದರೂ ನೀವಾರೂ ನನ್ನ ಕರೆಯನ್ನು ಕೇಳಲಾರಿರಿ. ನನ್ನ ದುಃಖವನ್ನು ಹಂಚಿಕೊಳ್ಳಲಾರಿರಿ. ನಿಮಗೆಲ್ಲಿಯ ಬಿಡುವು ನನಗಾಗಿ? ದಾರಿಯಲ್ಲಿ ಹೊರಟಾಗ ನಿಮ್ಮದೇ ಗಡಿಬಿಡಿ ನಿಮಗೆ. ಪಾದಚಾರಿಗಳಿಗೆ ವಾಹನಗಳ, ವಾಹನಗಳಿಗೆ ಪಾದಚಾರಿಗಳ ಅಡಚಣೆ; ಶಾಲೆಗೆ ಹೋಗುವ ಬಾಲಕರ ಓಡಾಟದ ಕಿರಿಕಿರಿ, ರಸ್ತೆ ದಾಟುವ ಮುದುಕಿಯರ ಅಡೆತಡೆ. ಬೀದಿಯ ಬದಿಯಲ್ಲಿ ಕುಳಿತು ಮಾರುವ ವ್ಯಾಪಾರಸ್ಥರಿಗೆ ಅವರ ವ್ಯಾಪಾರದ ಚಿಂತೆ. ಯಾರಿಗೆ ಬಿಡುವು ನನ್ನ ಮೊರೆಯನ್ನು ಕೇಳಲು!

ಆದರೂ ಕೂಡ ನಿಮ್ಮನ್ನೆಲ್ಲ ಮತ್ತೊಮ್ಮೆ ಸಂಬೋಧಿಸುತ್ತಿದ್ದೇನೆ. ನನ್ನ ಕಣ್ಣ ಮುಂದೆಯೇ ಹಾಯ್ದು ಹೋಗುವ, ನನ್ನ ಕಾಲ ಬುಡದಲ್ಲಿಯೇ ನಿಂತು ಹೋಗುವ ನಿಮಗಾರಿಗೂ ನನ್ನ ಕಣ್ಣೀರು ಅರ್ಥವಾಗುವದಿಲ್ಲವೇ? ನನ್ನ ಮುಂದೆಯೇ ನಿಲ್ಲುತ್ತೀರಿ, ನನಗೆ ಕೈ ಮುಗಿಯುತ್ತೀರಿ. ನನ್ನ ಮೇಲೆ ಹೂ ಏರಿಸುತ್ತೀರಿ, ನನ್ನ ಮೇಲೆ ಎಣ್ಣೆ ಸುರುವುತ್ತೀರಿ. ನಿಮ್ಮ ಮನಸ್ಸಿನಾಳದ ದುಃಖವನ್ನು ನನ್ನ ಮುಂದೆ ತೋಡಿಕೊಳ್ಳುತ್ತೀರಿ. ಆದರೂ ನಾನು ಮಾತ್ರ ನಿಮಗೆ ಅಪರಿಚಿತ, ಅನಾಮಿಕ. ನನ್ನ ದುಃಖವನ್ನು ಸ್ವಲ್ಪಾದರೂ ಹಂಚಿಕೊಳ್ಳಬಾರದೇ?

ಇಷ್ಟೆಲ್ಲ ಹೇಳಿಯಾದ ಮೇಲೂ ನನ್ನ ಗುರುತು ಸಿಕ್ಕಲಿಲ್ಲವೇ ನಿಮಗೆ? ಹೌದು ನಿಮ್ಮದೇನೂ ತಪ್ಪಿಲ್ಲ ಇದರಲ್ಲಿ. ಇದೋ ಹೇಳಿಯೇ ಬಿಡುತ್ತೇನೆ... ನಾನೊಬ್ಬ ದಾರಿಯ ಬದಿಯಲ್ಲಿ ಬಿದ್ದುಕೊಂಡಿರುವ ಕಲ್ಲು. ಪ್ರಕೃತಿಯ ರಾಗ-ದ್ವೇಷಗಳಿಗೆ, ಕೋಪ-ತಾಪಗಳಿಗೆ ನನ್ನನ್ನೇ ನಾನು ಒಡ್ಡಿಕೊಂಡವಳು. ಪ್ರಕೃತಿಯ ಅವ್ಯಾಹತ ಪದಾ-

ಘಾತಗಳಿಗೆ ತುತ್ತಾಗಿ ಏನೇನೋ ಆಕಾರ-ಗಳನ್ನು ಪಡೆದುಕೊಂಡವಳು. ಸಣ್ಣವಳಿದ್ದಾಗ, ನನ್ನ ನೆನಪಿನಲ್ಲಿ ಬರುವದು, ಅದೇ ನೆನಪು. ನಿತ್ಯವೂ, ಸಂಜೆ-ಮುಂಜಾವುಗಳಲ್ಲಿ ಕೂಲಿಕಾರರು ಕೆಲಸಕ್ಕೆ ಹೊರಡುವ ಮುಂಚೆ, ದಾರಿಯಲ್ಲಿ ನನ್ನ ಮೈಮೇಲೆ ಕುಳಿತು, ದಣಿವು ನೀಗಿಸಿಕೊಳ್ಳುತ್ತಿದ್ದ ಅಂದಿನ ದಿನಗಳು. ಅವರೆಲ್ಲ ಬುತ್ತಿ ತಿಂದು, ನೀರು ಕುಡಿದು, ದಣಿವು ಆರಿಸಿಕೊಂಡು, ಬೆವರು ಒರೆಯಿಸಿಕೊಂಡು ಹೋಗುವದು ನನ್ನ ಮೈಮೇಲೆ ಕುಳಿತುಕೊಂಡೇ. ತಮ್ಮ ಎಲ್ಲ ಸುಖ ದುಃಖಗಳನ್ನು ಹಂಚಿಕೊಳ್ಳುತ್ತಿದ್ದುದು ನನ್ನ ಮುಂದೆಯೇ. ಎಷ್ಟೋ ಸಲ ತಮ್ಮ ಕುಡುಗೋಲುಗಳನ್ನು ನನ್ನ ಮೈಗೆ ತಿಕ್ಕಿ ತಿಕ್ಕಿ ಮಸೆಯುತ್ತಿರುವ ದೃಶ್ಯ ಇನ್ನೂ ನನ್ನ ನೆನಪಿನಲ್ಲಿ ಹಸಿರಾಗಿದೆ.

ಯಾವ ದುರ್ದೈವವೋ, ನನ್ನ ಮೈಗೆ ಒಂದು ಆಕಾರ ಬಂದಿತು. ಕುಡುಗೋಲಿನ ಮಸೆತದಿಂದ ಮೈ ನುಣುಪಾಯಿತು. ಅದೇ ಒಂದು ನೆಪವಾ-ಯಿತು ನಿಮ್ಮಲ್ಲಿಯ ಒಬ್ಬನಿಗೆ. ಅವನು ನನ್ನಲ್ಲಿ



## ಮುಖಾಮುಖಿ

ವರುಷಗಳುರುಳಿವೆ...
ನನ್ನ ತಲೆ
ಕೂದಲೂ ಉದುರಿವೆ
ಅಂಗಾಂಗಳು ಆಕಾರದಲ್ಲಿ
ಏನೆಲ್ಲ ಎಷ್ಟೆಲ್ಲಾ....
ಬದಲಾಗಿವೆ;
ನಡೆವ ನೆಲ
ಉರಿವ ಸೂರ್ಯ
ನಿಂತ ಬೆಟ್ಟ
ಮೇಲಿನ ಬಾನು
ಬದಲಾಗಿಲ್ಲ!
ನೆನೆಸಿಕೊಂಡರೆ
ನಾಚಿಕೆಯಾಗುತ್ತೆ ನನಗೆ
ನಾಚಿಕೆಯ ಬೆನ್ನ ಹಿಂದೆ
ಭೀತಿಯಾಗುತ್ತೆ
ಒಳಗೊಳಗೆ!

–ದೊಡ್ಡರಂಗೇಗೌಡ

ದೈವತ್ವವನ್ನು ಆರೋಪಿಸಿದ. ನನ್ನನ್ನು ಉದ್ಭವ-ಮೂರ್ತಿಯನ್ನಾಗಿ ಮಾಡಿದ. ತನ್ನ ಪೂಜಾ-ಪದ್ಧತಿಯ ಜೇಡರ ಬಲೆಯಲ್ಲಿ ನನ್ನನ್ನು ಸಿಕ್ಕಿಸಿದ. ನನ್ನ ಮೈಮೇಲೆ ನಿತ್ಯವೂ ಎಣ್ಣೆ ಸುರುವಿದ. ಮೈಗೆಲ್ಲ ಕುಂಕುಮ ಬಳಿದ. ಹೂಗಳನ್ನು ಏರಿಸಿದ. ನನ್ನ ಸುತ್ತಲಿನ ಸ್ಥಳವನ್ನು ಹಸನು ಮಾಡಿದ. ಒಟ್ಟಾರೆ ನನ್ನನ್ನು ಜನರಿಂದ ದೂರವಿಡಿಸಿದ. ಯಾರೂ ನನ್ನನ್ನು ಮುಟ್ಟದಂತೆ ನನ್ನ ಬಳಿಗೆ ಸುಳಿಯದಂತೆ ಬೆದರಿಸಿದ. ತನ್ನ ಹೊಟ್ಟೆ ತುಂಬಿಸಿಕೊಳ್ಳಲು ನನ್ನನ್ನು ಉಪಯೋಗಿಸಿಕೊಂಡ. ನನ್ನನ್ನು ಅಸ್ಪೃಶ್ಯನನ್ನಾಗಿ ಮಾಡಿದ. ನನ್ನನ್ನ

ವಿರೂಪಗೊಳಿಸಿದ.

ನನ್ನ ಮೊರೆಯನ್ನು ಇನ್ನಾದರೂ ಕೇಳಿರಿ. ನಾನೊಬ್ಬ ಶುದ್ಧ ಕಲ್ಲು. ಸಾಮಾನ್ಯ ಕಲ್ಲು, ಚಂದ್ರನ ಮೇಲಿನ ಅಪೂರ್ವ ಶಿಲೆಯಲ್ಲ; ಪೃಥ್ವಿಯ ಮೇಲಿನ ತೀರ ಸಾಮಾನ್ಯ ಶಿಲೆ. ನನ್ನ ಮೇಲೆ ದೇವತ್ವವನ್ನು ಆರೋಪಿಸಿ, ನಿಮ್ಮ ಪಾಪಗಳನ್ನೆಲ್ಲ ನನ್ನ ಮೇಲೆ ಹೊರಿಸಿ, ನನ್ನ ಬಾಳನ್ನು ದುರ್ಧರವಾಗಿಸಬೇಡಿರಿ. ನನ್ನ ಮೇಲೆ ಬೇಕಾಬಿಟ್ಟಿಯಾಗಿ ಗಂಧ ಕುಂಕುಮ ಅರಿಶಿಣಗಳನ್ನು ಸುರುವಿ, ಆಕೃತಿ ಕೆಡಿಸಬೇಡಿ. ಮೈಮೇಲೆಲ್ಲ ಎಣ್ಣೆ ಸುರುವಿ ಗಬ್ಬು ನಾತವನ್ನು ಎಬ್ಬಿಸಬೇಡಿ. ನೀವು ಸುರಿಯುವ ಎಣ್ಣೆಯ ಮೈ ಮೇಲೆ ಜಾರಿ, ಜಾರಿ, ಉರುಳಿ ಬೀಳುವ ನನ್ನ ಕಣ್ಣೀರನ್ನು ಅರ್ಥ ಮಾಡಿಕೊಳ್ಳಿ. ನನ್ನನ್ನು ಯಾವುದಾದರೂ ರೀತಿಯಲ್ಲಿ ಉಪ-ಯೋಗಿಸಿಕೊಳ್ಳಿ. ಇಲ್ಲಿಂದ ಕಿತ್ತು ಯಾವು-ದಾದರೂ ಕಟ್ಟಡದ ಗೋಡೆಗಾಗಿ ಉಪಯೋಗಿಸಿ ಕೊಳ್ಳಿ. ಅಥವಾ ಸಣ್ಣ ಸಣ್ಣ ಹಳಕುಗಳನ್ನಾಗಿ ಮಾಡಿ, ಡಾಂಬರಿನ ಕೂಡ ಕಲೆಸಿ, ರಸ್ತೆಯ ಮೇಲೆ ಚೆಲ್ಲಿರಿ. ಹಾದಿಯಲ್ಲಿ ಹೋಗುವ ಪಥಿ-ಕರು ನನ್ನ ಮೈ ಮೇಲೆ ಕಾಲಿಟ್ಟಾಗ, ಏನೋ ಒಂದು ತರಹದ ಸಮಾಧಾನ ನನಗೆ. ಇಲ್ಲ ವಾದರೆ ಪುಡಿ ಪುಡಿ ಮಾಡಿ ಸಿಮೆಂಟಿನಲ್ಲಿ ಕಲೆಸಿ, ಮನೆಯ ತಾರಸಿಗಾದರೂ ಉಪ-ಯೋಗಿಸಿಕೊಳ್ಳಿ. ಒಬ್ಬರಿಗಾದರೂ ನೆರಳಾ-ದೇನು! ಏನೂ ಇಲ್ಲವೆಂದರೆ ಮೈಲುಗಂಬವಾಗಿ ಮಾಡಿ ದಾರಿಯ ಬದಿಯಲ್ಲಿ ನಿಲ್ಲಿಸಿರಿ. ಹೆಮ್ಮೆ-ಯಿಂದ ನಿಂತೇನು! ಯಾವುದೂ ಬೇಡವಾದರೆ ಮೊದಲಿದ್ದ ಹಾಗೆಯೇ ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡಿರಿ. ಕೂಲಿಕಾರರು ನನ್ನ ಮೈಮೇಲೆ ಕುಳಿತು ವಿಶ್ರಾಂತಿ ತೆಗೆದುಕೊಳ್ಳಲಿ. ಯಾರಿ-ಗಾದರೂ ನನ್ನಿಂದ ಉಪಯೋಗವಾದರೆ, ನಾನು ಹುಟ್ಟಿದ್ದಕ್ಕೆ ಸಾರ್ಥಕವಾದೀತು.

ಆದರೆ ದಯಮಾಡಿ, ದಯಮಾಡಿ, ನನ್ನನ್ನು ದೇವರಾಗಿಸಬೇಡಿ, ದೇವತ್ವವನ್ನು ಆರೋಪಿಸ ಬೇಡಿ. ನಿಮ್ಮ ಪಾಪಗಳನ್ನು ನನ್ನ ಭುಜಗಳ ಮೇಲೆ ಒಟ್ಟಬೇಡಿ. ನನ್ನನ್ನು ವಿರೂಪಳನ್ನಾಗಿ ಮಾಡಿ, ಎಲ್ಲರಿಂದಲೂ ದೂರೀಕರಿಸಿ, ಅಸ್ಪೃಶ ಳನ್ನಾಗಿ ಮಾಡಬೇಡಿ, ನಿಷ್ಕ್ರಿಯಳನ್ನಾಗಿ ಮಾಡಬೇಡಿ. ಹುಟ್ಟಿದ ಮೇಲೆ ಯಾರಿಗಾದರೂ ಉಪಯೋಗವಾದರೆ ಅದೇ ನನ್ನ ಸಾರ್ಥಕತೆ, ಅದೇ ನನ್ನ ಧನ್ಯತೆ. ಬಂಧುಗಳಿರಾ, ನನ್ನ ಅಳಲು ಇನ್ನಾದರೂ ನಿಮಗೆ ಅರ್ಥ ವಾಯಿತಲ್ಲವೇ? ✡



ತರುಣ ಶಿಕ್ಷಕಿಯೊಬ್ಬಳಿಗೆ ವರ್ಗವಾದಾಗ ಶಾಲೆಯಲ್ಲಿ ಬೀಳ್ಕೊಡುಗೆ ಸಮಾರಂಭ. ಅದು ಮುಗಿದಾಗ ರಾತ್ರಿ ಹೊತ್ತಾಗಿತ್ತು. ಮನೆಗೆ ಜತೆಯಲ್ಲಿ ಹೋಗಲು ಒಬ್ಬ ಪಡ್ಡೆ ಹುಡುಗ-ನನ್ನು ಕಳಿಸಿದರು. ದಾರಿಯಲ್ಲಿ "ಒಂಟಿ ಹುಡುಗನ ಜತೆ ಹೀಗೆ ರಾತ್ರಿ ಹೊರಟದ್ದೀರಿ ಹೆದರಿಕೆ ಯಾಗುವದಿಲ್ಲವೆ?" ಎಂದು ಕೇಳಿದ ಹುಡುಗ.

"ಹೆದರಿಕೆ? ಯಾರಿಗೆ? ಇಲ್ಲಿ ಎಲ್ಲರಿಗೂ ನನ್ನ ಚಿತ್ರದ ಹೆದರಿಕೆ" ಹುಡುಗ ಸುಮ್ಮನೇ ನಡೆದ.

–ವಿರೇಶ ಖಂಕಾಪುರ

# ಶಾಪ್ಕಕ ತಿಂಗಾಪ್ಕಕಕ

**ನಾ ನಾ**

ನಾವು ಚಿಕ್ಕವರಿರುವಾಗ ನೋಡಿದ ದೃಶ್ಯಗಳ ಪೈಕಿ ನನ್ನ ಮನಸ್ಸಿನ ಮೇಲೆ ಅಚ್ಚಳಿಯದೇ ಉಳಿದಿರುವ ದೃಶ್ಯ ದುರುಗಮುರುಗಿಯ 'ದೇವತಾರಾಧನೆ.' ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ಬೀದಿಯ ಮಧ್ಯ ನಡೆಯುವ ಈ ಆರಾಧನೆ ನೋಡಲು ನಮಗೆಲ್ಲ ಅತೀವ ಆನಂದ. ಬರಿಮೈಯ 'ದುರುಗಮುರುಗಿ' ಅಷ್ಟೊಂದು ಜೋರಾಗಿ ತನಗೆ ತಾನೇ ಬಾರಕೋಲಿನಿಂದ ಹೊಡೆದುಕೊಂಡರೂ ಅವನಿಗೆ ಹೇಗೆ ಪೆಟ್ಟು ಬೀಳುವದಿಲ್ಲ? ಅವನು ಹಾಗೆ ಏಕೆ ಹೊಡೆದುಕೊಳ್ಳಬೇಕು? ತನಗೆ ತಾನೇ ಪೆಟ್ಟು ತಿಂದು ಪಡೆಯುವ ಫಲವಾದರೂ ಏನು? ಊರವರು ಕೊಡುವ ಜೋಳ-ಕಾಳು-ಕಡಿ ಹರಕು ಬಟ್ಟೆಗಳು-ಇದಕ್ಕೆಲ್ಲ ಇಷ್ಟೇಕೆ ದೇಹ ದಂಡನೆ? ಇವು ನಮಗೆ ಆಗ ಹೊಳೆಯದ ವಿಚಾರಗಳು. ಇದೂ ಒಂದು ಉಪಜೀವನದ ಹಾದಿಯಾಗಿರಬಹುದೇ?

ಝುರ್ ಬರ್ ಝುರ್ ಬರ್-ಡೋಲಿನ ಸಪ್ಪಳ.

ಛಟಲ್ ಛಟಲ್-ಬಾರಕೋಲಿನ ಸಪ್ಪಳ. ಝುರ್ ಬರ್; ಛಟಲ್ ಛಟಲ್-ಡೋಲು, ಬಾರುಕೋಲುಗಳ ಸಮ್ಮಿಶ್ರನಾದ.

ಮರದಿಂದ ಮಾಡಿದ ಚಿಕ್ಕದೊಂದು ಕಪಾಟು. ಅದೇ 'ಗುಡಿ.' ಅದರ ಬದಿಯಲ್ಲಿಯೇ 'ಬಾರುಕೋಲು ಸೇವೆ'ಯನ್ನು ಮುಗಿಸಿ ಬಂದು ಕುಳಿ ಕುಳಿತಿದ್ದಾನೆ ದುರುಗಮುರುಗಿ. ಅವನ ಹಿಂಬದಿಯಲ್ಲಿ ಡೋಲು ಶಬ್ದ ಮಾಡುತ್ತ ಕುಳಿತಿದ್ದಾಳೆ ಅವನ ಬಾಳ ಸಂಗಾತಿ.

ಗುಡಿಯ ಮೇಲೆ ಮುಚ್ಚಿದ ಪರದೆಯನ್ನು ಸಿಧಾನವಾಗಿ ಮೇಲಕ್ಕೆತ್ತಿ ಅದರ ಮಹಾದ್ವಾರಗಳನ್ನು ತೆರೆಯುತ್ತಾನೆ ದುರುಗಮುರುಗಿ. ಒಮ್ಮೆಲೇ 'ದೇವಿಯ ಸಾಕ್ಷಾತ್ಕಾರ!' ಬೀದಿಯಲ್ಲಿ ಕುತೂಹಲದಿಂದ ನೋಡುತ್ತ ನಿಂತ ಹೆಂಗಸರೂ ಮಕ್ಕಳೂ ಭಯ ಭಕ್ತಿಯಿಂದ ದೇವಿಗೆ ಕೈ ಮುಗಿಯುತ್ತಾರೆ. ಹೆಣ್ಣುಮಕ್ಕಳು ತಮ್ಮ ತಮ್ಮ ಮನೆಗಳಿಂದ ತಂಬಿಗೆಯಲ್ಲೋ ಬಿಂದಿಗೆಯಲ್ಲೋ ನೀರು ತಂದು ಗುಡಿಯ ಎದುರಿಗೆ ಹಾಕುತ್ತಾರೆ. ಅಕ್ಕಿ, ಜೋಳ ಮುಂತಾದ ದವಸ ಧಾನ್ಯ ತುಂಬಿದ ಮರಗಳು ಒಂದೊಂದಾಗಿ ದೇವಿಯ ನೈವೇದ್ಯಕ್ಕೆ ಬರುತ್ತವೆ. ಹಳ್ಳಿಯ ದುರುಗಮುರುಗಿಯ ಸಾಮಾನ್ಯ ದೃಶ್ಯ ಇದು! ನಂತರ ಅವನು ದೇವಿಯ ಅಲಂಕಾರ ಮಾಡಲು ಪ್ರಾರಂಭಿ

ಸುತ್ತಾನೆ. ದೇವಿಯು ಆಭರಣಗಳನ್ನು ಒಂದೊಂದಾಗಿ ಕೈಗೆತ್ತಿಕೊಂಡು ಸರಾಗವಾಗಿ ಹೇಳತೊಡಗುತ್ತಾನೆ.

ದೇವಿಯು ಕೊರಳಲ್ಲಿ ಹಾಕಲು ಚಿನ್ನದಂತೆ ಹೊಳೆಯುವ ಸರವನ್ನು ಎತ್ತಿ ನೆರೆದವರಿಗೆ ತೋರಿಸಿ "ತಾರೀಕೊಪ್ಪದ ದೇಸಾಯ್ರು ಕೊಟ್ಟದ್ದುssss" ಎನ್ನುತ್ತಾನೆ.

"ತಾನss ತಂದಾssನsss" ಅವನ ಹೆಂಡತಿ ತಕ್ಷಣ ದನಿಗೂಡಿಸುತ್ತಾಳೆ.

ಮುತ್ತಿನ ಬಳೆಗಳನ್ನು ತೋರಿಸುತ್ತ "ನೆಗಿ ಧರ್ಣೇರು ಕೊಟ್ಟದ್ದುssss" ಎಂದಾಗ "ತಾನss ತಂದಾssನss" ಎನ್ನುತ್ತಾಳೆ ಅವನ ಹೆಂಡತಿ.

ವಜ್ರದಂತೆ ಹೊಳೆಯುವ ಮೂಗುತಿಯನ್ನು ಎತ್ತಿ ತೋರಿಸುತ್ತ, "ಸತಿ ಶಿರೋಮಣಿ ಸೀತಮ್ಮನೋರು ಕೊಟ್ಟದ್ದುsss" ಎನ್ನುತ್ತಾನೆ.

"ತಾನss ತಂದಾssನss" ಎಂದು ಜೋರಾಗಿ ಡೋಲು ಬಾರಿಸುತ್ತ ಸರಾಗವಾಗಿ ಹೇಳುತ್ತಾಳೆ ಅವನ ಅರ್ಧಾಂಗಿ.

ಒಳ್ಳೇ 'ಅರ್ಥಗರ್ಭಿತ' ಮಾತು. ಗಂಡನ ಗುಟ್ಟನ್ನು, ಸರಾಗವಾಗಿ, ಬಹಿರಂಗವಾಗಿ ಮತ್ತು ಧೈರ್ಯವಾಗಿ ಆದರೆ ಯಾರಿಗೂ 'ಹೊಳೆಯು-ದಂತೆ' 'ರಟ್ಟು' ಮಾಡುವಳಲ್ಲವೇ? ನಮಗಾಗ ಯಾವುದೂ ತಿಳಿಯದು......

ತಾನss ತಂದಾssನss

ತಾನss ತಂದಾssನss ಬಾಲ್ಯದ ಸವಿ ನೆನಪು ಗಳನ್ನು ಮೆಲಕು ಹಾಕುತ್ತಿರುವಾಗಲೇ ಮಂಪರು ಬಂದಂತಾಯಿತು...

*

"ಅಲ್ಲ ಸರ್ ನನಗೆ ಅದಕ್ಕೆ ಕೆಟ್ಟ ಅನಿಸುವ ದಿಲ್ಲ; ಆದರೆ ನೀವು ಅವರು ಬಂದಾಗಲೆಲ್ಲ ಕಾಫಿ ತಿಂಡಿ ಕೊಟ್ಟಿದ್ದನ್ನು ನಾನೇ ಕಣ್ಣಾರೆ ಕಂಡಿದ್ದೀನಿ. ಕೃತಘ್ನರು ಸರ್ ಈ ಜನ. ನಿಮ್ಮದೇ ತಿಂದು ತೇಗಿ ನಿಮ್ಮ ಬಗ್ಗೆ ಒಂದು ಒಳ್ಳೆ ಮಾತನಾಡಲು ಹಿಂದು ಮುಂದೆ ನೋಡುತ್ತಾರಲ್ಲ. ಇವರಿಗೇನು ಅನ್ನಬೇಕೋ ನನಗಂತೂ ತಿಳಿಯದು ಸರ್. ತಾವು ಬಹಳ ದೊಡ್ಡ ಮನುಷ್ಯರು ಸರ್."

"ಇರಲಿ ಬಿಡು. ನಾವು ಇಂಥವರನ್ನೂ ಬಿಡು ವಂತಿಲ್ಲ. ತಿಂದು ನಮ್ಮ ಋಣದಲ್ಲೇ ಬಿದ್ದಿರಲಿ, ಹೇಳತಾರಲ್ಲ 'Pay the devil its due' ಅಂತ. ಹಾಗೆ."

"ಅದೇ ಆ ಇವರನ್ನು ನೋಡಿ ಸರ್. ಅವರು ಯಾವುದೇ ಥರದ ವಿಚಾರಮಾಡದೇ ನಿಮ್ಮ ಮೇಲೆ ಒಂದು ಸುಂದರ ಕವನವನ್ನೇ ರಚಿಸಿ ಕೊಟ್ಟರು. ಪಾಪ. ನಾನೇ ಹೇಳಿದೆ ಸರ್ ಅವರಿಗೆ. ತಮಗೆ ಯಾವುದಾದರೂ ಸ್ಥಾನ ಸಿಕ್ಕಮೇಲೆ ಖಂಡಿತ ಅವರನ್ನು ಮರೆಯುವದಿಲ್ಲ ಅಂತ ತಮ್ಮ ಪರವಾಗಿ ನಾನೇ ವಚನಕೊಟ್ಟೆ ನೋಡಿ ಸರ್."

"ಭೇಷ್, ಒಳ್ಳೇದು ಮಾಡಿದಿರಿ ಬಿಡಿ. ಬೇರೆಯವರು ಏನೇ ಹೇಳಲಿ ಅದನ್ನು ಗಣನೆಗೆ ತಾರದೆ ನಮ್ಮ ಕರ್ತವ್ಯ ಮಾಡುತ್ತ ಹೋಗ ಬೇಕು ಅಷ್ಟೆ."



"ಅವನೆಂಥ ಮನುಷ್ಯ ಸರ್. ಅವನದು ಯಾವಾಗಲೂ ವಕ್ರ ಮಾತು. ನಿಮ್ಮ ಸತ್ಕಾರ ಮಾಡಬೇಕಾಗಿದೆ ಎಂದು ಹೇಳಿದರೆ, 'ಅವನು ಮಾಡಿದ ಸತ್ಕಾರ್ಯ ಯಾವುದು? ಬೇರೆ ಯಾರೂ ಸಿಕ್ಕಲಿಲ್ಲವೇ ನಿಮಗೆ' ಅನ್ನಬೇಕೆ?"

"ಸ್ವಭಾವಕ್ಕೆ ಔಷಧಿ ಇಲ್ಲ. ಏನು ಮಾಡುವುದು. ಅವರೂ ಬೇಕು ನಮಗೆ. ಇರಲಿ ಸಮಯ ಬಂದಾಗ ನೋಡಿಕೊಳ್ಳುವ. ಹಾಂ. ಅಂದ್ಹಾಗೆ ಎಲ್ಲಿಗೆ ಬಂತು ತಯಾರಿ?"

"ಎಲ್ಲಾ ಆಗಿದೆ ಸರ್. 'ನಿಮ್ಮ ಬಾಯೋ ಡೆಟಾ' ಬರೆದುಕೊಟ್ಟು ಪ್ರೆಸ್ಸಿಗೆ ಕಳಿಸಿದ್ದೀನಿ."

"ಅಂದರೆ ಎಷ್ಟು ಪೇಜು ಆಗಿದೆ?"

"ಸುಮಾರು ೧೦೦ ಪುಟ ಆಗಬಹುದು ಸರ್."

"ಅದಕ್ಕss ಅಂದೆ. ಅದಕ್ಕಿಂತ ಕಡಿಮಿ ಬರಿಯೋದರs ಹ್ಯಾಂಗೆ? ಇಷ್ಟ್ಯಾಗಿ ನನ್ನ ಸ್ವಾತಂತ್ರ್ಯ ಹೋರಾಟದ ಕಥಿ, ಭಾಷಾವಾರು ಪ್ರಾಂತ ರಚನಾ ಚಳುವಳಿಯಲ್ಲಿ ಪೆಟ್ಟು ತಿಂದ ರೋಮಾಂಚಕ ಸುದ್ದಿ, ಇವೆಲ್ಲ ಬರಲೇಬೇಕಲ್ಲ. ಆದರೂ ೧೦೦ ಪುಟ ಕಡಿಮೀನೇ ಆತು. ಇರಲಿ ಮುಂದ ಆ ಇವರನ್ನೆ ಹಿಡಿದು ಒಂದು ದೊಡ್ಡ ಪುಸ್ತಕಾನs ಬರಿಸೀದ್ರಾತು. ಅಂದ್ಹಾಂಗ ಆ ಇವರು ನನ್ನ ಮೆಚ್ಚಿ ಬರೆದ ಪತ್ರ ಅದ್ರೊಳಗ ತಂದೀರಲ್ಲs?"

"ಅದು ಬರದಿದ್ರು ಹ್ಯಾಗೆ ಸಾರ್. ಅದss ನಮ್ಮ ಮೂಲ ಬಂಡವಲ."

"ಮತ್ತ ನಾ ಹೇಳಿದ 'ಅವರ' ಜೊತೆಗಿದ್ದ ಫೋಟೋ ಹಾಕಿಸಿದ್ರೇನು? ಅಖಿಲ ಭಾರತ ಸಮ್ಮೇಳನದಾಗ ಅವರೊಂದಿಗೆ ಕಾಫಿ ಕುಡಕೋತ ನಿಂತ ಪೋಜು ಭಾಳ ಛಲೋ ಬಂದsದ. ಅವೆಲ್ಲ ಬಂದಾವಲ್ಲss?"

"ಅವೆಲ್ಲ ಬರದಿದ್ರು ಹ್ಯಾಗೆ ಸರ್? ಅದರ ಬಗ್ಗೆ ನಾನು ಸಾಕಷ್ಟು ಕಾಳಜೀ ತೆಗೆದುಕೊಂಡೀನಿ. ಪ್ರತಿಗಳು ಬಂದಕೂಡಲೇ ಅವುಗಳನ್ನು ಸ್ವತಃ ನಾನೇ ತೆಗೆದುಕೊಂಡು ಹೋಗಿ ಕಾರ್ಯದರ್ಶಿ ಯವರಿಗೆ ಹೇಳಿಕೊಟ್ಟು ಬರತೀನಿ. ಸರಕಾರದಲ್ಲಿ ಈ ಸಾಹಿತಿಗಳೆಂದರೆ ಒಂದು ತರಹದ ಅಲರ್ಜಿ ಸರ್ ಅಲರ್ಜಿ. ಅವರೇನು ಮಹಾ ಬರೀತಾರ ನಮ್ಮ 'ನೋಟ್ಸಿ'ಗಿಂತ ಅವರ ಕಾವ್ಯಕ್ಕೇನು 'ಬೆಲೆ' ಅನ್ನುವ ಹಾಗೆ ಮಾತನಾಡುತ್ತಾರೆ. ಆಯ್ತು ಬಿಡಿ ಎಲ್ಲಾ 'hurdles' ದೊಳಗಿಂದ ಯಶಸ್ವಿಯಾಗಿ ಪಾರಾಗಿ ಹೋಯಿತು. ನಿಮಗೆ ಸರಕಾರದಿಂದ 'ಪ್ರಶಸ್ತಿ' ದೊರೆತ ಸುದ್ದಿ ಪೇಪರಿನಲ್ಲಿ ಪ್ರಕಟವಾದಾಗ ನಿಮ್ಮ ಬಗ್ಗೆ ಹಗುರ ವಾಗಿ ಮಾತನಾಡಿದವರೆಲ್ಲರಿಗೂ **Shock** ಉ ಸರ್ **Shockoo**. ಅವರೇ ಆಗ ನಾ ಮುಂದೆ ತಾ ಮುಂದೆ ಎಂದು ಬಂದು ನಿಮ್ಮ ಕೈಕುಲುಕು- ತ್ತಾರೆ. ಎಂತಹ ವಿಚಿತ್ರ ಜನ ಇವರು!"

*

ಚಪ್ಪಾಳೆ ಮೇಲೆ ಚಪ್ಪಾಳೆ, ಪ್ರಶಂಸಾತ್ಮಕ ಭಾಷಣಗಳ ಸುರಿಮಳೆ, ಮಹಾನ್ ವಿದ್ವಾಂಸರು; ನಾಡಿನ ಉದ್ದಾಮ ಲೇಖಕರು. ಇವರನ್ನು ಸನ್ಮಾನಿಸಿದ ಸರಕಾರ ತನ್ನನ್ನು ತಾನೇ ಸನ್ಮಾನಿಸಿ ಕೊಂಡಂತೆ; ಎಂದೋ ಸಲ್ಲಬೇಕಾದ ಈ ಗೌರವ ರಾಯರಿಗೆ ಈಗಲಾದರೂ ದೊರೆತಿದೆ. ಇದು



ನಮ್ಮ ಸೌಭಾಗ್ಯ. ಯಾವುದಾದರೊಂದು ವಿಶ್ವ ವಿದ್ಯಾಲಯ ಇವರ ಕೃತಿಗಳನ್ನು ಮೆಚ್ಚಿ ಇವರಿಗೆ 'ಡಾಕ್ಟರೇಟು' ಕೊಟ್ಟು ಸನ್ಮಾನಿಸಬೇಕು. ಬೇರೆಯವರು ಹೊಗಳಿದಾಗಲೇ ವಿಶ್ವವಿದ್ಯಾಲಯಗಳು ಕಣ್ಣು ತೆರೆಯುವ ಸಂಪ್ರದಾಯ ಸರಿಯಲ್ಲ. ವಿದ್ವತ್ತನ್ನು ಅರಸಿಕೊಂಡು ಹೋಗಬೇಕು ಇತ್ಯಾದಿ ಇತ್ಯಾದಿ. ಸಭೆಯಲ್ಲಿ ಕೇಳಿ ಬಂದ ಧ್ವನಿಗಳು. ಕರತಾಡನ ಮಧ್ಯೆ ಮಾಲಾರ್ಪಣೆ, ಶಾಲು ಹೊದಿಸುವ ಕಾರ್ಯಕ್ರಮ ನಿಯೋಜಿಸಿದಂತೆ ಯಶಸ್ವಿಯಾಗಿ ಕೊನೆಗೊಂಡವು.

*

"ಹ್ಯಾಗಾಯ್ತು ಸರ್?"

"ಫಸ್ಟ್‌ಕ್ಲಾಸ್. ನೀವು ಸಂಘಟಿಸುವ ಯಾವುದೇ ಸಮಾರಂಭವಾಗಲೀ ಇದುವರೆಗೆ Fail ಆಗಿಲ್ಲ. ಶಾಲು ಭಾಳ ಛಲೋ ಅದ. ಅಂದ್ಹಂಗ ಎಷ್ಟು ಬಿತ್ತು?"

"ನಾನ್ss ಸ್ವತಃ ನಾಲ್ಕೈದು ಅಂಗಡಿ ತಿರುಗಾಡಿ ನೀವು ಹೇಳಿದಂಥ ಕಲರು ಮತ್ತು ಜರಿ ಇದ್ದುದನ್ನು ತೊಗೊಂಡು ಬಂದೆ. ಸುಮಾರು ೩೦೦ ರೂಪಾಯಿ ಆಯ್ತು ಸರ್."

"ಸರಿ ಸುಮ್ಮನೇ ಕೇಳಿದೆ ಅಷ್ಟೆ."

"ಮುಂದಿನ ಸಲ ಇದಕ್ಕೂ ಭಾರೀ ಜರಿ ಶಾಲು ಹೊದಿಸೋಣ ಅಂದ್ಕೊಂಡಿದೀನಿ ಸರ್."

"ಅದೂ ಆದೀತು ಬಿಡು, ಈ ಸುಗ್ಗಿ ಆದ ಮ್ಯಾಲೆ..."

"ಸರ್."

"ಅರ್ಥ ಆಯ್ತು. ಒಟ್ಟು ಎಷ್ಟು ಖರ್ಚು ಬಂದ್ಹಂಗಾತು?"

"ತಮಗೆ ಸರಕಾರದಿಂದ ಬಂದುದಕ್ಕಿಂತಲೂ ಹೆಚ್ಚೇ ಖರ್ಚಾಯ್ತು ಸರ್. ಅಲ್ಲದೆ ಇದೇ ಮೊದಲನೆ ಕಾರ್ಯಕ್ರಮ ಸ್ವಲ್ಪ ಜೋರಾಗಿಯೇ ಇರಲೆಂದು— ಹ್ಯಾವದ ಮ್ಯಾಲೆ ಮಾಡಿದ್ದು. ಎಷ್ಟೇ ಕೈ ಹಿಡಿದು ಮಾಡಿದರೂ ಈ ದುಬಾರಿ ಕಾಲ..."

"ಆಗಲಿ ಬಿಡಿ. ಅದಕ್ಕೆ ಚಿಂತೆ ಬೇಡ. ಈ ಸಲ ಸರಕಾರದಿಂದ ಬಂದದ್ದು 'ದೈವದ ಪಾಲು' ಎನ್ನಬಹುದು," ಅಸ್ವಾಭಾವಿಕ— ಗಂಭೀರ ನಗೆ ಬೀರುತ್ತ ಹೇಳಿದರು ರಾಯರು!

"ಸರಕಾರದಿಂದ ಪುರಸ್ಕಾರ ದೊರಕಿಸಿ



ಕೊಳ್ಳುವದೇನೂ ಅಷ್ಟೊಂದು ಸುಲಭವಲ್ಲ ಸರ್. ತಾವು ಇಷ್ಟೊಂದು ದೊಡ್ಡ ಸಾಹಿತಿಗಳೆಂದು ಸರಕಾರಕ್ಕೆ ಮನಗಾಣಿಸಲು ನನಗೆ ಸಾಕು ಬೇಕಾಯಿತು ಸಾರ್."

"ಏನು ಮಾಡುವುದು ಈಗಿನ ಕಾಲಾನ್ಸ ಹಾಗಿದೆ. 'ಪ್ರಯತ್ನ' ಮಾಡದೇ ಯಾವ ಕೆಲ್ಸಾನೂ ಆಗುವದಿಲ್ಲ. ಅಂತೂ ನಿನ್ನ 'ಪ್ರಯತ್ನ'ಕ್ಕೆ ತಕ್ಕ ಫಲ ಸಿಕ್ಕಿತಲ್ಲ. ಯಾರೇನೂ ಬೆಳಗಾಗುವದರೊಳಗೇ ದೊಡ್ಡವರಾಗುವದಿಲ್ಲ."

"ಹ್ಹ ಹ್ಹ ಹೌದು ಸರ್. ಅವರೂ ಹಾಗೇ ಹೇಳಿದರು ಸರ್. ಅವರ ಮನೆಗೆ ಒಂದು ನೂರು ಸಲವಾದರೂ ನಾನು ಹೋಗಿರಬೇಕು. ಒಂದೊಂದು ಸಲ ಹಣ್ಣು— ಹೂವು ಕೂಡ ತೆಗೆದುಕೊಂಡು ಹೋಗಿರುವೆ— ಅವರಿಂದ ತಮ್ಮ ಬಗ್ಗೆ ಒಂದು ರೆಕ್ಮಂಡೇಶನ್ ಪಡೆಯಲು ಅದೇ ಕೊನೆಯ ಅಸ್ತ್ರವಾಯಿತು! ಅದರಿಂದ ಮಣಿ-ಯಲೇ ಬೇಕಾಯ್ತು."

"ಅದಕ್ಕಾಗಿಯೇ ನಾನು ನಿಮಗೆ ಮೊದಲಿನಿಂದಲೂ ಹೇಳುತ್ತಿದ್ದೆ ಶಂಖದಿಂದ ಬಂದಾಗಲೇ ಅದು ತೀರ್ಥ. ಹಾಗಾಗಿಬಿಟ್ಟಿದೆ ಸರಕಾರದ ವ್ಯವಹಾರ."

"ಹೌದು ಸರ್ ತಾವು ಹೇಳಿದ್ದು ನಿಜ ಸರಕಾರಕ್ಕೂ ಇದೇ ಅಭ್ಯಾಸವಾಗಿ ಹೋಗಿದೆ. ಕೆಲವು ಸಾಹಿತಿಗಳಂತೂ ಸರಕಾರದ ಏಜಂಟರಂತೆ ಕೆಲಸ ಮಾಡುತ್ತಾರೆ ಸರ್."

"ಇರಲಿ ಬಿಡು ಸದ್ಯ ನಮ್ಮ ಕೆಲಸ ಆಯಿತಲ್ಲ, ಅವರು ಹ್ಯಾಗಿದ್ದರೇನು? ಹೀಗೆ ನೀವು ಸುಸಂಘ-ಟಿತ ರೀತಿಯಲ್ಲಿ ಕೆಲಸ ಮಾಡಿದ್ದಕ್ಕೆ ಇಂದು ನಾವು ನಾಡಿನ ಜನರ ಕಣ್ಣಲ್ಲಿ ಕಾಣತೊಡಗಿದ್ದೇವೆ. ಅದಕ್ಕಾಗಿ ನಿಮಗೆ ನನ್ನ ಅನಂತ ಧನ್ಯವಾದಗಳು. ಅಂತೂ ಕೊನೆಗೆ ನೀವು ಅದನ್ನೂ ಹೇಳಿಯೇ ಬಿಟ್ಟಿರಲ್ಲ ನಿಮ್ಮ ವಂದನಾರ್ಪಣಾ ಭಾಷಣದಲ್ಲಿ."

"ಯಾವುದು ಸರ್?"

"ಅದೇ ಆ 'ಡಾಕ್ಟರೇಟ'ದ್ದು. ಅದೊಂದು ಸಿಕ್ಕರೆ ಮುಂದಿನ ನಮ್ಮ ಕೆಲಸವೆಲ್ಲ ಸುಲಭ. ನಾವು ನಿರೀಕ್ಷಿಸಿದಂತೆ ಎಲ್ಲವೂ ಆಗುವುದು."

"ಹಯ್ಯೋ ಅದ್ಯಾವ ಮಹಾ ಕೆಲ್ಸ ಬಿಡಿ ಸರ್. ನಾವು ನಿಮ್ಮ ಬೆನ್ನು ಹಿಂದೆ ನಿಂತು ದುಡಿಯುತ್ತಿರುವಾಗ ಯಾವುದು ತಾನೇ ಅಸಾಧ್ಯ? ಆದರೆ ನೀವು ತಪ್ಪು ತಿಳಕೊಳ್ಳದಿದ್ದರೆ..."

"ಓ. ಅದಕ್ಯಾಕೆ ಚಿಂತೆ?"

"ಹಾಗೇನೂ ಇಲ್ಲ ಸರ್ ಈ ದುಬಾರಿ ಕಾಲದಲ್ಲಿ ಅವರಿವರ ಮನೆ ಸುತ್ತಾಕಲಿಕ್ಕೇ ಸಾವಿರಾರು ರೂಪಾಯಿ ಖರ್ಚಾಗುತ್ತವೆ ಸರ್. ನಿಜವಾಗಿ ಹೇಳಬೇಕೆಂದರೆ ನಾನು ನಿಮ್ಮ ಕೆಲ್ಸ ಫ್ರೀ ಆಗೇ ಮಾಡಿ ಪುಣ್ಯ ಪಡಕೊಳ್ಳೋಣ ಅಂತ ಮಾಡಿದ್ದೆ. ಅಲ್ಲದೆ ತಮ್ಮಂಥ ವಿದ್ವಾಂಸರ ಸಂಪರ್ಕ ದೊರೆತದ್ದೇ ನನ್ನ ಪಾವನ ಜನ್ಮದ ಪುಣ್ಯ ಸರ್. ಕ್ಷಮಿಸಿ ಸರ್ ಆದರೇನು ಮಾಡುವುದು, ನಾನೂ ಬಡವ, ಮಕ್ಕಳೊಂದಿಗ. ದಯವಿಟ್ಟು..."

"ಛೆ ಛೆ ಯಾಕಿಷ್ಟು ವ್ಯಥೆಪಟ್ಟುಕೊಳ್ಳುತ್ತೀರಿ ನಮ್ಮ ಪ್ರಯತ್ನದಿಂದ ನಾವು 'ಹಾಕಿದ್ದಕ್ಕಿಂತ' ಹೆಚ್ಚೇ 'ತೆಗೆದುಕೊಳ್ಳುವ' ಅವಕಾಶ ಇದ್ದಾಗ ನಾವು ಚಿಂತಿಸುವುದೇ ಬೇಡ. ಈಗಿನ ಕಾಲಕ್ಕೆ ಇವನ್ನೆಲ್ಲ ಮಾಡಲೇಬೇಕು. ಇಲ್ಲವಾದರೆ ಜೀವನದಲ್ಲಿ ನಾವೇನನ್ನೂ ಸಾಧಿಸಲಾರೆವು."

"ಹೌದು ಸಾರ್ ತಾವು ಹೇಳಿದ್ದು ನೂರಕ್ಕೆ ನೂರು ಸತ್ಯ ಸರ್."

*

"ಆಂ ಯಾವುದು... ಯಾವುದು ಸತ್ಯ? ಯಾವುದು ಮಿಥ್ಯ? ಒಮ್ಮೆಲೇ ಎಚ್ಚರವಾದಂತಾಯಿತು. ಎಲ್ಲಿಂದಲೋ ಅದೇ ಪರಿಚಿತ ಧ್ವನಿ ಕೇಳಬರುತ್ತಿದೆ.

"ನರಗುಂದ ಬಾಬಾಸಾಹೇಬರು ಕೊಟ್ಟದ್ದು"

"ತಾನ್ಸ ತಂದಾನ್ಸ"

*

# ಈ ತಿಂಗಳ ಆಕಾಶದಲ್ಲಿ ಕಾಣುವುದೇನು ?

ಲೇಖಕ : ಜಿ. ಟಿ. ನಾರಾಯಣರಾವ್
ಚಿತ್ರಗಳು : ಕೆ. ಮುರಲೀಧರರಾವ್

## ನಕ್ಷತ್ರವೀಕ್ಷಕರು ಪಾಲಿಸಬೇಕಾದ ನಿಯಮಗಳಿವು

೧ ಆಕಾಶದ ಬಿತ್ತರ ಪೂರ್ತಿ ಗೋಚರವಾಗುವ ನಿವೇಶನವನ್ನು ವೀಕ್ಷಣವೇದಿಕೆಯಾಗಿ ಆಯಬೇಕು.

೨ ಅದು ಸ್ಥಳೀಯ ಬೆಳಕು, ಹೊಗೆ, ಧೂಳು ಮುಂತಾದ ದೃಷ್ಟಿಪ್ರತಿಬಂಧಕಗಳಿಂದ ದೂರ ವಿರಬೇಕು.

೩ ಚಂದ್ರ ಮತ್ತು ಮೋಡ ಇರದ ಇರುಳು ನಕ್ಷತ್ರವೀಕ್ಷಣೆಗೆ ಅತ್ಯಂತ ಪ್ರಶಸ್ತ ಕಾಲ. ಪ್ರತಿ ರಾತ್ರಿಯೂ ಅದೇ ವೇಳೆ ವೀಕ್ಷಣೆ ಮಾಡುವುದು ಅಪೇಕ್ಷಣೀಯ.

೪ ಟಿಪ್ಪಣಿ ಪುಸ್ತಕ, ಲೆಕ್ಕಣಿ, ಅಡಿಪಟ್ಟಿ ಮತ್ತು ಕೈದೀಪ ಜೊತೆಯಲ್ಲಿ ಇದ್ದರೆ ಅನುಕೂಲ. ದೂರದರ್ಶಕ, ಇಕ್ಕಣ್ಣ ದುರ್ಬೀನು ಮುಂತಾದ ಸಂಕೀರ್ಣ ಉಪಕರಣಗಳಾಗಲಿ ಗಣಿತ, ಭೌತ ವಿಜ್ಞಾನ ಮುಂತಾದ ಶಾಸ್ತ್ರಜ್ಞಾನವಾಗಲಿ ಅನಿವಾರ್ಯವಲ್ಲ.

ಹೀಗೆ ಸಜ್ಜಾಗಿ ಅನುಕೂಲಮಂಚಿಕೆಯ ಮೇಲೆ ಯೋಗ್ಯ ಮುಹೂರ್ತದಲ್ಲಿ ನಿಂತು ಗಗನವನ್ನು ಸರ್ವೇಕ್ಷಿಸಬೇಕು – ಮೈ ನೀಲಿಗಟ್ಟುವವರೆಗೆ. ಮೊದಲ ನೋಟಕ್ಕೆ ಆಕಾಶ ಅಸಂಖ್ಯ ಬೆಳಕಿನ ತುಣುಕುಗಳು ಎರಚಿ ಹೋದಂತಿರುವ ಕಪ್ಪು ನೀಲಿ ಗುಮ್ಮಟ ಎಂಬ ಭಾವನೆ ಮೂಡುತ್ತದೆ. ಇವುಗಳ ಗಾತ್ರ, ಬಣ್ಣ, ಕಾಂತಿ ಒಂದೊಂದರಲ್ಲಿಯೂ ಅದ್ಭುತ ವೈವಿಧ್ಯ: ಸೂಜಿ ಮೊನೆಯಿಂದ ಜ್ಯೋತಿ ಪುಂಡಿನವರೆಗೆ, ಮಂದ ಕಂದುಬಣ್ಣದಿಂದ ವಜ್ರನೀಲಿ ಕಾಂತಿ ವರೆಗೆ, ಮಸಕು ಬೆಳಕಿನ ನಲುಗಿನಿಂದ ತೀಕ್ಷ್ಣ ಕಿರಣದ ಧಾರೆ ವರೆಗೆ. ಕೆಲವು ಕಡೆ ಅತಿ ನಿಬಿಡ, ಬೇರೆಡೆ ತೀರ ವಿರಳ; ಇನ್ನು ಕೆಲವು ಪ್ರದೇಶಗಳಲ್ಲಿ ಬೆಳಕಿನ ಪಸೆ ಮಾತ್ರ. ಕ್ರಮರಾಹಿತ್ಯವೇ ಇಲ್ಲಿಯ ಕ್ರಮ.

ಬ್ರಹ್ಮಾಂಡ ರಂಗಸ್ಥಲದಲ್ಲಿ ಕೋಟಿ ಜನರು ಮೊದಲು ಕೊನೆ ಕಥೆ ಯಾವುದೂ ಇಲ್ಲದೆ ಮುಕ್ತವಾಗಿ ಅಭಿನಯಿಸುವ ಈ ಮೂಕ ನಾಟಕ ನೋಡಿ ವಿಸ್ಮಯ ತಳೆಯುತ್ತಿದ್ದಂತೆಯೇ ಮನಸ್ಸು ಅಕ್ಕಪಕ್ಕದ ಹಲವಾರು ಬೆಳಕಿನ

ಚುಕ್ಕಿಗಳನ್ನು ಕಲ್ಪನೆಯ ಎಳೆಗಳಿಂದ ಕೋದು ವಿಚಿತ್ರ ಆಕಾರಗಳನ್ನು ರೂಪಿಸುತ್ತದೆ— ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ. ಹೀಗೆ ದೊರೆಯುವ ಆಕಾರಕ್ಕೆ ನಕ್ಷತ್ರಚಿತ್ರ ಅಥವಾ ಪುಂಜ ಎಂದು ಹೆಸರು. ಚಿತ್ರ ೧ರಲ್ಲಿ ಸುಪರಿಚಿತ ಪುಂಜವೊಂದನ್ನು ಕಾಣಿಸಿದೆ. ಇದನ್ನು ತಲೆಯ ಮೇಲುಗಡೆ ಕೆಳಮೊಗವಾಗಿ (ಅಂದರೆ ನಮಗೆ ಕಾಣುವಂತೆ) ಹಿಡಿದು ಬಾಣ ಗುರುತು ತೋರಿಸುವ ದಿಕ್ಕಿಗೆ ಹೊಂದಿಸಬೇಕು. ಆ ವೇಳೆಯಲ್ಲಿ ಈ ಪುಂಜ ಆಗಸದಲ್ಲಿದ್ದರೆ ಇದರ ವಾಸ್ತವಾಕಾರ ಚಿತ್ರದ ಸಂಕ್ಷಿಪ್ತರೂಪದೊಡನೆ ಚೊಕ್ಕವಾಗಿ ಎರಕಗೊಳ್ಳುತ್ತದೆ.

ಈ ತೆರನಾಗಿ ಬಿಡಿ ನಕ್ಷತ್ರಗಳ ನಾಮ–ಆಕಾರ ಸಂವಾದಿತ್ವವನ್ನು ಖಚಿತಪಡಿಸಿಕೊಳ್ಳಬೇಕು. ಭೂಪಟದಿಂದ ದೇಶಗಳ ನಾಮ–ಆಕಾರ ಸಂವಾದಿತ್ವ ತಿಳಿಯುವಂತೆ ನಕ್ಷತ್ರಪಟದಿಂದ ಪುಂಜಗಳ ನಾಮ – ಆಕಾರ ಸಂವಾದಿತ್ವ ತಿಳಿಯುತ್ತೇವೆ (ಚಿತ್ರ ೨).

## ಪುಂಜಗಳ ಕೆಲವು ಮುಖ್ಯ ಗುಣಗಳಿವು

೧ ಅವುಗಳ ಆಕಾರ ಶತಮಾನ ಪರ್ಯಂತ ಬದಲಾಗುವುದಿಲ್ಲ. ಆದ್ದರಿಂದ ನಮ್ಮ ಹಲವಾರು ತಲೆಮಾರುಗಳ ಆಯುರ್ಮಾನ ಕುರಿತಂತೆ ನಕ್ಷತ್ರಚಿತ್ರಗಳನ್ನು ಆಕಾಶದಲ್ಲಿಯ ಶಾಶ್ವತ ದಾಖಲೆಗಳೆಂದು ಭಾವಿಸಬಹುದು. ದೇಶಗಳ ಭೌಗೋ-




ಚಿತ್ರ ೧ : ಸಪ್ತರ್ಷಿಮಂಡಲದ ಏಳು ನಕ್ಷತ್ರಗಳಿವು (ಚಿತ್ರದಲ್ಲಿ ಕೆಳಗಿನಿಂದ ಮೇಲಕ್ಕೆ): ಮರೀಚಿ, ವಸಿಷ್ಠ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು. ವಸಿಷ್ಠದ ಒತ್ತಿಗೆ ತುಸು ಕೆಳಕ್ಕೆ ಇರುವ ಮಂದ ಮಿನುಗೇ ಅರುಂಧತಿ.

ಲಿಕ ಸೀಮಾರೇಖೆಗಳಂತೆ ಪುಂಜಗಳ ನಾಕ್ಷತ್ರಿಕ ಸೀಮಾರೇಖೆಗಳೂ ಅಚರ.

೨ ಅವುಗಳ ಸಾಪೇಕ್ಷ ಸ್ಥಾನಗಳೂ ಹಾಗೆಯೇ. ಐಸಾಕ್ ನ್ಯೂಟನ್ (೧೬೪೨-೧೭೨೭) ನೋಡಿದ ಆಕಾಶ ಚಿತ್ರವನ್ನೇ ಇಂದಿನ ನಾವು ಕೂಡ ನೋಡುತ್ತಿದ್ದೇವೆ. ಎಂದೇ ನಕ್ಷತ್ರಸಾಕ್ಷಿ ಎನ್ನು-ವುದು ಶಾಶ್ವತತೆಯನ್ನು ಪ್ರತೀಕಿಸುವ ನುಡಿ ಕಟ್ಟು. ಈ ರಾತ್ರಿ ಕಾಣುವಂತೆ ಅಕ್ಕಪಕ್ಕದ ಹಲವಾರು ಪುಂಜಗಳನ್ನು ಗುರುತಿಸೋಣ (ಚಿತ್ರ ೩). ಕೆಲವು ವರ್ಷಗಳ ತರುವಾಯ ಇದೇ ತಿಂಗಳ ಇದೇ ರಾತ್ರಿ ಮತ್ತೆ ಆಕಾಶಪಟವನ್ನು ರೇಖಿ-ಸೋಣ. ಎರಡು ಚಿತ್ರಗಳೂ ತದ್ವತ್ತಾಗಿರುತ್ತವೆ. ಭೂಮಿಯಲ್ಲಿ ದೇಶಗಳ ಸಾಪೇಕ್ಷ ಸ್ಥಾನಗಳು ಹೇಗೋ ವ್ಯೋಮದಲ್ಲಿ ಪುಂಜಗಳ ಸಾಪೇಕ್ಷ ಸ್ಥಾನಗಳು ಹಾಗೆ ಗಡಿ, ಅಂತರ, ವಿನ್ಯಾಸ ಒಂದೊಂದರಲ್ಲಿಯೂ ದಿವ್ಯ ತಟಸ್ಥ ನೀತಿ ಪಾಲಿಸುತ್ತವೆ. ಇಷ್ಟೇ ಅಲ್ಲ, ಪ್ರತಿಯೊಂದು ಪುಂಜವನ್ನು ರೂಪಿಸುವ ನಕ್ಷತ್ರಸ್ಥಾನ ಕುರಿತಂತೆ ಕೂಡ ಈ ಮಾತು ನಿಜ. ಆದ್ದರಿಂದ ನಕ್ಷತ್ರ ಚಿತ್ರಗಳೆಂದರೆ ಬಾನಪಟದಲ್ಲಿ ಅಜ್ಞಾತ ಕಲಾವಿದ ಅದ್ಭುತವಾಗಿ ಕುಂಚಿಸಿದ ಅಪೂರ್ವ ತಸವೀರುಗಳೆಂದು ವರ್ಣಿಸಬಹುದು.

೩ ಪುಂಜಗಳನ್ನು ಧರಿಸಿರುವ ಆಕಾಶಗೋಳ (ಅಥವಾ ಖಗೋಳ) ನಮ್ಮ ಸುತ್ತ ಪೂರ್ವ–




ಚಿತ್ರ ೨ : ಚಿತ್ರವನ್ನು ತಲೆಯ ಮೇಲೆ ಕೆಳಮೊಗವಾಗಿ ಹಿಡಿದು ದಿಕ್ಕುಗಳು ಹೊಂದಿಕೆ ಆಗುವಂತೆ ಅಳವಡಿಸಬೇಕು.

ಪಶ್ಚಿಮ ದಿಶೆಯಲ್ಲಿ ಸದಾ ಏಕವೇಗದಿಂದ ಆವರ್ತಿಸುತ್ತಿದೆ. ನಕ್ಷತ್ರಚಿತ್ರಗಳು ನಿತ್ಯವೂ ಮೂಡಲಲ್ಲಿ ಮೂಡಿ ಪಡುವಲಲ್ಲಿ ಕಂತುವುದರ ಕಾರಣವಿದು. ಈ ಉತ್ಸವ ಪರಿಕ್ರಮಣದಲ್ಲಿ ಲಯವಿದೆ, ನಾದವಿಲ್ಲ. ಇಲ್ಲಿಯ ಏಕದಿಶಾ ಸಂಚಾರದಲ್ಲಿ ವಾಹನ ಅಡಚಿಕೆ ಇಲ್ಲ. ಆರಕ್ಷಕ ನೆರವು ಬೇಡ.

೪ ಸಪ್ತರ್ಷಿಮಂಡಲ ಮತ್ತು ಕುಂತೀ ಪುಂಜಗಳನ್ನು ಲಕ್ಷ್ಯವಿಟ್ಟು ನೋಡೋಣ (ಚಿತ್ರ ೪). ಇವೆರಡೂ ಉತ್ತರಾಕಾಶದ ಪುಂಜಗಳು. ಆಗಸ್ಟ್–ಫೆಬ್ರುವರಿ ಅವಧಿಯಲ್ಲಿ ಕುಂತಿಯನ್ನೂ ಫೆಬ್ರುವರಿ–ಆಗಸ್ಟ್ ಅವಧಿಯಲ್ಲಿ ಸಪ್ತರ್ಷಿ ಮಂಡಲವನ್ನೂ ರಾತ್ರಿಯ ಮೊದಲ ಜಾವದಲ್ಲಿ ಕಾಣಬಲ್ಲೆವು. ಫೆಬ್ರುವರಿ ಮತ್ತು ಆಗಸ್ಟ್ ತಿಂಗಳುಗಳಲ್ಲಿ ಎರಡೂ ಗೋಚರವಾಗುತ್ತವೆ. ಕುಂತಿಯ ಪೂರ್ವಕೋನದ ಸಮದ್ವಿಭಾಜಕವನ್ನು ಉತ್ತರದ ತಗ್ಗಿಗೆ ವೃದ್ಧಿಸಬೇಕು. (ಅಡಿಪಟ್ಟಿಯನ್ನು ಕೈಚಾಚಿ ಒಡಿದು ಸಮದ್ವಿಭಾಜಕವಾಗುವಂತೆ ಒಂದು ಅಂಚನ್ನು ಹೊಂದಿಸಬೇಕು.) ಇದಕ್ಕೆ ಎದುರಾಗುವ ಮೊದಲ ಮಂದ ಮಿನುಗಿನ ನಕ್ಷತ್ರವನ್ನು ಗುರುತಿಟ್ಟುಕೊಳ್ಳಬೇಕು. ರಾತ್ರಿಯ ಯಾವ ಜಾವದಲ್ಲೇ ನೋಡಿದರೂ, ಕುಂತಿಯ ವಿನ್ಯಾಸ ಹೇಗೆಯೇ ಇದ್ದರೂ, ಈ ಮಂದ ಮಿನುಗು ಮಾತ್ರ ಅದರ ಸ್ಥಾನದಿಂದ ಕದಲದು. ಸಪ್ತರ್ಷಿಮಂಡಲ ಮೂಡು ಬಾನಿನಲ್ಲಿ ಏರುವಾಗ ಬೃಹತ್ಪ್ರಶ್ನಾರ್ಥಕ ಚಿಹ್ನೆಯಂತೆಯೂ ನಡು ಬಾನಿನಲ್ಲಿ ನಿಂತಿರುವಾಗ ಕಿತ್ತೆಸೆದ ರತ್ನಹಾರದಂತೆಯೂ ಪಡುಬಾನಿನಲ್ಲಿ ಇಳಿಯುವಾಗ ಭಾರೀ ನೇಗಿಲಿನಂತೆಯೂ ಕಾಣುವುದು. ಪ್ರಶ್ನಾರ್ಥಕ ಚಿಹ್ನೆಯ ತಲೆ ನಕ್ಷತ್ರಗಳೇ ನೇಗಿಲಿನ ಗುಳ ನಕ್ಷತ್ರ




ಚಿತ್ರ ೩ : ಜನವರಿ ತಿಂಗಳ ಸಂಜೆಯ ಪೂರ್ವಾಕಾಶದಲ್ಲಿ ಗೋಚರವಾಗುವ ಪ್ರಮುಖ ನಕ್ಷತ್ರ ಪುಂಜ ಮಹಾವ್ಯಾಧ. ಪ್ರಾಚೀನ ಮಾನವನ ಬಗೆಗಣ್ಣು ಇದರಲ್ಲಿ ಬಲಿಷ್ಠ ಬೇಟೆಗಾರನನ್ನು ಕೂರಿಸಿದೆ. ಆರ್ದ್ರಾ ಮತ್ತು ರೋಹಿಣಿ ಎರಡೂ ಕೆಂಪು ಬಣ್ಣದ ನಕ್ಷತ್ರಗಳು.




ಚಿತ್ರ ೪ : ಕುಂತೀಪುಂಜದ ಆಕಾರ ಇಂಗ್ಲೀಷಿನ M ಅಕ್ಷರದಂತಿದೆ. ಜನವರಿ ತಿಂಗಳ ಸಂಜೆಯು ಪೂರ್ವ-ಉತ್ತರ ಆಕಾಶದಲ್ಲಿ ಇದು ಗೋಚರವಾಗುತ್ತದೆ.




ಚಿತ್ರ ೫ : ಕ್ರತುವಿನಿಂದ ಧ್ರುವನಕ್ಷತ್ರವು ಪುಲಹ-ಕ್ರಮ ಅಂತರದ ಅಜಮಾಸು ೫.೫ ಮಡಿ ದೂರದಲ್ಲಿದೆ.




ಚಿತ್ರ ೬ : ವಾಸ್ತವವಾಗಿ ಭೂಮಿ ಸೂರ್ಯನ ಸುತ್ತ ಪರಿಭ್ರಮಿಸುತ್ತಿದೆ. ಆದರೆ ಭೂನಿವಾಸಿಗಳಾದ ನಮಗೆ ಸೂರ್ಯ ನಮ್ಮ ಸುತ್ತ ಪರಿಭ್ರಮಿಸುತ್ತಿರುವಂತೆ ಭಾಸವಾಗುತ್ತದೆ. ಸೂರ್ಯನ ಈ ತೋರ್ಕೆ ಕಕ್ಷೆಯ ಹೆಸರು ಕಾಂತಿವೃತ್ತ. ಇದು ರಾಶಿಚಕ್ರವನ್ನು ಸಮದ್ವಿಭಾಗಿಸುತ್ತದೆ.

ಗಳು. ದಕ್ಷಿಣದಿಂದ ಉತ್ತರಕ್ಕೆ ಇವುಗಳ ಹೆಸರು ಪುಲಹ ಮತ್ತು ಕ್ರತು. ಪುಲಹ–ಕ್ರತು ರೇಖೆಯನ್ನು ಉತ್ತರದ ತಗ್ಗಿಗೆ ವಿಸ್ತರಿಸಬೇಕು. (ಅಡಿಪಟ್ಟಿಯನ್ನು ಕೈ ಚಾಚಿ ಹಿಡಿದು ಇದರ ಒಂದು ಅಂಚನ್ನು ಪುಲಹ–ಕ್ರತು ರೇಖೆಯೊಡನೆ ಹೊಂದಿಸಬೇಕು.) ಇದಕ್ಕೆ ಎದುರಾಗುವ ಮೊದಲ ತಾರೆಯನ್ನು ಗುರುತಿಟ್ಟುಕೊಳ್ಳಬೇಕು (ಚಿತ್ರ ೫). ಮಂದ ಮಿನುಗಿನ ಸಾಧಾರಣ ನಕ್ಷತ್ರವಿದು. ಕ್ರತುವಿನಿಂದ ಇದರ ದೂರ ಪುಲಹ–ಕ್ರತು ಅಂತರದ ಸುಮಾರು ಐದು ಮಡಿ ಇದೆ. (ಕೈವಾರದ ಒಂದೊಂದು ಮೊನೆಯನ್ನು ಈ ಒಂದೊಂದು ನಕ್ಷತ್ರದಲ್ಲಿ ನೆಲಸುವಂತೆ ಹೊಂದಿಸಿ ಈ ಅಂತರ ಅಳೆಯಬೇಕು.) ಹೀಗೆ ಕುಂತಿ ಮತ್ತು ಸಪ್ತರ್ಷಿಮಂಡಲಗಳ ನೆರವಿನಿಂದ ಗುರುತಿಸಿದ ಎರಡು ಮಂದ ಮಿನುಗುಗಳೂ ಒಂದೇ. ಇದರ ಹೆಸರು ಧ್ರುವ ನಕ್ಷತ್ರ. ನಕ್ಷತ್ರಗಳ ಮತ್ತು ಪುಂಜಗಳ ಸಂತತ ಪೂರ್ವ–ಪಶ್ಚಿಮ ಪರಿವ್ರಾಜಕತ್ವದಲ್ಲಿ ಇದಕ್ಕೆ ಮಾತ್ರ ವಿನಾಯಿತಿ. ಇದು ಮೂಡದು, ಏರದು, ಇಳಿಯದು, ಕಂತದು. ನಕ್ಷತ್ರ ನಗರ ಪ್ರದಕ್ಷಿಣೆಗೆ ಇದೇ ಆರಂಭಬಿಂದು.

೫ ಧ್ರುವನಕ್ಷತ್ರದ ಕೋನೋನ್ನತಿ ವೀಕ್ಷಕನ ಅಕ್ಷಾಂಶಕ್ಕೆ ಸಮ. ಧ್ರುವನಕ್ಷತ್ರಾಭಿಮುಖಿಯಾಗಿ ನಿಂತು ಕೈವಾರದ ಒಂದು ಬಾಹುವನ್ನು ಕಣ್ಣಿನ ನೇರ ನೆಲಕ್ಕೆ ಸಮಾಂತರವಾಯೂ ಇನ್ನೊಂದನ್ನು ಧ್ರುವನಕ್ಷತ್ರಕ್ಕೆ ಗುರಿಯಾಗಿಯೂ ಹಿಡಿಯಬೇಕು. ಇವೆರಡು ಬಾಹುಗಳ ನಡುವಿನ ಕೋನವೇ ಧ್ರುವನಕ್ಷತ್ರದ ಕೋನೋನ್ನತಿ— ವೀಕ್ಷಕನ ಹಾರಿಜದಿಂದ ಅದು ಅಷ್ಟು ಎತ್ತರದಲ್ಲಿದೆ ಎಂದರ್ಥ. ನಿಮ್ಮ ನೆಲೆಯ ಅಕ್ಷಾಂಶವನ್ನು ಭೂಪಟದಿಂದ ತಿಳಿಯಬಹುದು. ಇವೆರಡೂ ಸಮ. ಅಜ್ಞಾತ ಪ್ರದೇಶದಲ್ಲಿ ಸಿಕ್ಕಿ ಹಾಕಿಕೊಂಡ ಯಾತ್ರಿಕ ಧ್ರುವನಕ್ಷತ್ರದ ಕೋನೋನ್ನತಿ ಅಳೆದು ತನ್ನ ಅಕ್ಷಾಂಶ ಗಣಿಸಬಹುದು.

ನಕ್ಷತ್ರಗಳೆಂದರೆ ಆಕಾಶದ ಅಪಾರ ವಿಸ್ತಾರದಲ್ಲಿ ಅತ್ಯಂತ ವಿರಳವಾಗಿಯೂ ದೂರ ದೂರವಾಗಿಯೂ ಕ್ರಮರಹಿತವಾಗಿಯೂ ಹರಡಿ ಹೋಗಿರುವ ಅಗ್ನಿಗೋಳಗಳು. ಗ್ರಹಗಳಾದರೋ ಸೂರ್ಯನ ಸುತ್ತಲಿನ ಸೀಮಿತ ಅವಕಾಶದಲ್ಲಿ ನಿರ್ದಿಷ್ಟ ಕಕ್ಷೆಗಳಲ್ಲಿ ಸೂರ್ಯನನ್ನು ಪರಿಭ್ರಮಿಸುತ್ತಿರುವ ಮೃತ (ನಕ್ಷತ್ರವಲ್ಲದ ಎಂಬರ್ಥದಲ್ಲಿ) ಕಾಯಗಳು. ಇವು ಸೂರ್ಯ (ನಕ್ಷತ್ರ) ಪ್ರಕಾಶವನ್ನು ಪ್ರತಿಫಲಿಸಿ ಬೆಳಗುತ್ತವೆ. ಆದರೆ ಮೇಲು ನೋಟಕ್ಕೆ ಗ್ರಹಗಳು ಕೂಡ ನಕ್ಷತ್ರಗಳಂತೆಯೇ ಬೆಳಕಿನ ಚುಕ್ಕಿಗಳಾಗಿ ಕಾಣುತ್ತವೆ. ಇವನ್ನು ನಕ್ಷತ್ರಗಳಿಂದ ಪ್ರತ್ಯೇಕಿಸಿ ಗುರುತಿಸಲು ಕೆಲವು ಸುಲಭ ಪರೀಕ್ಷೆಗಳಿವೆ:

೧ ಗ್ರಹದಿಂದ ಹರಿದು ಬರುವ ಬೆಳಕು ಅಖಂಡವಾಗಿರುವುದು—ಟಾರ್ಚ್ ಲೈಟಿನ ಕಿರಣ ದಂಡದಂತೆ. ನಕ್ಷತ್ರದಿಂದ ಬರುವ ಬೆಳಕಾದರೋ ಮಿನುಗುತ್ತಿರುವುದು — ನೀರಿನ ಮೂಲಕ ಹಾಯುವ ಕಂಬಿಯಂತೆ. ದೂರದರ್ಶಕದ ಮೂಲಕ ನೋಡಿದರೆ ಗ್ರಹದ ಬಿಂಬ ಅಥವಾ ಬಿಲ್ಲೆ ಎದ್ದು ಕಾಣುತ್ತದೆ — ಚಂದ್ರಬಿಂಬದಂತೆ. ಎಂಥ ಸಮರ್ಥ ದೂರದರ್ಶಕವೂ ಸೂರ್ಯನ ಹೊರತಾಗಿ ಯಾವುದೇ ನಕ್ಷತ್ರದ ಬಿಂಬವನ್ನೂ ಕಾಣಿಸಲಾರದು.

೨ ಗ್ರಹದ ಸ್ಥಾನ ಸ್ಥಿರವಲ್ಲ. ಸ್ಥಿರನಕ್ಷತ್ರ ಚಿತ್ರಗಳ ಮುನ್ನೆಲೆಯಲ್ಲಿ ಗ್ರಹಸ್ಥಾನವನ್ನು ಹಲವು ದಿನ ಪರ್ಯಂತ ಆಲೇಖಿಸಿ ಗ್ರಹ ಚಲನೆಯನ್ನು ಪ್ರತ್ಯಕ್ಷವಾಗಿ ನೋಡಬಹುದು.

೩ ಪ್ರತಿಯೊಂದು ಗ್ರಹದ (ಚಂದ್ರ ಮತ್ತು ಸೂರ್ಯನ ಕೂಡ) ಚಲನೆಯೂ ಖಗೋಳದ ಒಂದು ಇಕ್ಕಟ್ಟು ಪಟ್ಟಿಗೆ ಸೀಮಿತವಾಗಿದೆ. ಇದಕ್ಕೆ ರಾಶಿಚಕ್ರವೆಂದು ಹೆಸರು (ಚಿತ್ರ ೬). ಮೇಷದಿಂದ ಮೀನದ ವರೆಗಿನ ದ್ವಾದಶ ನಕ್ಷತ್ರ ರಾಶಿಗಳು ಇದನ್ನು ನಿರ್ಧರಿಸುತ್ತವೆ.

(ಸಶೇಷ)

# ಕವಿತೆ ಕಾಡುತ್ತದೆ

ಕವಿತೆ ಕಾಡುತ್ತದೆ
ನನ್ನೆದೆಯ ನೀರಿನಲ್ಲಿ
ಬೇರನಿಳಿಬಿಟ್ಟು ಕಲಕುತ್ತಲೇ
ಮೇಲೆ ತೇಲುತ್ತದೆ
ಅಂಗಾಂಗಗಳಿಗೆ ವಾಸನೆಯ
ರಂಗಲೇಪಿಸುವ
ಈ ಸುಗಂಧರಾಣಿಯನ್ನು
ಬೇರುಸಹಿತ ಕಿತ್ತು
ಬಿಸಾಕಬೇಕೆಂದರೆ
ಕಿತ್ತಬೇರಿನಗುಂಟ
ಹೂ ಮೊಗ್ಗುಗಳ ಹುತ್ತ !
ಹುತ್ತದೊಳಗಡೆ
ಪಕಳೆಗೊಂದೊಂದು ಹೆಡೆ
ಬಿಚ್ಚಿ ಆಡುತ್ತದೆ
ಹೂವಾಗಿ ಅರಳುವ ಕವಿತೆ
ಹಾವಾಗಿ ಕಾಡುತ್ತದೆ

-ಬಸವರಾಜ ವಕ್ಕುಂದ

# ಮುಗ್ಧೆ

ಮೂಲ: ಆ್ಯಂಟನ್ ಚೆಕಾಫ್
ಕನ್ನಡಕ್ಕೆ: ಸೋಮಪ್ಪ ಪಳಂಗಂಡ

ಕೆಲವು ದಿನಗಳಾದ ಮೇಲೆ, ನನ್ನ ಮಕ್ಕಳಿಗೆ ಪಾಠ ಹೇಳುವ ಶಿಕ್ಷಕಿಯನ್ನು ನನ್ನ ಕೊಠಡಿಗೆ ಬರ ಹೇಳಿದೆ.

"ಕುಳಿತುಕೊಳ್ಳಿ, ನಾವೀಗ ನಮ್ಮ ಹಣದ ವ್ಯವಹಾರವನ್ನು ಮುಗಿಸಿಬಿಡೋಣ. ಏಕೆಂದರೆ ನಿಮಗೀಗ ಹಣದ ಅವಶ್ಯಕತೆ ಬಹಳವಿದೆ. ಅಲ್ಲದೆ ನೀವಾಗಿಯೇ ಎಂದೂ ಹಣದ ಬಗ್ಗೆ ಔಪಚಾರಿಕವಾಗಿ ಮಾತಾಡುವವರಲ್ಲವೆಂದೂ ಗೊತ್ತು. ನೀವು ಮೂವತ್ತು ರೂಬೆಲ್‌ಗಳಿಗೆ ನನ್ನ ಮಕ್ಕಳಿಗೆ ಪಾಠಹೇಳಲು ಒಪ್ಪಿದ್ದೀರಿ..."

"ನಲ್ವತ್ತು ರೂಬೆಲ್‌ಗಳಿಗೆ..." ಜೂಲಿಯಾ ಕ್ಷೀಣವಾಗಿ ಹೇಳಿದಳು.

"ಇಲ್ಲಿಲ್ಲ, ಮೂವತ್ತು ರೂಬೆಲ್‌ಗಳು. ನಾನು ಅದನ್ನು ನನ್ನ ದಿನಚರಿಯಲ್ಲಿ ಗುರುತಿಸಿ ಕೊಂಡಿದ್ದೇನೆ. ಅದೂ ಅಲ್ಲದೆ ನಾನೆಂದೂ ಯಾವ ಶಿಕ್ಷಕರಿಗೂ ಮೂವತ್ತು ರೂಬೆಲ್‌ಗಳಿಗಿಂತ ಹೆಚ್ಚಾಗಿ ಕೊಟ್ಟಿಲ್ಲ. ನೀವು ನನ್ನ ಮಕ್ಕಳಿಗೆ ಎರಡು ತಿಂಗಳು ಪಾಠ ಹೇಳಿಕೊಟ್ಟಿದ್ದೀರಿ..."

"ಎರಡು ತಿಂಗಳು ಐದು ದಿನಗಳು..."

"ಊಹುಂ–ಎರಡೇ ಎರಡು ತಿಂಗಳು. ನಾನು ಸರಿಯಾಗಿ ಗುರುತಿಸಿಕೊಂಡಿದ್ದೇನೆ. ಅಂದರೆ ನನ್ನಿಂದ ನಿಮಗೆ ಅರವತ್ತು ರೂಬೆಲ್‌ಗಳು ಬರಬೇಕು. ಅದರಲ್ಲಿ ಒಂಭತ್ತು ರವಿವಾರಗಳನ್ನೂ ಮೂರು ಸಾರ್ವತ್ರಿಕ ರಜಾ ದಿನಗಳನ್ನೂ ವಜಾ ಮಾಡಬೇಕು... ಮೂರು ರಜಾ ದಿನಗಳಿಗೆ ನಾನು ಹನ್ನೆರಡು ರೂಬೆಲ್‌ಗಳನ್ನು ಹಿಡಿದುಕೊಳ್ಳುತ್ತೇನೆ. ನಾಲ್ಕು ದಿನ ನನ್ನ ಮೊದಲ ಮಗುವಿನ ಆರೋಗ್ಯ ಸರಿಯಿರಲಿಲ್ಲ. ನೀವು ಆ ದಿನಗಳಲ್ಲಿ ನನ್ನ ಎರಡನೆಯ ಮಗು ವನ್ಯಾಳಿಗೆ ಮಾತ್ರ ಪಾಠ ಹೇಳಿದ್ದೀರಿ. ಅನಂತರದ ಮೂರು ದಿನ ನಿಮಗೆ ವಿಪರೀತ ಹಲ್ಲು ನೋವಿದ್ದುದರಿಂದ ನನ್ನ ಮಕ್ಕಳಿಗೆ ಏನೂ ಪಾಠ ಹೇಳಲಿಲ್ಲ. ಆಗೆಲ್ಲ ನೀವು ನನ್ನ ಪತ್ನಿಯ ಅಪ್ಪಣೆ ಪಡೆದು ಮನೆಗೆ ಹೋಗಿದ್ದೀರಿ,



ಆಮುದರಿಂದ ಅದಕ್ಕಾಗಿ ಕೇವಲ ಏಳು ರೂಬೆಲ್‌ಗಳನ್ನು ಕಡಿಮೆ ಮಾಡುತ್ತೇನೆ. ಈಗ ಒಟ್ಟು ಕಡಿತ ಹನ್ನೆರಡು ಮತ್ತು ಏಳು ರೂಬೆಲ್‌ಗಳು. ಅಂದರೆ, ಹತ್ತೊಂಬತ್ತು ರೂಬೆಲ್‌ಗಳು. ಅರವತ್ತರಿಂದ ಹತ್ತೊಂಭತ್ತು ರೂಬೆಲ್‌ಗಳನ್ನು ಕಳೆದರೆ ಉಳಿದದ್ದು ನಲವತ್ತೊಂದು. ರೂಬೆಲ್‌ಗಳು. ಅಂದರೆ ನಿಮಗೆ ನನ್ನಿಂದ ನಲವತ್ತೊಂದು ರೂಬೆಲ್‌ಗಳು ಬರಬೇಕು ಸರಿ ತಾನೇ?"

ಜೂಲಿಯಾಳ ಕಣ್ಣುಗಳು ಕೆಂಪಾದವು. ಅವಳ ಗದ್ದ ಸಣ್ಣನೆ ಕಂಪಿಸುತ್ತಿತ್ತು. ಹೆದರಿಕೆ. ಒಮ್ಮೆ ಸೀನಿದಳು. ಆದರೆ ಮೌನಿಯಾಗಿದ್ದಳು.

"ಹೊಸ ವರುಷದ ಆರಂಭದಲ್ಲಿ ನೀವೊಮ್ಮೆ ಚಾದ ಕಪ್ಪನ್ನು ಒಡೆದಿರಿ. ಅದಕ್ಕಾಗಿ ಎರಡು ರೂಬೆಲ್‌ಗಳನ್ನು ಕಳೆಯುತ್ತಿದ್ದೇನೆ. ಆ ಕಪ್ ನಮಗೆ ವಂಶ ಪಾರಂಪರ್ಯವಾಗಿ ಬಂದದ್ದು. ಆಗಲಿ. ಅದೂ ಅಲ್ಲದೆ ನಿಮ್ಮಿಂದ ನಾವು ನಷ್ಟವನ್ನು ಅನುಭವಿಸದ ದಿನ ಯಾವುದಿದೆ? ಒಮ್ಮೆ ನಿಮ್ಮ ಅಸಡ್ಡೆಯಿಂದ ನನ್ನ ಮಗುವಿನ ಬಟ್ಟೆ ಹರಿದು ಹೋಗಿತ್ತಲ್ಲ. ಅದಕ್ಕೆ ಹತ್ತು ರೂಬೆಲ್

ಗಳನ್ನು ಮಾತ್ರ ಕಡಿತಮಾಡುತ್ತಿದ್ದೇನೆ. ಒಮ್ಮೆ ನಿಮ್ಮ ಅಲಕ್ಷ್ಯದಿಂದ ಯಾರೋ ನನ್ನ ಮಗುವಿನ ಪಾದರಕ್ಷೆಗಳನ್ನು ಕದ್ದರಲ್ಲ. ಅದಕ್ಕೆ ಐದು ರೂಬೆಲ್‌ಗಳನ್ನು ಕಳೆಯುತ್ತಿದ್ದೇನೆ. ನೀವು ಎಲ್ಲವನ್ನೂ ಸರಿಯಾಗಿ ನೋಡಿಕೊಳ್ಳಬೇಕು ನೋಡಿ. ಅದಕ್ಕೋಸ್ಕರವೇ ನಾನು ನಿಮಗೆ ಸಂಬಳ ಕೊಡುತ್ತಿರುವುದು...ಹಾಂ–ಅಂದಹಾಗೆ ನೀವು ನನ್ನಿಂದ ಹತ್ತು ರೂಬೆಲ್‌ಗಳನ್ನು ಕಡ ತೆಗೆದುಕೊಂಡಿದ್ದಿರಿ..."

"ಅಂ? ಯಾವಾಗ? ನಾನು ಕಡ ತೆಗೆದುಕೊಂಡಿರಲಿಲ್ಲ..."

"ಆದರೆ ನಾನು ಈ ಪುಸ್ತಕದಲ್ಲಿ ಗುರುತಿಸಿಕೊಂಡಿದ್ದೇನಲ್ಲ."

"ಸರಿ, ಒಳ್ಳೆಯದು."

"ನಲವತ್ತೊಂದು ರೂಬೆಲ್‌ಗಳಿಂದ ಇಪ್ಪತ್ತೇಳನ್ನು ಕಳೆದರೆ ಹದಿನಾಲ್ಕು ರೂಬೆಲ್‌ಗಳು..."

ಈಗ ಆಕೆಯ ಕಣ್ಣುಗಳಿಂದ ಅಶ್ರುಗಳು ಬೀಳತೊಡಗಿದವು. ಸುಂದರ ಮೂಗಿನ ತುದಿಯ ಮೇಲೆ ಅಂದದ ಬೆವರ ಹನಿಗಳು! ಪಾಪ!

"ಒಮ್ಮೆ ಮಾತ್ರ ನಾನು ಹಣ ತೆಗೆದುಕೊಂಡಿದ್ದೇನೆ. ಅದು ನಿಮ್ಮಿಂದಲ್ಲ. ನಿಮ್ಮ ಪತ್ನಿಯಿಂದ. ಅದೂ ಮೂರು ರೂಬೆಲ್‌ಗಳು ಮಾತ್ರ."

"ಹೌದಾ? ಅದನ್ನು ನಾನು ಬರೆಯಲೇ ಇಲ್ಲ ನೋಡಿ. ಅಂದರೆ ನಾನು ನಿಮಗೆ ಹನ್ನೊಂದು ರೂಬೆಲ್‌ಗಳನ್ನು ಕೊಡಬೇಕು. ಇಲ್ಲಿ ನೋಡಿ, ಒಂದು, ಎರಡು ಮೂರು... ಹನ್ನೊಂದು ರೂಬೆಲ್‌ಗಳು."

ನಾನು ಅವಳಿಗೆ ಹನ್ನೊಂದು ರೂಬೆಲ್‌ಗಳನ್ನು ಕೊಟ್ಟೆ. ನಡಗುವ ಕೈಗಳಿಂದ ಅವುಗಳನ್ನು ಪಡೆದು ತನ್ನ ಪರ್ಸಿನಲ್ಲಿಟ್ಟುಕೊಂಡು, "ಧನ್ಯವಾದಗಳು," ಎಂದು ಮೆಲ್ಲನೆ ಹೇಳಿದಳು.

ನಾನು ಕೊಠಡಿಯಲ್ಲಿ ತಿರುಗಾಡುತ್ತಾ ಕೋಪದಿಂದ, "ಯಾರಿಗೆ? ಯಾತಕ್ಕೋಸ್ಕರ ನಿಮ್ಮ ಈ ಧನ್ಯವಾದಗಳು?" ಎಂದು ಕೇಳಿದೆ.

"ನಿಮಗೇ ನೀವು ಹಣ ಕೊಟ್ಟದ್ದಕ್ಕಾಗಿ," ಎಂದಳು.

"ಆದರೆ ನಾನು ನಿಮಗೆ ಮೋಸ ಮಾಡಿದ್ದೇನೆ. ನಿಮ್ಮಿಂದ ಬಹಳ ಹಣವನ್ನು ಸೂರೆ ಮಾಡಿದ್ದೇನೆ. ನಿಜವಾಗಿ ಇದು ದರೋಡೆಯೇ ಸರಿ. ಇಂಥದರಲ್ಲಿ ನನಗೇಕೆ ಧನ್ಯವಾದಗಳನ್ನು ಹೇಳುತ್ತೀರಿ?"

"ಆದರೆ ನನಗೆ ಉಳಿದೆಡೆ ಸಂಬಳವನ್ನೇ ಕೊಡುವುದಿಲ್ಲವಲ್ಲ."

"ಸಂಬಳವನ್ನೇ ಕೊಡುವುದಿಲ್ಲ? ಆಶ್ಚರ್ಯವೇನಿಲ್ಲ! ನಾನು ನಿಮಗೆ ತಮಾಷೆಗೆ ಹಾಗೆಲ್ಲ ಹೇಳಿದ್ದೆ. ಕೇವಲ ತಮಾಷೆಗಾಗಿ, ನಾನು ನಿಮಗೆ ೮೦ ರೂಬೆಲ್‌ಗಳನ್ನು ಕೊಡುತ್ತಿದ್ದೇನೆ. ತೆಗೆದುಕೊಳ್ಳಿ ಈ ಲಕೋಟೆ. ಯಾರಾದರೂ ಇಷ್ಟು ಶೋಷಣೆಗೆ ಒಳಪಡಲು ಸಾಧ್ಯವೇ? ನೀವು ಏಕೆ ಪ್ರತಿರೋಧಿಸಲಿಲ್ಲ? ಏಕೆ ಮಾತಾಡುತ್ತಿಲ್ಲ? ಈ ದಿನಗಳಲ್ಲಿ ನಿಮ್ಮಷ್ಟು ಒಳ್ಳೆಯವರಾಗಿ ಬದುಕಲು ಸಾಧ್ಯವೇ?" ಎಂದೆ.

ಸೌಮ್ಯವಾಗಿ ನಗುತ್ತಾ ಆಕೆ "ಸಾಧ್ಯವಿದೆ" ಎಂದಳು.

ನನ್ನನ್ನು ಕ್ಷಮಿಸಿರೆಂದು ಆಕೆಯನ್ನು ಕೇಳಿಕೊಂಡೆ. ಆಕೆ ಮೂಕವಿಸ್ಮಿತಳಾಗಿ ೮೦ ರೂಬೆಲ್‌ಗಳನ್ನು ಸ್ವೀಕರಿಸಿ, ಆಕೆ ಮತ್ತೆ ಮತ್ತೆ ಧನ್ಯವಾದಗಳನ್ನು ಅರ್ಪಿಸಿ ಮೆಲ್ಲನೇ ಹೊರಹೋದಳು.

ಈ ದಿನಗಳಲ್ಲಿ ಶೋಷಣೆ ಎಷ್ಟು ಸುಲಭ! ನನ್ನ ಆಲೋಚನೆ ಸಾಗಿಯೇ ಇತ್ತು. ✡

# ಮುಕ್ತಿ ಮೋಕ್ಷ

**ಕೆ. ಚಂದ್ರಮೌಳಿ**

**ಕುರುಕ್ಷೇತ್ರದಲ್ಲಿ ದಾನ,**
**ತ್ರಿವೇಣಿಯಲ್ಲಿ ಸ್ನಾನ,**
**ಗಯಾದಲ್ಲಿ ಶ್ರಾದ್ಧ,**
**ಕಾಶಿಯಲ್ಲಿ ದೇಹತ್ಯಾಗ**

ಒಂಟಿ , ಪಯಣಿಗನಾಗಿ ಹೊರಟಾಗ ಎಲ್ಲೋ ಕೇಳಿದ ಮಾತನ್ನು ಸ್ವಲ್ಪ ಮಟ್ಟಿಗೆ ಬದಲಿಸಿದ್ದೇನೆ. ಮೊದಲು ಕೇಳಿದ್ದರ ಪ್ರಕಾರ, ಕುರುಕ್ಷೇತ್ರದಲ್ಲಿ ದಾನಮಾಡಬೇಕು, ಪ್ರಯಾಗದಲ್ಲಿ ಕ್ಷೌರವಾಗಬೇಕು. ಇದೇನೋ ವಿಚಿತ್ರವೆನಿಸಿತು. ಸ್ವಲ್ಪ ಯೋಚಿಸಿದ ನಂತರ ಹಿಂದಿನ ಕಾಲದವರ ಈ ಹೇಳಿಕೆಗೂ ಹೊಸ ಅರ್ಥ ಸಿಕ್ಕಿತು. ಕುರುಕ್ಷೇತ್ರದಲ್ಲಿ ಅಂದರೆ ಜೀವನದ ರಣರಂಗದಲ್ಲಿ ಕಾದು ಬಳಲಿ ಬೇಯುತ್ತಿರುವವರು ತನ್ನದೆಂಬ ಮೋಹವನ್ನು ಬಿಟ್ಟು ಸಕಲ ಇಷ್ಟಾರ್ಥಗಳನ್ನೂ ದಾನಮಾಡಿ, ಬರಿಗೈಯಿಂದ ಪೂರ್ವದ ಕಡೆಗೆ ಪ್ರಯಾಣ ಹೊರಡಬೇಕು. ಮೊದಲು ಪ್ರಯಾಗದಲ್ಲಿ "ನಾನು" ಎಂಬ ಅಸ್ತಿತ್ವ ಕೊಡುವ ವೇಷಭೂಷಣಗಳನ್ನೆಲ್ಲಾ ಕಳಚಿ, ತಲೆ ಬೋಳಿಸಿಕೊಂಡು ತ್ರಿವೇಣಿ ಸಂಗಮದಲ್ಲಿ ಮಿಂದು ದುರ್ಗುಣಗಳ ಕಲ್ಮಶ ತೊಳೆದುಕೊಳ್ಳಬೇಕು. ಗಯಾದಲ್ಲಿ ಶ್ರಾದ್ಧ ನಡೆಸಿ ಪಿತ್ರಾದಿಗಳ ಋಣ ತೀರಿಸಬೇಕು, ಕೊನೆಗೆ ಕಾಶಿಗೆ ಹೋಗಿ ಅಲ್ಲಿ ತ್ಯಾಗ ಮಾಡಿ ಮುಕ್ತಿಯನ್ನು ಹೊಂದಬೇಕು. ಅಯ್ಯೋ ದೇವರೆ, ಮುಕ್ತಿಯೇನೆಂದು ಗೊತ್ತಿಲ್ಲದ್ದನ್ನು ಪಡೆಯಲು ಹಿಂದಿನವರು ಇಷ್ಟೆಲ್ಲಾ ಒದ್ದಾಡುತ್ತಿದ್ದರೇ ಎಂದು ಆಶ್ಚರ್ಯವಾಯಿತು. ಆದರೆ ಈಗಿನ ಹೊಸ ಯುಗದಲ್ಲಿ ಎಲ್ಲಾ ಜಟಿಲ ಸಮಸ್ಯೆಗಳಿಗೂ ಶೀಘ್ರ ಸುಲಭೋಪಾಯಗಳು ಬೇಕು, ದೊಡ್ಡ ಸಮಸ್ಯೆಗಳಿಗೆ ದಿಢೀರ್ ಉತ್ತರಗಳು ಬೇಕು. ಇದಕ್ಕೆ ಸರಿಯಾಗಿ ಈಚೆಗೆ ನೀವು ನಿಮ್ಮ ಧನಕನಕಾದಿಗಳನ್ನು ದಾನ ಮಾಡುವ ಸಮಸ್ಯೆಯೇ ಇಲ್ಲ. ಹದ್ದು ನರಿಗಳಂತೆ ಕಾದಿದ್ದು ನಿಮ್ಮದನ್ನೆಲ್ಲಾ ಕಸಿದುಕೊಂಡು ನಿಮ್ಮನ್ನು ತೀರ್ಥಯಾತ್ರೆಗೆ ಸಾಗಹಾಕುತ್ತಾರೆ. ತ್ರಿವೇಣಿ ಸಂಗಮದಲ್ಲಿ ಸ್ನಾನ ಮಾಡಲೆಂದು ಹೊರಟಾಗ ಯಾವ ತೊಂದರೆಯೂ ಇಲ್ಲದೇ ನೀವು ಬಿಚ್ಚಿಟ್ಟಿದ್ದ ವೇಷಭೂಷಣಗಳು ಮಾಯವಾಗಿಬಿಟ್ಟಿರುತ್ತವೆ. ಇನ್ನು ಗಯಾದಲ್ಲಿ ಪಿತೃಗಳ ಶ್ರಾದ್ಧವಿರಲಿ, ನನ್ನದೇ ಶ್ರಾದ್ಧಮಾಡಲು ಪಂಡಾಗಳು ಹೇಗೆ ಓಡಿಬಂದಿದ್ದರೆಂದು ನಿಮಗೆ ಬೇರೆ ಕಡೆ ಹೇಳಿದ್ದೇನೆ. ಕಾಶಿಯಲ್ಲಿ ದೇಹತ್ಯಾಗ ಮಾಡುವುದರ ಬಗ್ಗೆ ಮಾತ್ರ ಹೆಚ್ಚು ಹೇಳಲಾರೆ. ಕಾಶಿ ಬಿಟ್ಟು ಮುಗಲ್‌ಸರಾಯ್‌ಗೆ ಹೋದಾಗ ಏನಾದರೂ

ನಿಮ್ಮ ಪ್ರಾಣಪಕ್ಷಿ ಹಾರಿಹೋದರೆ, ನಿಮಗೆ ಮುಕ್ತಿಯ ಬದಲು ಕತ್ತೆಯ ಜನ್ಮ ಮಾತ್ರ ಖಂಡಿತ!

ಇದೇ ರೀತಿ ಯೋಚನೆ ಮಾಡಿಕೊಂಡು ತ್ರಿವೇಣಿ ಸಂಗಮದಲ್ಲಿ ಓಡಾಡುತ್ತಿದ್ದಾಗ ಕುಂಭಮೇಳದ ನೆನಪಾಯಿತು. ಕುಂಭಮೇಳ ನೋಡಬೇಕು ಅನ್ನಿಸಿತು. ನನ್ನ ಸ್ನೇಹಿತನಿಗೆ ಹೇಳಿದ್ದಕ್ಕೆ ಅವನು ಜೋರಾಗಿ ನಕ್ಕ, ಕೊನೆಗೆ ಕೋಪ ಮಾಡಿಕೊಂಡು ಬೈದ, "ಅರೆ, ನಿಂಗೇನಾದರೂ ಹುಚ್ಚು ಹಿಡಿದಿದೆಯೇನು? ಎಲ್ಲಾ ಬಿಟ್ಟು ಕುಂಭಮೇಳ ನೋಡ್ಬೇಕು ಅಂತೀಯಲ್ಲ. ೧೯೫೪ ರ ಮೇಳದಲ್ಲಿ ಏನಾಯ್ತು ಕೇಳಿದ್ದಿಯೇನು?..." ೧೯೫೪ರ ಕುಂಭ ಮೇಳದಲ್ಲಿ ನಡೆದ ಗಲಾಟೆಯ ಬಗ್ಗೆ ಅಲ್ಪಸ್ವಲ್ಪ ಕೇಳಿದ್ದೆ. ಆ ವರ್ಷದ ಮೌನಿ ಅಮಾವಾಸ್ಯೆ ಅಥವಾ ಪೂರ್ಣ ಕುಂಭದ ಕೊನೆಯ ದಿನ ಸುಮಾರು ೬೦ ಲಕ್ಷ ಜನ ಯಾತ್ರಿಕರು ಸಂಗಮದಲ್ಲಿ ಸೇರಿದ್ದರಂತೆ. ಲಕ್ಷಗಟ್ಟಲೆ ಸಂನ್ಯಾಸಿಗಳು, ಸುಮಾರು ಸಾವಿರ ಸಂನ್ಯಾಸಿನಿಯರು ಎಲ್ಲರೂ ಅವತ್ತು ಸಂಗಮ ಸ್ನಾನಕ್ಕೆ ಬಂದಿದ್ದರಂತೆ. ಇದ್ದಕ್ಕಿದ್ದ ಹಾಗೆ ಏನಾಯಿತೋ ಏನೋ ಎಲ್ಲಿಂದಲೋ ನೂಕು ನುಗ್ಗಲು ಶುರುವಾಯಿತು. ಕ್ಷಣ ಮಾತ್ರದಲ್ಲಿ ಸಮುದ್ರದ ದೊಡ್ಡ ಅಲೆಯಂತೆ ಜನಗಳ ಅಲೆ ನುಗ್ಗಿ ಹೆಂಗಸರು, ಮಕ್ಕಳು, ಮುದುಕರು, ತರುಣರೆನ್ನದೆ ಎಲ್ಲರ ಮೇಲೂ, ಒಬ್ಬರ ಮೇಲೆ ಹತ್ತು, ನೂರಾರು ಜನ ಬಿದ್ದು ತುಳಿದಾಡಿದರಂತೆ. ನೂಕು ನುಗ್ಗಲಲ್ಲಿ ಕಂಗೆಟ್ಟ ಸುಮಾರು ಐನೂರು ಜನ ಜಿಪ್ಪಲ್ಲೇ ಸತ್ತರಂತೆ. ಆಮೇಲೆ ಸತ್ತವರೆಷ್ಟೋ, ಗಾಯಗೊಂಡು ಬಳಲಿದವರೆಷ್ಟೋ ಒಂದೂ ಸರಿಯಾಗಿ ಲೆಕ್ಕವಿಲ್ಲ. ಓಡುವಾಗ ಕಾಲಿನಿಂದ ಕಳಚಿದ ಚಪ್ಪಲಿಗಳ ರಾಶಿ ರಾಶಿಯೇ ಬಿದ್ದಿತ್ತಂತೆ—ಹೆಣಗಳದ್ದೂ ಅಷ್ಟೇ ಅಂತಾರೆ. ಅಂದು ಅಲಹಾಬಾದಿನಲ್ಲಿ ಬೆಳಿಗ್ಗೆ ಬೀಗ ಹಾಕಿದ ಎಷ್ಟೋ 'ಮನೆಗಳು ಮತ್ತೆ ಬಾಗಿಲು ತೆಗೆಯಲೇ ಇಲ್ಲವಂತೆ—ಅಂದರೆ ಎಷ್ಟೋ ಕುಟುಂಬಗಳು ಹೇಳ ಹೆಸರಿಲ್ಲದಂತೆ ಪ್ರಯಾಗದ ಮರಳಿನಲ್ಲಿ ಹೂತು ಹೋಗಿದ್ದವು! ಈ ಜನ ಪ್ರಳಯದಿಂದ ತಪ್ಪಿಸಿಕೊಂಡು ಬಂದವರು ಕೆಲವರು—ಅವರನ್ನು ಭಾಗ್ಯವಂತರೆನ್ನಬೇಕೋ ದುರ್ಭಾಗ್ಯರೆನ್ನಬೇಕೋ ತಿಳಿಯದು—ಮಗನನ್ನು ಕಳೆದುಕೊಂಡ ದಂಪತಿಗಳು, ಹಸುಗೂಸನ್ನು ಕಳೆದುಕೊಂಡ ತಾಯಿ, ಹೆಂಡತಿ ಮಕ್ಕಳನ್ನು ಕಳೆದುಕೊಂಡ ಮನುಷ್ಯ, ಗಂಡನನ್ನು ಕಳೆದುಕೊಂಡ ಹೆಂಡತಿ. ಯಾವಳೋ ಒಬ್ಬಾಕೆ ತಾಯಿ ಇನ್ನು ತನಗೆ ಉಳಿಗಾಲವಿಲ್ಲೆಂದು ತಿಳಿದು, ತನ್ನ ಕಂಕುಳಲ್ಲಿದ್ದ ಮಗುವಾದರೂ ಬದುಕಲೆಂದು ಅದನ್ನು ಪಕ್ಕದಲ್ಲೇ ಹೋಗುತ್ತಿದ್ದ ಪಲ್ಲಕ್ಕಿಯ ಒಳಗೆ ಎಸೆದುಬಿಟ್ಟಳಂತೆ. ಆ ಹಸುಗೂಸನ್ನು ಪಲ್ಲಕ್ಕಿಯೊಳಗಿದ್ದ ಮಹಾರಾಣಿಯೊಬ್ಬಳು ಸಾಕಿ ಸಲಹಿದಳಂತೆ!

ಇಷ್ಟೆಲ್ಲಾ ಅನಾಹುತಗಳಾಗುತ್ತಿರುವುದನ್ನು ಕೇಳಿದ ಮೇಲೂ ಜನ ಯಾಕೆ ಕುಂಭಮೇಳಕ್ಕೆ ಹೀಗೆ ನುಗ್ಗುತ್ತಾರೆ, ದೀಪಕ್ಕೆ ಮಾರುಹೋದ ಹುಳಗಳು ತಮ್ಮ ಪ್ರಾಣವನ್ನೀಡುವಂತೆ, ಎಂದು ಆಶ್ಚರ್ಯವಾಯಿತು. ಬಂದವರೆಲ್ಲಾ ಸಾಯ್ತಾರೆ ಅಂತಲೂ ಅಲ್ಲ, ಇಲ್ಲಿ ಸ್ನಾನ ಮಾಡಿದವರೆಲ್ಲಾ ಮೋಕ್ಷಗಳಿಸುತ್ತಾರೆ ಅಂತಲೂ ಅಲ್ಲ, ಆದರೂ ಜನ ಬರ್ತಾರೆ. "ಅಯ್ಯೋ ಹುಚ್ಚ, ನೀನು ಕುಂಭಮೇಳದ ಬಗ್ಗೆ ತಿಳಿದುಕೊಳ್ಳಬೇಕಾದರೆ ಬಾ, ನಾನೊಬ್ಬ ಸಾಧುಗಳ ಹತ್ತಿರ ಕರ್ಕೊಂಡು ಹೋಗ್ತೀನಿ. ಆದರೆ ನೀನೇ ಎಲ್ಲವನ್ನೂ ಅನುಭವಿಸಿಯೇ ತೀರಬೇಕೆಂಬ ಹಟ ಬೇಡ," ಅಂದಾಗ, ನನ್ನ ಸ್ನೇಹಿತನ ಮಾತಿಗೆ ಸದ್ಯಕ್ಕೆ ಒಪ್ಪಿದೆ. ಅವನು ಅಲ್ಲೇ ವಾಸವಾಗಿದ್ದ ಗ್ಯಾನೀಜೀ ಮಹಾರಾಜರ ಹತ್ತಿರ ಕರೆದುಕೊಂಡು ಹೋಗಿ ನನ್ನ ಪರಿಚಯ ಮಾಡಿಸಿದ. ಗ್ಯಾನೀಜೀ ಮಹಾರಾಜ್ ಸಾಧು ವೇಷದಲ್ಲಿ ಒಬ್ಬ ತೇಜಸ್ವೀ ಪುರುಷರು. ಸಣಕಲು ದೇಹ, ಬಿಳಿಯ ಗಡ್ಡದ ಜೊತೆಗೆ ತೀಕ್ಷ್ಣವಾದ ಕಣ್ಣುಗಳು ಎದ್ದು ಕಾಣುತ್ತಿದ್ದವು. ಅವರನ್ನು ನೋಡಿದ ತಕ್ಷಣ ನಾನು ಕೇಳಬೇಕೆಂದಿದ್ದ ಪ್ರಶ್ನೆಗಳೇ ಮನಸ್ಸಿನಿಂದ ಹಾರಿ ಹೋದುವು. ನಮಸ್ಕಾರ ಮಾಡಿ ಎದ್ದವನು, ತಬ್ಬಿಬ್ಬಾಗಿ ಕುಂಭಮೇಳ ಯಾವಾಗ ನಡೆಯುತ್ತದೆ ಎಂದು ಕೇಳಿಬಿಟ್ಟೆ. ಅವರಿಗೂ ನಗು ಬಂದಿರಬೇಕು, ಆದರೆ ತೋರಿಸಿಕೊಳ್ಳದೆ ಉತ್ತರ ಕೊಟ್ಟರು. ಆ ನಂತರ ಲೋಕಾರೂಢಿಯಾಗಿ ನಾಲ್ಕಾರು ಮಾತು ಆಡಿದರು.

ಅಷ್ಟೊತ್ತಿಗೆನನ್ನ ಮನಸ್ಸು ಸ್ಥಿಮಿತಕ್ಕೆ ಬಂದಿತ್ತು, ಮನಸ್ಸಿನೊಳಗೇ ನಾಲ್ಕಾರು ಪ್ರಶ್ನೆಗಳನ್ನು ತಯಾರು ಮಾಡಿಕೊಂಡಿದ್ದೆ. ಸರಿಯಾದ ಸಮಯ ನೋಡಿ, "ಮಹಾರಾಜ್ ನನಗೆ ಕುಂಭ ಮೇಳದ ವಿಚಾರ ಏನೂ ಗೊತ್ತಿಲ್ಲ. ಸ್ವಲ್ಪ ತಿಳಿದುಕೊಳ್ಳಬೇಕೆಂದು ಇಷ್ಟ. ದಯವಿಟ್ಟು ತಿಳಿಹೇಳಬೇಕು," ಎಂದು ಪ್ರಾರ್ಥಿಸಿದೆ. ಗ್ಯಾನೀಜೀ ಮಹಾರಾಜ್ ಸುಪ್ರಸನ್ನರಾದಂತೆ ನಕ್ಕು, ನನಗೆ ತಿಳಿಸಿದುದರ ಸಾರಾಂಶ ಹೀಗಿದೆ:

ಕುಂಭಮೇಳ ದೇಶದ ನಾಲ್ಕು ತೀರ್ಥ ಸ್ಥಳಗಳಲ್ಲಿ ನಡೆಯುತ್ತದೆ. ಸೂರ್ಯ ಮೇಷದಲ್ಲಿದ್ದಾಗ ಪ್ರಯಾಗದಲ್ಲೂ, ಸಿಂಹದಲ್ಲಿದ್ದಾಗ ನಾಸಿಕದಲ್ಲೂ, ವೃಶ್ಚಿಕದಲ್ಲಿದ್ದಾಗ ಉಜ್ಜಯಿನಿಯಲ್ಲೂ ಮತ್ತು ಕನ್ಯಾದಲ್ಲಿದ್ದಾಗ ಹರಿದ್ವಾರದಲ್ಲೂ ನಡೆಯುತ್ತದೆ. ಹೀಗೆ ಪ್ರತಿ ತೀರ್ಥದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ಕುಂಭಮೇಳ. ದೇವಾಸುರರು ಸಮುದ್ರ ಮಂಥನ ಮಾಡುತ್ತಿದ್ದಾಗ ಕಟ್ಟಕಡೆಯಲ್ಲಿ ಧನ್ವಂತರಿಯು ಅಮೃತ ತುಂಬಿದ ಚಿನ್ನದ ಕುಂಭ ಹಿಡಿದು ಮೇಲೆದ್ದ. ಅಮೃತಕ್ಕಾಗಿ ದೇವತೆಗಳು ಅಸುರರಲ್ಲಿ ಜಗಳವಾಗಿ, ಅಸುರರು ಕುಂಭವನ್ನು ಕಸಿದುಕೊಂಡರು. ಆಗ ಬೃಹಸ್ಪತಿ ಉಪಾಯದಿಂದ ಕುಂಭವನ್ನೆತ್ತಿಕೊಂಡು ಓಡಿದ. (ಇನ್ನೊಂದು ಕಥೆಯ ಪ್ರಕಾರ ಇಂದ್ರನ ಮಗ ಜಯಂತ ಕಾಗೆಯಾಗಿ ಕುಂಭವನ್ನೆತ್ತಿಕೊಂಡು ಹಾರಿದ). ಹೀಗೆ ಓಡುವಾಗ ನಾಲ್ಕು ಕಡೆ ಅವನು ವಿಶ್ರಾಂತಿಗಾಗಿ ಇಳಿದ (ಕುಂಭದಿಂದ ನಾಲ್ಕೂ ಕಡೆ ಅಮೃತ ಚಲ್ಲಿತು ಅಂತಾರೆ). ಆ ನಾಲ್ಕು ಜಾಗಗಳೇ ಪ್ರಯಾಗ, ಹರಿದ್ವಾರ, ನಾಸಿಕ ಮತ್ತು ಉಜ್ಜಯಿನಿ. ಹನ್ನೆರಡು ದಿನ ಓಡಿದ ನಂತರ ಮತ್ತೆ ದೇವಲೋಕ ಸೇರಿದರಂತೆ. ಆ ನೆನಪಿಗೆ ಹನ್ನೆರಡು ವರ್ಷಕ್ಕೊಮ್ಮೆ ಕುಂಭ ಮೇಳ ನಡೆಯುತ್ತವೆ. ಕುಂಭ ಮೇಳದಲ್ಲಿ ಮಾಘಸ್ನಾನ. ಅಂದರೆ ನಾಲ್ಕು ದಿನಗಳ ತ್ರಿವೇಣೀ ಸ್ನಾನ ಬಲು ಪುಣ್ಯದಾಯಕ. ಮಕರಸಂಕ್ರಾಂತಿ, ರಥಸಪ್ತಮಿ, ಪೂರ್ಣಿಮ ಮತ್ತು ಮೌನೀ ಅಮಾವಾಸ್ಯೆ ಈ ನಾಲ್ಕು ದಿನಗಳು ಶ್ರೇಷ್ಠ. ಅಂದಿನ ಸ್ನಾನಕ್ಕೋಸ್ಕರ ದೇಶದ ಮೂಲೆ ಮೂಲೆಯಲ್ಲಿರುವ ಸಾಧು ಸಂನ್ಯಾಸಿಗಳೆಲ್ಲಾ ಇಲ್ಲಿಗೆ ಬರುತ್ತಾರೆ. ಊರ್ಧ್ವವಾಹುಗಳು, ನಾಗ, ಪರಿವ್ರಾಜಕರು, ಮೌನಿಗಳು, ಶಿರಶಾಸನ ಮಾಡುವ ಸಾಧುಗಳು, ಅವಧೂತರು, ಮಂಡಲೇಶ್ವರರು... ಹೀಗೆ ನಾನಾ ಪ್ರಕಾರದ ಸಾಧು ಸಂನ್ಯಾಸಿಗಳು ಬರುತ್ತಾರೆ. ಹಾಗೆ ನೋಡಿದರೆ ಪ್ರಯಾಗವೇ ಪುಣ್ಯಕ್ಷೇತ್ರ. ಇದಕ್ಕೆ ಪ್ರಯಾಗ ರಾಜ, ಪ್ರಜಾಪತಿ ಕ್ಷೇತ್ರ ಅಂತಲೂ ಹೆಸರು, ಪ್ರಜಾಪತಿ ಬ್ರಹ್ಮ ಇಲ್ಲಿ ಮಹಾ ಯಾಗ ಮಾಡಿದ್ದರಿಂದ ಇದು ಪ್ರಯಾಗ. ಬ್ರಹ್ಮನ ಐದು ಬಲಿವಧೆಯ ಪೀಠಗಳಲ್ಲಿ ಪ್ರಯಾಗ ಮಧ್ಯವೇದಿ, ಇತರ ಪೀಠಗಳು ಕುರುಕ್ಷೇತ್ರ, ಗಯಾಶಿರಸ್, ವಿರಾಜ, ಮತ್ತು ಪುಷ್ಕರ. ವಿಷ್ಣು ಪ್ರಯಾಗದಲ್ಲಿ ಯೋಗಮೂರ್ತಿಯಾಗಿ ಕೂತಿದ್ದಾನೆ, ಪ್ರಲಯಕಾಲದಲ್ಲಿ ಇಲ್ಲಿಯೇ ವಿಷ್ಣು ವಟ ವೃಕ್ಷದ ಎಲೆಯ ಮೇಲೆ ಮಗುವಿನ ರೂಪದಲ್ಲಿರುತ್ತಾನೆ... ಇತ್ಯಾದಿ ಇತ್ಯಾದಿ.

ಆಧುನಿಕರಿಗೆ ಪುರಾಣದ ಮಾತು ಹಿಡಿಸುವುದು ಕಷ್ಟ. ಪುರಾಣಕ್ಕೆ ಆಧುನಿಕ ಮೆರಗು ತಿರುವು ಕೊಟ್ಟು ಆಧುನಿಕರಿಗೆ ಅರ್ಥವಾಗುವಂತೆ ಹೇಳಿದರೆ ನಮಗೆ ವಿಷಯ ಹಿಡಿಸಬಹುದು. ಮೇಲೆ ಗ್ಯಾನೀಜೀ ಮಹಾರಾಜ್ ಹೇಳಿದ್ದೆಲ್ಲವನ್ನು ಗೌರವದಿಂದ ಕೇಳಿದರೂ ಇನ್ನೂ ಏನೋ ಕೊರತೆಯೆಂದೆನಿಸಿತ್ತು. ಈ ಕೊರತೆ ಕೊಂಚಮಟ್ಟಿಗೆ ನೀಗಿದ್ದು ಹರಿದ್ವಾರದಲ್ಲಿ, ಅಲ್ಲಿಯ ಒಬ್ಬ ಯೋಗಿಯನ್ನು ಭೆಟ್ಟಿಯಾದಾಗ. ಅವರ ಪ್ರಕಾರ ನಮ್ಮ ದೇಶದಲ್ಲಿ ಸಾಮಾನ್ಯ ಜನರಿಗೆ ಮಾರ್ಗದರ್ಶನ ಮಾಡುತ್ತಿದ್ದವರು ಸಾಧು, ಸಂನ್ಯಾಸಿಗಳು, ಋಷಿಗಳು. ಹೀಗೆ ಮಾರ್ಗದರ್ಶನ ಮಾಡಬೇಕಾದವರು ಆಗಾಗ್ಗೆ ಭೇಟಿಯಾಗಿ, ಧರ್ಮ ಸಮ್ಮೇಳನ ನಡೆಸಿ, ವಿಚಾರವಿನಿಮಯ ಮಾಡಿಕೊಂಡು ವಿವಿಧ ಮಾರ್ಗಗಳಲ್ಲಿ ಸೂಕ್ತವಾದುದನ್ನು ನಿಷ್ಕರ್ಷಿಸಿಕೊಳ್ಳಬೇಕು. ಇದಕ್ಕೆ ಕುಂಭ ಮೇಳ ಅತ್ಯುತ್ತಮ ಅವಕಾಶ. ಇಲ್ಲಿ ಹೊಸ ಆಧ್ಯಾತ್ಮಿಕ ಭೀರುಗಳು ಹಳಬರನ್ನು ನೋಡಿ ಅವರೊಡನೆ ಬೆರೆತು, ಚರ್ಚಿಸಿ ತಮ್ಮ ಮನಸ್ಸನ್ನು ಪರಿಪಕ್ವತೆಯಡೆ ಎಳೆದುಕೊಂಡು ಹೋಗಬಹುದು- ಅವರೂ ಪೂರ್ಣ ಕುಂಭ

ಗಳಾಗಬಹುದು.

ಇವರೆಲ್ಲರ ಮಾತು ಕೇಳಿದ ಮೇಲೆ ಚರಿತ್ರೆಗೆ ತಿರುಗಿದೆ. ಅದರ ಪ್ರಕಾರ ಹರ್ಷ ಐದು ವರ್ಷ ಕ್ಕೊಮ್ಮೆ ಪ್ರಯಾಗದಲ್ಲಿ ತನ್ನೆಲ್ಲಾ ಐಶ್ವರ್ಯ ವನ್ನೂ ದಾನ ಮಾಡಿಬಿಡುತ್ತಿದ್ದನಂತೆ. ದಾನ ಮಾಡುತ್ತಿದ್ದೇನೆಂದಾಗ ಮೇಳ ಸೇರುವುದಿಲ್ಲವೆ? ಇಂತಹ ಒಂದು ಮೇಳ ಕ್ರಿಸ್ತ ಶಕ ೬೪೪ರಲ್ಲಿ ಸೇರಿತ್ತಂತೆ– ಇದನ್ನೇ ಮೊದಲ ಕುಂಭಮೇಳ ಅನ್ನಬಹುದು. ಒಂಬತ್ತನೆಯ ಶತಮಾನದಲ್ಲಿ ಶ್ರೀ ಶಂಕರಾಚಾರ್ಯರು ಕುಂಭ ಮೇಳಕ್ಕೊಂದು ಅಧ್ಯಾತ್ಮಿಕ ರೂಪು, ಮೆರುಗು ಕೊಟ್ಟರೆನ್ನ ಬಹುದು. ಆಗ ನಾಲ್ಕು ಧಾಮದ ಗುರುಗಳೂ ಕಾಲಕಾಲಕ್ಕೆ ಕುಂಭಮೇಳದಲ್ಲಿ ಸೇರಬೇಕು, ತ್ರಿವೇಣಿಯಲ್ಲಿ ಸ್ನಾನ ಮಾಡಿ, ಅಲ್ಲಿ ಬರುವ ಇತರ ಸಾಧು ಸಂನ್ಯಾಸಿಗಳೊಡನೆ ಹೊಸ ವಿಚಾರ ವಿನಿಮಯ, ಚರ್ಚೆ ಮಾಡಬೇಕು, ಇತ್ಯಾದಿ ಉದ್ದೇಶಗಳನ್ನು ರೂಪಿಸಿಕೊಟ್ಟರು. ದಿಲೀಪ್ ಕುಮಾರ್ ರಾಯ್ ಹೇಳುವಂತೆ ಕುಂಭಮೇಳವು, "Common platform of spiritual fellowship and catholic understanding."

"ಎಲ್ಲಾ ಪಾಪಿಗಳೂ ನನ್ನಲ್ಲಿ ಮಿಂದು ತಮ್ಮ ಪಾಪ ರಾಶಿಯನ್ನೆಲ್ಲಾ ತೊಳೆದುಕೊಂಡು ಬಿಟ್ಟರೆ ನನ್ನ ಪರಿಶುದ್ಧತೆಯೇನಾದೀತು?" ಎಂದು ಗಂಗೆಗೆ ಯೋಚನೆಯಾಯಿತಂತೆ. ಆಗ ಶಿವ ಅವಳಿಗೆ, "ನೀ ಯೋಚನೆ ಮಾಡಬೇಡ. ಸಾವಿರಾರು ಸಾಧುಗಳು ನಿನ್ನಲ್ಲಿ ಸ್ನಾನ ಮಾಡಿ ನಿನ್ನನ್ನು ಪರಿಶುದ್ಧಳನ್ನಾಗಿ ಮಾಡುತ್ತಾರೆ," ಎಂದು ಹೇಳಿ ಧೈರ್ಯ ಕೊಟ್ಟನಂತೆ. ಇದನ್ನು ಕೇಳಿದ ಮೇಲೆ ನನಗೆ ಇನ್ನೂ ಒಂದು ಅನುಮಾನ ಬಂತು. ಇಲ್ಲಿಗೆ ಬಂದು ಸಂಗಮದಲ್ಲಿ ಸ್ನಾನ ಮಾಡಿ ದವರಿಗೆಲ್ಲ ಮೋಕ್ಷ ಸಿಕ್ಕು ಬಿಟ್ಟರೆ ಜಗತ್ತಿನ ಗತಿ ಯೇನೆಂದು ಅನಿಸಿತು. ಇದೇ ಅನುಮಾನ ಪಾರ್ವತಿಗೂ ಬಂದಿತ್ತಂತೆ. ಇಷ್ಟು ಸುಲಭವಾಗಿ ಪಾಪ ಕಳೆದರೆ, ಎಲ್ಲಾ ಪುಂಡರೂ ಸ್ವರ್ಗ ಸೇರಿ ಬಿಡುತ್ತಾರೆಯೇ? ಎಂದು ಅವಳಿಗೆ ಹೆದರಿಕೆಯೇ ಆಯಿತಂತೆ. ಆಗ ಶಿವನು – ಪರೀಕ್ಷೆ ಮಾಡೋ ಣೆಂದು ಪಾರ್ವತಿಯನ್ನು ಕರೆದುಕೊಂಡು ಕುಂಭ ಮೇಳಕ್ಕೆ ಬಂದನಂತೆ. ಸಾಯುತ್ತಿರುವ ಬ್ರಾಹ್ಮ- ಣನ ಹಾಗೆ ಗಂಗಾ ದಡದಲ್ಲಿ ಬಿದ್ದುಕೊಂಡ ಶಿವನ ಪಕ್ಕದಲ್ಲಿ ಪಾರ್ವತಿ ಅಳುತ್ತಾ ಕೂತಳು. "ಯಾರಾದರೂ ನಿಷ್ಪಾಪಿ ನನ್ನ ಗಂಡನನ್ನು ಮುಟ್ಟಿದರೆ ಅವನು ಬದುಕಿಕೊಳ್ಳುತ್ತಾನೆ. ಹಾಗ ಲ್ಲದೆ ಯಾರಾದರೂ ಪಾಪಿ ಮುಟ್ಟಿದರೆ ಅವನು ತಕ್ಷಣ ಪ್ರಾಣ ಬಿಡುತ್ತಾನೆ. ದಯವಿಟ್ಟು ಯಾರಾದರೂ ನನ್ನ ಗಂಡನನ್ನು ಬದುಕಿಸಿ," ಎಂದು ಅಳತೊಡಗಿದಳು. ಮೇಳಕ್ಕೆ ಬಂದು ಹೋಗುತ್ತಿದ್ದ ಲಕ್ಷಾಂತರ ಜನರಲ್ಲಿ ಒಬ್ಬರೂ ಇವರ ಸಹಾಯಕ್ಕೆ ಬರಲಿಲ್ಲ. ಕೊನೆಗೊಬ್ಬ ಕುಡುಕ ನಿಂತು ಸಮಾಚಾರ ತಿಳಿದುಕೊಂಡ. "ಅರೆ, ಅದೇನು ಮಹಾ ಕಷ್ಟ. ನಾನೇನೋ ಕುಡುಕ, ನಿಜ. ಮಹಾಪಾಪಿ, ನಿಜ. ಆದರೆ ಇಗೋ, ಈಗಲೇ ಹೋಗಿ ಗಂಗಾಮಾಯಿಯಲ್ಲಿ ಸ್ನಾನ ಮಾಡಿ ನನ್ನ ಪಾಪವನ್ನೆಲ್ಲಾ ತೊಳೆದು ಕೊಂಡು ಬರ್ತೀನಿ. ಈ ಬ್ರಾಹ್ಮಣನನ್ನು ಬದುಕಿಸುತ್ತೀನಿ," ಎಂದು ಓಲಾಡಿಕೊಂಡು ಗಂಗೆಗೆ ಹೊರಟನಂತೆ! ಹೀಗೆ ಗಂಗೆ ನಿಜ ವಾಗಲೂ ಪಾಪಶಮನಿ, ಮನದ ಕಲ್ಮಶ, ಮನ ಸ್ಸಿನ ಕೆಟ್ಟ ಆಸೆ, ಯೋಚನೆಗಳನ್ನು ದೂರ ಮಾಡಿ ಮನಸ್ಸನ್ನು ನಿರ್ಮಲವಾಗಿ ಮಾಡು ತ್ತಾಳೆ ಎಂಬ ದೃಢಸಂಬಿಕೆ ಇರಬೇಕು–ಆದರೆ ಇದರ ಲಾಭ ಪಡೆಯುವವರು ಕುಂಭ ಮೇಳಕ್ಕೆ ಹೋಗುವ ಲಕ್ಷಾಂತರ ಜನಗಳಲ್ಲಿ ಎಲ್ಲೋ ಒಬ್ಬರೋ, ಇಬ್ಬರೋ!! ✡



ಎಚ್. ಪಾಂಡುರಂಗ ವಿಠ್ಠಲ

# ನೀತಿ ಬೇಕೆ? ಏಕೆ?

"Man does not live by laws and justice, but by grace" H.D. Thoreau.

ಎಲ್ಲರೂ ಮಾಡುವಂತೆ ನಾವೂ ಏಕೆ ಲಂಚಕ್ಕೆ ಕೈ ಒಡ್ಡಿ, ಕಪ್ಪು ಹಣ ಒಟ್ಟು ಮಾಡಬಾರದು? ತೆರಿಗೆ ತಪ್ಪಿಸಬಾರದು? ಓದದೆ ಪರೀಕ್ಷಕರನ್ನು ಓಲೈಸಿ ಪಾಸಾಗಬಾರದು? ನನಗೆ ಲಾಭವಾಗುವಾಗ ದುರ್ಮಿಶ್ರಣ, ಸುಳ್ಳು, ಮೋಸ, ವಂಚನೆ, ಪಕ್ಷಾಂತರ ಇತ್ಯಾದಿಗಳಲ್ಲಿ ತೊಡಗಬಾರದು?

ರೂಢಿ ಮೂಲವಾದ ಹೆಚ್ಚಿನ ನೈತಿಕ ನಿಯಮಗಳನ್ನು ಜನರು ಪಾಲಿಸುವುದು ಸಾಮಾಜಿಕ ಒತ್ತಡ ಮತ್ತು ಕಾನೂನುಗಳಿಂದಾಗಿ. ನೋಡುವವರಿಲ್ಲ, ಪೋಲೀಸರಿಲ್ಲ ಎಂದಾಗ ಸ್ವಲ್ಪವೂ ಯೋಚಿಸದೆ ಜನ ದೊಂಬಿ ಅಪ್ರಾಮಾಣಿಕತೆ ಅನೀತಿಗಳಿಗೆ ಧುಮುಕುತ್ತಾರೆ. ಕೆಲ ವರ್ಷಗಳ ಹಿಂದೆ ನ್ಯೂಯಾರ್ಕಿನಲ್ಲಿ ವಿದ್ಯುತ್ತು ನಿಂತಾಗ ಜನ ಮೃಗಗಳಾದರು; ಮೆಕ್ಸಿಕೋದಲ್ಲಿ ಪೋಲೀಸರು ಮುಷ್ಕರ ಹೂಡಿದಾಗ ಸಂಭಾವಿತರೆನಿಸಿದವರೂ ಅಂಗಡಿಗಳಿಗೆ ನುಗ್ಗಿ ಕೈಗೆ ಸಿಕ್ಕಿದ್ದನ್ನು ಹೊತ್ತರು!

ಕೆಟ್ಟದ್ದಕ್ಕೆ ಕೈಹಾಕದಿರುವುದಷ್ಟೇ ನೀತಿಯಲ್ಲ; ಒಳ್ಳೆಯದನ್ನು ಮಾಡುವುದು ಕೂಡ ನೀತಿ. ತಮ್ಮಲ್ಲಿಯ ಪ್ರೀತಿ, ದಯೆ, ತ್ಯಾಗ-ಒಳ್ಳೆಯತನಗಳನ್ನು ಅಭಿವ್ಯಕ್ತಿಸುವ ಇರಾದೆ ಎಲ್ಲರಲ್ಲೂ ಇದೆ. ಆದರೂ ಒಳ್ಳೆಯವರಿಗೆ ಕಷ್ಟ, ಕೆಟ್ಟವರಿಗೆ ಸುಖ ಇರುವುದು ಸಾಮಾನ್ಯ. ಒಳ್ಳೆಯದು ಮಾಡಿದರೂ ದುಃಖ, ಕೃತಘ್ನತೆಗಳೇ ಫಲವಾಗುವುದೂ ಉಂಟು. ಯಾಕೆ ಒಳ್ಳೆಯದನ್ನು ಮಾಡಬೇಕು?

ಇದಲ್ಲದೆ ಸೂಕ್ಷ್ಮ ಪ್ರಶ್ನೆಗಳೂ ಎಲ್ಲರ ಮನಸ್ಸನ್ನು ಕಾಡುತ್ತಿರುತ್ತವೆ. ಅರ್ಧಕ್ಕಿಂತ ಹೆಚ್ಚು ಮಾನವ ಸಮಸ್ಯೆಗಳು ನೀತಿಯನ್ನೇ ಕುರಿತಿದ್ದರೂ, ನೀತಿ ಶಾಸ್ತ್ರ ತುಂಬ ಅಲಕ್ಷಿತ ಕ್ಷೇತ್ರ. ನೀತಿಯೆ ಮಾನವನನ್ನು ಮೃಗಗಳಿಂದ ಬೇರ್ಪಡಿಸಿದೆ—ಅದಿಲ್ಲದೆ ಅವನ ಅಸ್ತಿತ್ವವಿಲ್ಲ.

ಪಾದ್ರಿಗಳು, ಸಮಾಜ ವಿಜ್ಞಾನಿಗಳಿಗೆ ಸಂಬಂಧಿಸಿದ್ದು ಈ ನೀತಿ ಎಂದು ಪಶ್ಚಿಮದಲ್ಲಿ ನಂಬಿದ್ದರೆ, ಭಾರತದಲ್ಲಿ ಆಧ್ಯಾತ್ಮಿಕ ಅನುಭವಗಳಿಗೇ ಪ್ರಾಧಾನ್ಯ, ನೀತಿಗಲ್ಲ. ನಮ್ಮ ಹುಡುಗರು ಪುರಾಣಕತೆ, ಮನೆ ಸಂಪ್ರದಾಯ, ಪಾಶ್ಚಾತ್ಯ ಲೇಖಕರು. ಸಾಮಾಜಿಕ ನಿಯಮ—ಇವುಗಳಿಂದ ನೀತಿಯ ವಿಚಾರಗಳನ್ನು ಆಯ್ದುಕೊಳ್ಳುತ್ತಾರೆ. ಜನರ ನೈತಿಕ ದೃಷ್ಟಿಯ ಮೇಲೆ ಸಮೂಹ ಮಾಧ್ಯಮಗಳ ಪ್ರಭಾವವೂ ಅಪರಿಮಿತ. ನೀತಿ ಶಾಸ್ತ್ರದ ತತ್ವಗಳ ಅಭ್ಯಾಸ

(ಆಧಾರ : ಸ್ವಾಮಿ ಭಜನಾನಂದ)

# Sin, ಪಾಪ ಮತ್ತು ಅಸ್ತಿತ್ವವಾದಿ ಸ್ವಾತಂತ್ರ್ಯ

* ಪಾಶ್ಚಾತ್ಯರ Sin ಪಾಪ ಅಥವಾ ಅಧರ್ಮ ಅಲ್ಲ (ಅದಕ್ಕೆ ಸರಿದೂಗುವ ಪದ ನಮ್ಮಲ್ಲಿಲ್ಲ). ದೇವರ ಬಗೆಗಿನ ಅವಿಧೇಯತೆ Sin. ದೇವರ ಜತೆಗಿನ ಒಪ್ಪಂದವನ್ನು ಅವನ ಆಜ್ಞೆಗಳನ್ನು ಪರಿಪಾಲಿಸದೆ ಇರುವುದು. ನಮ್ಮಲ್ಲಿನ ಪಾಪವು ಆತ್ಮಾಪರಾಧ. ತಪ್ಪು ಮಾಡಿದಾಗ ಭಾರತೀಯರು ವಿಧಿಯನ್ನೋ ತಮ್ಮನ್ನೋ ಬೈದುಕೊಳ್ಳುವರು–ದೇವರಿಗೆ ಅವಿಧೇಯರಾಗಿದ್ದೇವೆ ಎಂದುಕೊಳ್ಳುವುದಿಲ್ಲ. ಈ ಧರ್ಮಗಳಲ್ಲಿ ನೈತಿಕತೆ ದೇವರಿಂದ ವಿಧಿಸಲ್ಪಡದೆ ಕರ್ಮ ಎಂಬ ವಿಶ್ವನಿಯಮದ ಅಂಗವಾಗಿ, ಆತ್ಮದ ಗುಣವಾಗಿ ಇರುವುದು. ಸುಕರ್ಮದಿಂದ ಪುಣ್ಯ, ಕುಕರ್ಮದಿಂದ ದುಃಖರೂಪವಾದ ಪಾಪ. ಬುದ್ಧಿ ಸರಿಯಿರುವವನು ದುಃಖ ಸಂಪಾದನೆಗೆ ಹೊರಡುವುದಿಲ್ಲ–ಪಾಪ ಅಜ್ಞಾನದ ರೂಪ. ಸ್ವಾಮಿ ವಿವೇಕಾನಂದರು ಹೇಳುವಂತೆ ನಮ್ಮಲ್ಲಿ ಕೆಡುಕಿನ ತತ್ವ ಇಲ್ಲ, ಅದನ್ನು ನಾವು ಅಜ್ಞಾನವೆನ್ನುತ್ತೇವೆ.

* ಕೆಟ್ಟದ್ದನ್ನೇ ಯಾಕೆ ಜನ ಆಯ್ದುಕೊಳ್ಳುವರು? ಕ್ರೈಸ್ತ ಧರ್ಮಶಾಸ್ತ್ರದ ಅಡಿಗಲ್ಲಾಗಿ ಮೂಲಪಾಪ (Original sin) ಕಲ್ಪನೆಯನ್ನು ಮುಂದಿಟ್ಟವನು ಸಂತ ಪಾಲ್. ದೇವರಿಗೆ ಅವಿಧೇಯತೆ ತೋರಿದ ಆದಂನನ್ನು ಸ್ವರ್ಗದಿಂದ ಹೊರಗಟ್ಟಲಾಯಿತು. ಇದೇ ಮೂಲಪಾಪ. ಪ್ರತಿ ಮಾನವನೂ ಇದನ್ನು ಹುಟ್ಟಿನಿಂದಲೇ ಪಡೆದದ್ದರಿಂದ, ಅವನ ಆತ್ಮವನ್ನೇ ಇದು ಕಳಂಕಗೊಳಿಸಿದೆ. ಹಾಗೆಯೇ ಬಿಟ್ಟರೆ ಆತ ಕೇಡನ್ನಷ್ಟೇ ಮಾಡಲು ಸಾಧ್ಯ. (ಭಾರತೀಯರು ಕೆಟ್ಟ ಗುಣವನ್ನು ಕರ್ಮಬೀಜವಾದ ಸಂಸ್ಕಾರವೆಂಬ ಸಹಜ ಮಾನಸಿಕ ಒತ್ತಡವನ್ನಾಗಿ ವಿವರಿಸುತ್ತಾರೆ. ಇದು ಮನಸ್ಸಿನ ಕಳಂಕ ಮಾತ್ರ– ಆತ್ಮ ನಿತ್ಯಶುದ್ಧ. ವೇದಾಂತದ ಪ್ರಕಾರ ಸಂಸ್ಕಾರಗಳು ಮತ್ತು ಮನಸ್ಸು ಅಜ್ಞಾನ. ಅವಿದ್ಯೆಯ ಫಲ. ಹೀಗೆ ಎಲ್ಲ ಕೆಡುಕಿಗೆ ಮೂಲಕಾರಣ ಮೂಲಾವಿದ್ಯೆ. ಪುರಾಣ ಕಲ್ಪನೆಗಳನ್ನೆಲ್ಲ ತೊರೆದರೆ ಕ್ರೈಸ್ತ ತತ್ವವೂ ಹೀಗೆಯೇ ಹೇಳುವಂತೆ ತೋರಿದರೂ ತೊರೆಯಲು ಅವರು ಒಪ್ಪುವುದಿಲ್ಲ. ೫ನೇ ಶತಮಾನದ ಪೆಲಾಗಿಯಸ್, ಈಚೆಗೆ ವಿಕಾಸವಾದವನ್ನು ಕ್ರೈಸ್ತ ತತ್ವದಲ್ಲಿ ಸೇರಿಸಲು ಪ್ರಯತ್ನಿಸಿದ ಟೇರ್ ಹಾರ್ಡ್ ಡಿ ಚಾರ್ಡಿನ್ ಮೊದಲಾದವರ ಪ್ರಯತ್ನವನ್ನು ಖಂಡಿಸಲಾಯಿತು. ಇದಕ್ಕೆ ಕಾರಣ ಕ್ರೈಸ್ತರ ಆತ್ಮವಿಮುಕ್ತಿಯ ಕಲ್ಪನೆಯೇ.)

* ಮೂಲ ಪಾಪದಿಂದ ಉಂಟಾದ ದೈವ ಕ್ರೋಧವು ಅದಕ್ಕಾಗಿಯೇ ಶಿಲುಬೆ ಏರಿದ ಕ್ರಿಸ್ತನ ರಕ್ತದಿಂದ ಮಾತ್ರ ತಣಿಯಿತು. ತನ್ನ ಹೃದಯದಲ್ಲಿ ಕ್ರಿಸ್ತನನ್ನು ಒಪ್ಪಿದವನನ್ನು ಮಾತ್ರ ಈಗ ದೇವರು ಮೂಲಪಾಪದಿಂದ ರಕ್ಷಿಸುವನು. ಬಾಪ್ಟಿಸಂನಿಂದ ಮೂಲ ಪಾಪದ ಕಳಂಕ ತಪ್ಪಿ, ಆತ್ಮ ಪವಿತ್ರವಾಗಿ, ಪವಿತ್ರ ಭೂತವನ್ನು ಒಳಗೊಳ್ಳುತ್ತದೆ. ಮಾಸ್‌ನಿಂದ ಅದು ಕ್ರಿಸ್ತನನ್ನು ಪಡೆಯುತ್ತದೆ. ಅದೂ ಅಲ್ಲದೆ ಚರ್ಚ್ ಕ್ರಿಸ್ತನ ದೈವಿಕ ದೇಹವಾದ್ದರಿಂದ, ಅದರ ಸದಸ್ಯ ಸಹಜವಾಗಿಯೆ ಕ್ರಿಸ್ತನ ಪೂಜ್ಯತೆಯನ್ನು ಹೊಂದಿ, ಆತ್ಮ ವಿಮುಕ್ತಿಗೆ ಅರ್ಹನಾಗುತ್ತಾನೆ. (ಆಶ್ಚರ್ಯವೆಂದರೆ ಇಸ್ಲಾಂ ಮೂಲ ಪಾಪವನ್ನೇ ಒಪ್ಪುವದಿಲ್ಲ. ಇಲ್ಲಿ ದೇವರು ಆದಂನನ್ನು ಕ್ಷಮಿಸಿದ್ದಾನೆ; ಆದನ್ನು ಒಪ್ಪದೆ ದೇವರ ಆಜ್ಞೆಯನ್ನೂ ಮೀರಿ ಅಗೌರವ ತೋರಿದ ಇಬ್ಲಿಸ್ [ಸೈತಾನ] ಕೆಳಗೆ ಬಿದ್ದ ಸೃಷ್ಟಿಯಲ್ಲೆ ಉತ್ತಮ ಜೀವಿ ಮಾನವ. ಯಾರೂ ಯಾವಾಗ ಬೇಕಾದರೂ ಪಶ್ಚಾತ್ತಾಪಪಟ್ಟರೆ ದೇವರ ಕ್ಷಮೆ ಸಿಕ್ಕುವುದು).

* ವಿಶ್ವಮಾನ್ಯವಾದ ಸಾಮಾನ್ಯ ನೈತಿಕ ಆದರ್ಶವು ಪ್ರವೃತ್ತಿ ಮಾರ್ಗದ ಅಭ್ಯುದಯ ಹಾಗೂ ನಿವೃತ್ತಿ ಮಾರ್ಗದ ನಿಃಶ್ರೇಯಸ್ ಎರಡನ್ನೂ ಒಳಗೊಳ್ಳಬೇಕು. ಅಭ್ಯುದಯ ಸಕಲರ ಅಭ್ಯುದಯವಾಗಬೇಕು.

* ಎಲ್ಲ ಜೀವನದ ಏಕೈಕ ಹೋರಾಟದ ಗುರಿ ಸ್ವಾತಂತ್ರ್ಯ. "ಮುಕ್ತಿ" ದೂರದ ಗುರಿ ಯಾದರೂ ಮಾನವನ ಅಸ್ತಿತ್ವದ ಪ್ರತಿಕ್ರಿಯೆಯಲ್ಲೂ ಆತ್ಮದ ಈ ಹೋರಾಟ ಅಭಿವ್ಯಕ್ತಿ ಪಡೆ ಯುತ್ತಿದೆ. ಸಂತನ ಪ್ರಾರ್ಥನೆಯಂತೆಯೇ ಕಳ್ಳನ ದರೋಡೆಗೂ ಈ ಹೋರಾಟವೇ ಕಾರಣ—ತುಳಿದ ಹಾದಿ ಮಾತ್ರ ತಪ್ಪು, ಅಷ್ಟೇ. ಹಾದಿಯಿಂದಾಗಿ ಅದನ್ನು ನಾವು ಒಳಿತು ಕೆಡಕು ಎಂದು ವರ್ಣಿಸಿದರೂ, ಸ್ವಾತಂತ್ರ್ಯದ ಅಭೀಪ್ಸೆಯೇ ಎಲ್ಲ ಕ್ರಿಯೆಯ ಮೂಲ, ಪ್ರವೃತ್ತಿ-ನಿವೃತ್ತಿಗಳ ಗುರಿ ಅದೇ. ಯಾಕೆ ಮನುಷ್ಯ ಸಂಪತ್ತು, ಅಧಿಕಾರಗಳಿಗಾಗಿ ಪ್ರಯತ್ನಿಸುತ್ತಾನೆ? ಬಡತನ, ಅಸಹಾಯಕತೆಗಳಿಂದ ಸ್ವತಂತ್ರನಾಗಲು, ಇಂದ್ರಿಯ ಸುಖಕ್ಕೆ ಪ್ರಯತ್ನ ಏಕೆ ದುಃಖ ಅತೃಪ್ತಿಗಳಿಂದ ಬಿಡುಗಡೆ ಹೊಂದಲು, ನೀತಿವಂತನಾಗಲು ಪ್ರಯತ್ನ ಏಕೆ? ಇತರ ಕೆಳ ಮಟ್ಟದ ಸ್ವಾತಂತ್ರ್ಯಗಳಿಗಾಗಿ ಮಾಡುವ ಕೊನೆಯಿರದ ಹೋರಾಟದಿಂದಲೂ ಸ್ವತಂತ್ರನಾಗಲು.

ಪ್ರಪಂಚದ ಎಲ್ಲರೂ ಒಪ್ಪುವಂತಹ ಸಾಮಾನ್ಯ ನೈತಿಕ ಆದರ್ಶಕ್ಕೆ ಸ್ವಾತಂತ್ರ್ಯವೇ ಆಧಾರ ವಾಗಿರಬೇಕು. ಈಗಿರುವ ನೀತಿ ಸಂಹಿತೆಗಳೆಲ್ಲ ಮಾನವನನ್ನು ಬದ್ಧನನ್ನಾಗಿಸಿವೆ, ನೀತಿವಂತ ನಾಗಲು ಅವನು ಸ್ವತಂತ್ರನಲ್ಲ. ಈಗ ಇರುವಂತೆ ನೀತಿಯು ಮಾನವ ಏನಾಗಿ ಇರುವನೋ ಅದನ್ನು ಬಿಟ್ಟು, ಏನು ಆಗಿರಬೇಕೋ ಅದನ್ನು ಕುರಿತಾಗಿದೆ—ಅವನನ್ನು ಇನ್ನು ಯಾರೋ ಆಗಲು ನೂಕುತ್ತಿದೆ.

ನೀತಿಗೆ ಸ್ವಾತಂತ್ರ್ಯವನ್ನು ಆಧಾರವಾಗಿಸಲು ಎರಡು ರೀತಿಯ ಪ್ರಯತ್ನಗಳಾಗಿವೆ.

i) ಡಾರ್ವಿನ್ನನ ಉಳಿವಿಗಾಗಿ ಹೋರಾಟ ಮತ್ತು ಹೊಂದಿಕೊಳ್ಳುವಿಕೆಯನ್ನು ಆಧರಿಸಿದ ಜಾನ್ಸಿ ಡಿ. ಲೀಕ್‌ನ ವಿವರಣೆ. (ಮಾನವ ತನ್ನ ಪರಿಸರಕ್ಕೆ ಹೊಂದಿಕೊಂಡು ಉಳಿವನ್ನು ಖಚಿತಗೊಳಿಸಿಕೊಳ್ಳಲು ಅನಿವಾರ್ಯವಾಗಿ ನೀತಿಯಿಂದ ಇದ್ದಾನೆ, ಹೀಗಾಗಿ ನೀತಿಯು ನಿಯಮ ವಿಜ್ಞಾನವಲ್ಲ, ಪ್ರಕೃತಿ ವಿಜ್ಞಾನವೇ. ಇಲ್ಲಿಯ ಮಾನವ 'ಆತ್ಮ'ವಿಲ್ಲದ ಪ್ರಾಣಿ ಮಾತ್ರ)

ii) ಮುಮುಕ್ಷುಗಳನ್ನು ನಿತ್ಯ ಕರ್ಮ ನೀತಿ ನಿಯಮಗಳ ಗೋಜಿನಿಂದ ತಪ್ಪಿಸಿದ ಶಂಕರರ ವಿವರಣೆ. (ಎಲ್ಲ ಸಾಮಾಜಿಕ ನಿಯಮಗಳೂ "ವ್ಯಾವಹಾರಿಕ" ಎಂಬ ಸಾಪೇಕ್ಷ ಸತ್ಯದ ಕ್ಷೇತ್ರ. ಇಲ್ಲಿ ಆತ್ಮ-ಪ್ರಪಂಚಗಳ ನಡುವೆ ಜ್ಞಾತೃ ಜ್ಞೇಯ-subject object ಸಂಬಂಧ ಇರುತ್ತದೆ. ಆತ್ಯಂತಿಕ ದೃಷ್ಟಿಯಿಂದ ವ್ಯಾವಹಾರಿಕ ಸತ್ಯವು ಬರೀ ಮಾಯೆ. ಇದಕ್ಕಿಂತ ಉನ್ನತ ಮಟ್ಟದ "ಪಾರಮಾರ್ಥಿಕ" ಸತ್ಯದ ಕ್ಷೇತ್ರ ಅಧ್ಯಾತ್ಮ ಅಸ್ತಿತ್ವದ ಉನ್ನತ ಸ್ಥಿತಿ ತಲುಪಿದ ಮೇಲೆ ಇನ್ನೇನೋ ಆಗಬೇಕಾದ್ದು ಉಳಿದಿರುವುದಿಲ್ಲ.)

ವಿವೇಕಾನಂದರು ಮಾನವನು ನೀತಿವಂತನಾಗಲು ನಿಯಮಗಳ ಗೋಜೇನೂ ಬೇಡ, ತನ್ನ ಸ್ವಸ್ವರೂಪದಲ್ಲಿಯೇ ಇದ್ದು ನಿಜವಾಗಿ ಒಳಗಿನ ಬೆಳಕು ಪ್ರತಿ ಮಾತು ಕೃತಿಗಳಲ್ಲಿ ಹೊರ ಬರಲು ಅವಕಾಶ ನೀಡಿದರೆ ಸಾಕು (ಏಕೆಂದರೆ ಮಾನವನಲ್ಲಿ ದೈವಿಕತೆ ಸುಪ್ತವಾಗಿದೆ) ಎಂದು ಹೇಳಿ. ವೇದಾಂತದ ಪಾರಮಾರ್ಥಿಕ ತತ್ವವನ್ನು ವ್ಯಾವಹಾರಿಕ ಕ್ಷೇತ್ರಕ್ಕೂ ಅನ್ವಯಿಸಿದರು.

ದಿಂದ ಜನ ಹೆಚ್ಚು ನೀತಿವಂತರಾಗದಿದ್ದರೂ, ಸರಿಯಾದ ತೀರ್ಮಾನಗಳಿಗೆ ಬರಲು ಒಂದು ಚೌಕಟ್ಟಿನ ಆಧಾರ, ನೈತಿಕ ಪ್ರಪಚಂದ ಬಗ್ಗೆ ಅರಿವನ್ನು ವಿಸ್ತರಿಸಿಕೊಳ್ಳುವ ಅವಕಾಶ ಲಭ್ಯ ವಾಗುತ್ತದೆ.

## ನೈತಿಕತೆ ಎಂದರೇನು?

ಪಾಶ್ಚಾತ್ಯ ವಿಚಾರದಲ್ಲಿ ಸೌಂದರ್ಯ ಸತ್ಯ, ಸದ್ಗುಣಗಳು ಜೀವನದ ಅಂತಿಮ ಮೌಲ್ಯಗಳು. ಕಲೆ ವಿಜ್ಞಾನಗಳು ಅನುಕ್ರಮವಾಗಿ ಸೌಂದರ್ಯ ಸತ್ಯಗಳ ಕ್ಷೇತ್ರಗಳು. ನಮ್ಮ ಆನಂದ ಹಾಗೂ ಆರ್ಥಿಕ ಸ್ಥಿತಿಗಳು ಇವುಗಳಿಂದ ಉತ್ತಮ ಗೊಳ್ಳುವುವು. ಸದ್ಗುಣದ ಕ್ಷೇತ್ರ ಸಾಮಾಜಿಕ ಜೀವನ—ಇದು ನಮಗೆ ಶಾಂತಿ ಹಾಗೂ ಶಕ್ತಿ ನೀಡುತ್ತದೆ.

ವಿಜ್ಞಾನಗಳಲ್ಲಿ ಅನ್ವಯ ವಿಜ್ಞಾನ (ಪ್ರಕೃತಿ ಜ್ಞಾನ: ಭೌತ ವಿಜ್ಞಾನ, ಜೀವಶಾಸ್ತ್ರ ಇತ್ಯಾದಿ) ಹಾಗೂ ನಿಯಮ ವಿಜ್ಞಾನ (ಪ್ರಮಾಣ, ಮೌಲ್ಯ ಗಳಿಗೆ ಸಂಬಂಧಿಸಿದ್ದು, ನೀತಿ, ತರ್ಕಶಾಸ್ತ್ರ ಇತ್ಯಾದಿ) ಎಂದು ಎರಡು ವಿಧ, ನೀತಿಯು ನಿಯಮ ವಿಜ್ಞಾನ. ಇದು ಅಧ್ಯಯನ ಮಾತ್ರ. ಜನರ ನೈತಿಕ ವರ್ತನೆ, ನಡತೆ, ಪದ್ಧತಿ ಇವುಗಳ ವಿವರಣಾತ್ಮಕ ಅಧ್ಯಯನ ಅದರ ವಿಷಯವಲ್ಲ–ಇವು ಅನ್ವಯ ವಿಜ್ಞಾನವಾದ ಮನಃಶಾಸ್ತ್ರ, ಸಮಾಜ ಶಾಸ್ತ್ರ ಮಾನವ ವಿಜ್ಞಾನಗಳ ಕ್ಷೇತ್ರ. ವರ್ತನೆಯ ಸರಿ–ತಪ್ಪುಗಳನ್ನು ಪರಾಮರ್ಶಿಸಲು ಮೂಲಭೂತವಾದ ತತ್ವಗಳನ್ನು ಕಂಡುಹಿಡಿಯುವುದೇ ನೀತಿಯ ಕೆಲಸ. ಇವನ್ನು ಆಚರಣೆಗೆ ತರುವುದು ಅದರ ಎಲ್ಲೆಯಲ್ಲಿಲ್ಲ (ಪುರೋಹಿತ ಶಾಹಿ ಸಮಾಜಗಳಾದ ಜ್ಯೂ ಧರ್ಮ, ಇಸ್ಲಾಂ ಗಳಲ್ಲಿ ಆಚರಣೆಗೆ ಸಂಬಂಧಿಸಿದ Canistry ಎಂಬ ಜ್ಞಾನದ ಭಾಗವೇ ಅಸ್ತಿತ್ವದಲ್ಲಿದೆ). ಹೀಗೆ ಜನರನ್ನು ಶ್ರೇಯಸ್ಸಿನೆಡೆ ನಡೆಸುವ ನೀತಿ ಬೋಧೆ, ಪ್ರವಚನದ ಸಮಸ್ಯೆ ಇದ್ದೇ ಇದೆ.

ವರ್ತನೆಯ ಮೂರು ಅಂಶಗಳು– ಇಚ್ಛೆ, ವಿಧಿ (obligation) ಹಾಗೂ ನಿಯಮ (standard)ಗಳು ನೀತಿಯ ಕ್ಷೇತ್ರದಲ್ಲಿ ಮುಖ್ಯ–ಪೂರ್ತಿ ಅಪ್ರಜ್ಞೆಯ ಕ್ರಿಯೆಗಳಾದ ಉಸಿರಾಟ ಮೊದಲಾದುವನ್ನು ಬಿಟ್ಟು ಉಳಿದೆಲ್ಲ ಕ್ರಿಯೆಗಳು ನೈತಿಕ ವರ್ತನೆಯ ಪರಿಧಿಯಲ್ಲಿವೆ. ಕೆಲವು ಬಾರಿ ಜನ 'ನಾವೇನು ಬೇಕೂ ಅಂತ ಮಾಡ ಲಿಲ್ಲ' ಎಂದು ನುಣುಚಿಕೊಳ್ಳುವುದುಂಟು. ನೀತಿಯ ಪ್ರಶ್ನೆ ಇಚ್ಛಿಸಿ ಮಾಡಿದಿರೋ ಇಲ್ಲವೋ ಎಂಬುದಲ್ಲ; ಯೋಚಿಸಿ ಅದನ್ನು ತಪ್ಪಿಸಬಹು ದಿತ್ತೋ ಇಲ್ಲವೋ ಎಂಬುದು. ಇದು 'ವಿಧಿ'ಯ ಅಂಶ: ನೈತಿಕ ಜವಾಬ್ದಾರಿ ಮಾನವ ಅಸ್ತಿತ್ವದ ನಿರ್ಣಾಯಕ ಗುಣಗಳಲ್ಲಿ ಮುಖ್ಯ. ಇತರೆಲ್ಲ ಹೊಣೆಗಳಿಂದ ಜಾರಿಕೊಂಡರೂ ಈ ಜವಾ ಬ್ದಾರಿಯಿಂದ ತಪ್ಪಿಸಿಕೊಳ್ಳಲು ಅಸಾಧ್ಯ. ವಿಧಿ ಅಥವಾ 'ಮಾಡಲೇಬೇಕಾದ್ದು' ಎಂಬ ಅನಿಸಿಕೆ ಎಲ್ಲಾ ಮಾನವ ಕ್ರಿಯೆಗಳ ಹಿಂದೆ ಇದೆ. ನೀತಿಯ ಪ್ರಶ್ನೆ ಜನ ಮಾಡಿದ್ದನ್ನು ಕುರಿತು ತಿಳಿಯುವುದಲ್ಲ, ಮಾಡಲೇಬೇಕಾದ್ದು ಏನೆಂಬು ದನ್ನು ನಿರ್ಧರಿಸುವುದು. ಇದೇ 'ನಿಯಮ.' ಮಾಡಬೇಕಾದ್ದು ಅಥವಾ ಮಾಡಬಾರದ್ದನ್ನು ನಿರ್ಣಯಿಸಲು ಒಂದು ಸಾಮಾನ್ಯ ನೈತಿಕ ನಿಯಮ ಅವಶ್ಯಕ. ಚೀನೀಯರು, ಭಾರತೀ ಯರು, ಪಾಶ್ಚಾತ್ಯರು ತಮ್ಮ ವರ್ತನೆಗಳಲ್ಲಿ ವೈವಿಧ್ಯ ತೋರುತ್ತಾರೆ. ಸಾರ್ವತ್ರಿಕ ಪ್ರಮಾಣ ಗಳು ಕೆಲವಿವೆ; ಅವುಗಳಿಂದ ಇವರ ಕ್ರಿಯೆಗಳು ಸರಿಯೆ–ತಪ್ಪೆ, ಒಳ್ಳೆಯದೇ–ಕೆಟ್ಟದ್ದೇ ಎಂಬ ನಿರ್ಣಯ ಸಾಧ್ಯ. ಇಂತಹ ಚೌಕಟ್ಟುಗಳ ನಿರ್ಮಾಣವೇ ನೀತಿಯ ಗುರಿ. ನೀತಿಯ ಚರಿತ್ರೆ ಎಂದರೆ ಬಹುಮಟ್ಟಿಗೆ ಇಂಥ ನೈತಿಕ ಆದರ್ಶ ಅಥವಾ ಪ್ರಮಾಣದ ವಿಕಾಸದ ಚರಿತ್ರೆಯೇ.

## ಧರ್ಮ–ಕರ್ಮ

ನಾವೇಕೆ ನೀತಿವಂತರಾಗಬೇಕೆಂಬ ಪ್ರಶ್ನೆಗೆ ನಾಲ್ಕು ಮುಖ್ಯ ವಿಶ್ವ ಸಂಸ್ಕೃತಿಗಳಾದ ಹೆಲೆ ನಿಕ್, ಹೀಬ್ರೂ, ಭಾರತೀಯ ಹಾಗೂ

ಚೀನೀ ಸಂಸ್ಕೃತಿಗಳು ಪ್ರಾಯೋಗಿಕವಾದ ಹಾಗೂ ಅಸ್ತಿತ್ವವಾದಿ ಉತ್ತರಗಳನ್ನು ನೀಡಿವೆ.

ವಿಶ್ವವನ್ನೇ ನಡೆಸುವ ಒಂದು ನೈತಿಕ ಕ್ರಮ ಅಥವಾ ನ್ಯಾಯ ಇದೆ. ಅದರ ಒಟ್ಟಿಗೆ ಸಾಮರಸ್ಯದಿಂದ ನಡೆದಾಗ ಮಾತ್ರ ಮಾನವ ಶಾಂತಿಯನ್ನೂ ಮುನ್ನಡೆಯನ್ನೂ ಸಾಧಿಸಬಲ್ಲ; ಅಸಾಮರಸ್ಯ ದುಃಖಕ್ಕೆ ಕಾರಣವಾಗುತ್ತದೆ. ಇದು 'ಪ್ರಾಯೋಗಿಕ ದೃಷ್ಟಿ.

ಭಾರತದಲ್ಲಿ ಚರಿತ್ರಪೂರ್ವ ಕಾಲದಿಂದ ಈವರೆಗೂ ಈ ದೃಷ್ಟಿ ಪ್ರಚಲಿತ. ವೈದಿಕರು ಭೌತಿಕ ಮತ್ತು ನೈತಿಕ ಜಗತ್ತನ್ನು ಆಳುವ ಒಂದು ಸಮಷ್ಟಿ ತತ್ವವಿದೆ ಎಂದು ನಂಬಿ ಅದನ್ನು ಋತ ಎಂದು ಕರೆದರು. ಇದರಲ್ಲಿ ವಿಶ್ವದ ಹಾಗೂ ವ್ಯಕ್ತಿಗತ ಒಳಿತುಗಳ ನಡುವೆ ಸಂಬಂಧವಿದೆ ಎಂಬ ನಂಬಿಕೆ ಅಂತರ್ಗತವಾಗಿದೆ... ಅಂದರೆ ಯಾವನೂ ತನಗಾಗಿ ಮಾತ್ರ ಜೀವಿಸಲಾರ. ಪ್ರತಿಯೊಬ್ಬ ವ್ಯಕ್ತಿಯೂ ಪ್ರಪಂಚದ ನೈತಿಕ ಮೌಲ್ಯವನ್ನೂ ಗಮನದಲ್ಲಿಟ್ಟುಕೊಂಡು ಅದರೊಡನೆ ತನ್ನ ವರ್ತನೆಯನ್ನು ಹೊಂದಿಸಿಕೊಳ್ಳಬೇಕು. ಈ ವಿಚಾರದ ಹಿಂದಿರುವ ಭಾವನೆ ಇದು: ವಾಸ್ತವ ಪ್ರಪಂಚಕ್ಕೂ ಮೌಲಿಕ ಪ್ರಪಂಚಕ್ಕೂ ನಡುವೆ ಭೌತಿಕವಾಗಿ ಯಾವುದು ಸರಿ ಮತ್ತು ನೈತಿಕವಾಗಿ ಯಾವುದು ಸರಿ ಇವುಗಳ ನಡುವೆ ಸಂಬಂಧವಿದೆ ಎಂಬುದು ಎಂದು ಪ್ರೊ. ಹಿರಿಯಣ್ಣ ವಿವರಿಸುತ್ತಾರೆ.

ವೈದಿಕರ ಪ್ರಮುಖ ಸಮಸ್ಯೆ ಇಂಥ ಋತದ ಜತೆ ಸಾಮರಸ್ಯವನ್ನು ಸಾಧಿಸುವುದು ಹೇಗೆನ್ನುವುದೇ ಆಗಿತ್ತು. ವಿಶ್ವ–ವ್ಯಕ್ತಿಗಳ ನಡುವೆ ಪರಸ್ಪರ ವಿನಿಮಯದಿಂದ ಕೂಡಿದ ಲಯಬದ್ಧ ಜೀವನದಿಂದ ಇದು ಸಾಧ್ಯವೆಂದು ಕಂಡರು. ತಾನು ವಿಶ್ವದಿಂದ ಪಡಕೊಂಡದ್ದನ್ನೆಲ್ಲವನ್ನೂ ಮಾನವ ನಿಸ್ವಾರ್ಥ ಕಾಯಕದಿಂದ ಹಿಂದಿರುಗಿಸಲೇಬೇಕು. ಇದೇ ಯಜ್ಞ; ಇದನ್ನು ಅಗ್ನಿಯನ್ನು ಕಾಪಾಡಿಕೊಳ್ಳುವ ಕ್ರಿಯೆಯಲ್ಲಿ ಪ್ರತಿಮೀಕರಿಸಿದರು. ದೇವತೆಗಳೂ ಸ್ವತಂತ್ರವಾದ, ಎಲ್ಲಕ್ಕೂ ಮಿಗಿಲಾದ ಈ ಋತವನ್ನು ಅನುಸರಿಸಬೇಕಿತ್ತು.

ಯಜ್ಞದ ಅಭ್ಯಾಸ ಕರ್ಮ ನಿಯಮದ ಸಂಶೋಧನೆಗೆ ಎಡೆ ನೀಡಿತು. ಪ್ರತಿ ಕ್ರಿಯೆಯೂ 'ಅಪೂರ್ವ' ಎನ್ನುವ ಸಮಷ್ಟಿ ಪರಿಣಾಮವನ್ನುಂಟುಮಾಡುತ್ತದೆ. ಇದು ಕಾಲಕ್ರಮದಲ್ಲಿ ಕರ್ತೃವಿಗೆ ಕರ್ಮಫಲವನ್ನು ನೀಡುತ್ತದೆ. ಒಳ್ಳೆ ಕರ್ಮದಿಂದ ಸಂತೋಷ, ಕೆಟ್ಟದರಿಂದ ದುಃಖ, ಈ ನಂಬಿಕೆಯು ದೇವ–ಮಾನವ ಸಂಬಂಧದ ಸಡಿಲ ಸರಳ ಸಾಮರಸ್ಯವಾದ ಋತವನ್ನು ಮಾನವನ ಹಿಡಿತದಲ್ಲಿಲ್ಲದ, ಗಡುಚಾದ, ಕ್ರೂರವಾದ "ಧರ್ಮ" ಎಂಬ ನಿಯಮವನ್ನಾಗಿ ಪರಿವರ್ತಿಸಿತು. ವೇದಕಾಲದ ಅನಂತರದ ಹಿಂದೂ ನೈತಿಕ ಜೀವನದಲ್ಲಿ–ಈ ಕರ್ಮದ ಹೆದರಿಕೆ, ಅದರಿಂದ ತಪ್ಪಿಸಿಕೊಳ್ಳುವ ಕಳವಳವೇ ಮುಖ್ಯವಾಗಿದೆ. ಇದಕ್ಕೆ ಬೌದ್ಧ ಜೈನ ಧರ್ಮಗಳ ಪ್ರಭಾವ ಭಾಗಶಃ ಕಾರಣವಿರಬಹುದು. ಆದರೆ ಮಹಾಭಾರತದಲ್ಲಿ ಈ ಹೆದರಿಕೆ ತೀರ ಸ್ಪಷ್ಟವಾಗಿದೆ. [ಪರ್ವದಲ್ಲಿನ ಪಾತ್ರಗಳ ನರಳಾಟಕ್ಕೆ ಧರ್ಮ ಕಾರಣ] ಕೆಲವರು ತಮಗೆ ಒಳ್ಳೆಯದಾದೀತೆಂಬ ಆಸೆಯಿಂದ ಒಳ್ಳೆಯ ಕೆಲಸ ಮಾಡಬಲ್ಲರು. (ಆದರೆ ಅದರ ಉದ್ದೇಶ ಮನಃಶುದ್ಧಿ ಎಂಬುದೂ ಮುಖ್ಯ). ಆದರೆ ಹೆಚ್ಚಿನವರಿಗೆ ಇರುವುದು ಕುಕರ್ಮದ ಫಲಗಳ ಭಯ. ಹೀಗಾಗಿ ನೀತಿ ಏಕೆಂದರೆ ಹೆಚ್ಚಿನ ಭಾರತೀಯರು 'ಕರ್ಮದ ಹೆದರಿಕೆಗೆ' ಎನ್ನುವರು.

"ತಾನಿ ಧರ್ಮಾಣಿ ಪ್ರಥಮಾನ್ಯಾಸನ್' ಎಂದು ಋಗ್ವೇದದಲ್ಲಿ ವರ್ಣಿತವಾದ ಧರ್ಮ ಮೊದಲು ಭೌತಿಕ ವಿಶ್ವದ ಸತ್ಯವಾಗಿತ್ತು. ಬೃಹದಾರಣ್ಯಕ ಉಪನಿಷತ್ತಿನ ಕಾಲಕ್ಕೆ ಸಾಮಾಜಿಕ ವ್ಯವಸ್ಥೆಯೆಂಬ ಅರ್ಥವೂ ಬಂದಿತು. ನಾಲ್ಕು ವರ್ಣಗಳನ್ನು ಸೃಷ್ಟಿಸಿ ತೃಪ್ತಿಯಾಗದ ದೇವರು 'ಶ್ರೇಯೋರೂಪವಾದ ಧರ್ಮವನ್ನು ಸೃಷ್ಟಿಸಿದ... ಆ ಧರ್ಮಕ್ಕಿಂತ ಮಿಗಿಲಾದದ್ದು

ಯಾವುದೂ ಇಲ್ಲ. (ಬೃ. ೧–೪–೧೪) ಸಮಾಜದಲ್ಲಿ ವ್ಯಕ್ತಿಯ ಸ್ಥಾನ, ಕ್ರಿಯೆಗಳನ್ನು ನಿರ್ದೇಶಿಸುವ ಸಾಮಾಜಿಕ ವ್ಯವಸ್ಥೆಯ ಧರ್ಮ ಇದು. ಮನುಸ್ಮೃತಿಯಂಥ ಗ್ರಂಥಗಳ ಧರ್ಮ ಸಮಾಜವನ್ನು ನಿಯಂತ್ರಿಸುವ ಈ ಧರ್ಮವೇ. ಸಾಮಾಜಿಕವಾದ ಒಂದು ಕ್ರಮವು ನ್ಯಾಯವನ್ನು ಆಧರಿಸಬೇಕು. ಈ ನ್ಯಾಯಕ್ಕೆ ಆಧಾರ ನೀತಿಯೇ. ರಾಮಾಯಣ ಮಹಾಭಾರತಗಳ ಕಾಲದಲ್ಲಿ ಈ ನೈತಿಕ ಸತ್ಯದ ಧರ್ಮವನ್ನು ಕಾಣುತ್ತೇವೆ. ಅದನ್ನು ರಕ್ಷಿಸಿದರೆ ಸಮಾಜವೂ ರಕ್ಷಿತ, ಹಾಳು ಮಾಡಿದರೆ ನಮ್ಮನ್ನು ಹಾಳು ಮಾಡುತ್ತದೆ. ಆದರೆ ನೈತಿಕ ವ್ಯವಸ್ಥೆಯನ್ನು ಮೀರಿ ನಡೆಯುವುದು ಹೆಚ್ಚಾಯಿತು. ಶುದ್ಧ ನೈತಿಕ ಜೀವನದಿಂದ ಲಭ್ಯವಾದ ಶಾಂತಿ ಆಳವಾದದ್ದೂ ಆಗಿರಲಿಲ್ಲ, ಶಾಶ್ವತವೂ ಆಗಿರಲಿಲ್ಲ. ಹೀಗಾಗಿ ಆತ್ಯಂತಿಕ ಅರ್ಥ ಹಾಗೂ ಗುರಿಗಾಗಿ ಶೋಧನೆ ಮುಂದುವರೆದು

## ಪಾಶ್ಚಾತ್ಯ ನೀತಿನಿಯಮದ ಮಾದರಿಗಳು

ಮಾನವ ಕ್ರಿಯೆಯ ಮೂಲಸ್ರೋತಗಳಾದ ವಿವೇಕ ಮತ್ತು ಆಸೆ, ಆಕೃತಿ ಮತ್ತು ವಸ್ತು, ಯುಕ್ತ ಮತ್ತು ಹಿತ— ಈ ಬಗ್ಗೆ ವಿಭಿನ್ನ, ವಿರುದ್ಧ ವಿಚಾರಗಳ ಮೇಲೆ ಎಲ್ಲ ನಿಯಮಗಳು ಆಧಾರಿತವಾಗಿವೆ.

ಒಂದು ಅಭಿಪ್ರಾಯದ ಪ್ರಕಾರ ಆಸೆಗಳೇ ಮಾನವ ಕ್ರಿಯೆಯ ಮೂಲ. ಜಡವಾದಿ ಹ್ಯೂಮ್ "ಬುದ್ಧಿಯು ಪೂರ್ಣ ಜಡವಾಗಿದ್ದು, ಯಾವ ಕ್ರಿಯೆ ಅಥವಾ ಪರಿಣಾಮವನ್ನು ಉಂಟುಮಾಡಲೂ ಆರದು, ನಿಲ್ಲಿಸಲೂ ಆರದು." ಎಂದ. ಈಚಿನ ಮನೋವಿಜ್ಞಾನಿಗಳಲ್ಲಿ ಹೆಚ್ಚಿನವರು ಮುಖ್ಯವಾಗಿ ಫ್ರಾಯ್ಡ್ ಅನುಯಾಯಿಗಳು ಇದನ್ನು ಒಪ್ಪುವರು. ಈ ದೃಷ್ಟಿಯಲ್ಲಿ ನೈತಿಕ ಜೀವನವೆಂದರೆ ಒಂದು ಗುರಿ. ಕೊನೆಯನ್ನು ತಲುಪಲು ಎರಡು ವಿರುದ್ಧ ಆಸೆಗಳ ಸಮುದಾಯದ ನಡುವಿನ ತಿಕ್ಕಾಟ. ಯಾವುದು ಹಿತ ಎಂಬುದೇ ಇಲ್ಲಿ ಮುಖ್ಯ; ಸುಖವೇ ನೈತಿಕ ವರ್ತನೆಯ ಮಾನದಂಡ, ಇದನ್ನು ಹಿತವಾದ (hedonism) ಎನ್ನುವರು.

ಇನ್ನೊಂದು ಗುಂಪಿನವರ ಪ್ರಕಾರ ನೈತಿಕ ವರ್ತನೆಗೆ ಬುದ್ಧಿ ಅಥವಾ ವಿವೇಕವೇ ಮೂಲ. ವಿವೇಕದ ಸಹಾಯದಿಂದ ಆಸೆಗಳನ್ನು ನಿಯಂತ್ರಿಸುವ ಹೋರಾಟವೇ ನೈತಿಕ ಜೀವನ. ಮೋಹಗಳ ಸೆಳೆತದ ಜೀವನ ಅನೈತಿಕ, ವಿವೇಕದ ಜೀವನ ನೈತಿಕ. ಯುಕ್ತ ನಿಯಮಗಳಂತೆ ಇರುವುದೇ ನೀತಿ, ಯಾವುದು ಸರಿ ಎಂಬುದೇ ಇಲ್ಲಿ ಮುಖ್ಯ. ಕಾನೂನೇ ನೈತಿಕ ಜೀವನದ ಮಾನದಂಡ.

ಈ ದೃಷ್ಟಿಗಳ ನಡುವಿನ ತಿಕ್ಕಾಟವನ್ನು ಪಾಶ್ಚಾತ್ಯವಿಚಾರದ ಚರಿತ್ರೆಯುದ್ದಕ್ಕೂ ಕಾಣಬಹುದು. ಗ್ರೀಕ್ ತತ್ವಜ್ಞ ಡೆಮಾಕ್ರಿಟಸ್ ಹಿತವಾದಿಗಳಲ್ಲಿ ಪ್ರಾಚೀನನಾದರೆ ಹೆರಾಕ್ಲಿಟಸ್ ಎರಡನೆಯ ಗುಂಪಿನವರಲ್ಲಿ ಪ್ರಾಚೀನ. ಸೋಫಿಸ್ಟರು, ಸಾಕ್ರೆಟೀಸ್, ಪ್ಲೇಟೋ, ಅರಿಸ್ಟಾಟಲ್ ಮೊದಲಾದವರು ಎರಡೂ ಗುಂಪಿನಲ್ಲಿ ಸಮನ್ವಯ ತರಲು ಪ್ರಯತ್ನಿಸಿ ಪಾಶ್ಚಾತ್ಯ ನೀತಿಗೆ ಅಡಿಪಾಯ ಹಾಕಿದರು. ಪುನಃ ಒಡಕು, ಸ್ವೈರ ನಾಯಕರು ಹಿತವಾದವನ್ನು ಮೇಲೆತ್ತಿದರೆ ಸನಿಯಿಕರು ತ್ಯಾಗಜೀವನವನ್ನು ಬೆಂಬಲಿಸಿದರು.

ಹೋಲುತ್ತದೆ. ಯಜ್ಞದ ಬದಲು ಇಲ್ಲಿ ಅಕೃತ್ರಿಮತೆ, ಸರಳತೆ, ಸ್ವಪ್ರೇರಣೆ ಮತ್ತು ವಿಶ್ವ ನೀತಿ ನಿಯಮದ ಜತೆ ಸಾಮರಸ್ಯ ಹೊಂದುವ ಇತರ ಹಾದಿಗಳ ಮೇಲೆ ಹೆಚ್ಚು ಒತ್ತು, ಕನ್‌ಫ್ಯೂಷಿಯೆಸ್‌ನ ಪ್ರಾಯೋಗಿಕವಾದ ಮಾನವತಾವಾದದಿಂದ ಟಾವೋ ಮಸುಕಾದರೂ ಚೀನೀ ನೈತಿಕತೆಯ ಮೇಲೆ ಜೆನ್ ಬೌದ್ಧ ಧರ್ಮದ ಮೇಲೆ ಇದರ ಪ್ರಭಾವ ಹೆಚ್ಚು.

ಋತ, ಟಾವೋಗಳಿಗೆ ಸಮೀಪ ಬರುವ ಪಾಶ್ಚಿಮಾತ್ಯ ತತ್ವವೆಂದರೆ ಗ್ರೀಕರ ಹೆರಾಕ್ಲಿಟಸ್ ಪ್ರತಿಪಾದಿಸಿ, ಸ್ಟೋಯಿಕರಿಂದ ಬೆಳಸಲ್ಪಟ್ಟ ವಿಶ್ವಪ್ರಜ್ಞೆಯ (Logos) ತತ್ವ. ಸ್ಟೋಯಿಕರ ಪ್ರಕಾರ ವಿಶ್ವವೇ ಒಂದು ಜೀವಂತ ಐಕ್ಯ, ಅದರಲ್ಲಿನ ಭಾಗಗಳು ತಮ್ಮೊಳಗೆ ಮತ್ತು ಪೂರ್ಣತೆಯೊಂದಿಗೆ ಪರಿಪೂರ್ಣವಾದ ಬಂಧವನ್ನು ಹೊಂದಿವೆ. ಈ ಜೀವಂತಿಕೆಗೆ ಅದರೊಳಗಿನ ಅಂತರ್ಗತವಾದ ವಿಶ್ವಪ್ರಜ್ಞೆ (Logos spermatikos) ಕಾರಣ. ಈ ತತ್ವ ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬೇರೂರಲೇ ಇಲ್ಲ. ದೇವರು–ಮಾನವರ ನಡುವಣ ಒಪ್ಪಂದವಾಗಿ (ಇದು ವಿಧಿ.

## ಭಾರತೀಯ ನೀತಿನಿಯಮದ ಮಾದರಿಗಳು

ಹಿತ, ಯುಕ್ತ, ಪೂರ್ಣತ್ವ ಈ ಪಾಶ್ಚಾತ್ಯ ನೈತಿಕ ಮಾನದಂಡಗಳಿಗೆ ಸ್ವಲ್ಪ ಮಟ್ಟಿಗೆ ಹೋಲುವಂತೆ ನ್ಯಾಯ, ಮೀಮಾಂಸಕ ಹಾಗೂ ವೇದಾಂತ ನೀತಿ ಇದೆ.

ನೈಯಾಯಿಕರ ಪ್ರಕಾರ ಇಚ್ಛೆಯಿಂದ ಮಾಡುವ ಪ್ರತಿ ಕಾರ್ಯ ಮೂರು ಕಾರಣಗಳಿಂದಾದರೂ (conditions) ನಿರ್ಧರಿತ:

(i) ಚಿಕೀರ್ಷಾ— ಗುರಿ ಹೊಂದುವ ಆಸೆ (ii) ಕೃತಿ ಸಾಧ್ಯತಾ ಜ್ಞಾನ— ಅದನ್ನು ಪೂರ್ತಿಗೊಳಿಸುವ ನಂಬಿಕೆ. (iii) ಇಷ್ಟ ಸಾಧನತಾ ಜ್ಞಾನ— ಈ ಗುರಿ ನನ್ನ ಒಳ್ಳೆಯದಕ್ಕೇ ಮತ್ತು ಇದರ ಈಡೇರುವಿಕೆಯಿಂದ ಅನಿಷ್ಟವುಂಟಾಗದೆಂಬ ನಂಬಿಕೆ. ಇಲ್ಲಿ ಇಚ್ಛಾಪೂರ್ವಕ ಕ್ರಿಯೆಗಳನ್ನು ಗುರಿ ('ಇಷ್ಟ') ನಿರ್ಧರಿಸುತ್ತದೆ. ಈ ಗುರಿಯು ಹೊರಗಿನಿಂದ ಹೇರಲ್ಪಟ್ಟು ಕರ್ತೃವಿನ ವರ್ತನೆಯನ್ನು ಬದಲಿಸುವಂತಹದ್ದಲ್ಲ. ಅವನೇ ಆರಿಸಿಕೊಂಡದ್ದು. ಇದು ಬರೀ ಐಚ್ಛಿಕ ಕ್ರಿಯೆಗಳಿಗಷ್ಟೇ ಅಲ್ಲ, ನೈತಿಕ ಕರ್ತವ್ಯಗಳಿಗೂ ಅನ್ವಯಿಸುತ್ತದೆ.

ಪ್ರಭಾಕರ ಮೀಮಾಂಸಕರ ದೃಷ್ಟಿ ಕ್ಯಾಂಟನ ಅನಿವಾರ್ಯ ಕರ್ತವ್ಯ ಬುದ್ಧಿಯನ್ನು ಹೋಲುತ್ತದೆ. ಅವರು ನೀತಿಯ ನಿಯಾಮಕ ಒತ್ತಡಕ್ಕೆ ಒತ್ತು ನೀಡುತ್ತಾರೆ. ಮಾನವ ಕ್ರಿಯೆಗಳ ಒಲತೆಯು ಅವರ ಪ್ರಕಾರ ಕಾರ್ಯತಾಜ್ಞಾನ(ಏನು ಮಾಡಬೇಕೆಂಬುದರ ಅರಿವು)ದಲ್ಲಿ ಇದೆಯೇ ವಿನಾ ಇಷ್ಟ ಸಾಧನತಾ ಜ್ಞಾನ(ಗುರಿಯ ಅರಿವು)ದಲ್ಲಿಲ್ಲ. ಇದನ್ನು ಮಾಡಬೇಕು. ಇದು ನನ್ನ ಕರ್ತವ್ಯ ಎಂಬ ಯೋಚನೆಯ ಫಲವಾದ ಒಂದು ರೀತಿಯ ಒತ್ತಾಯದಿಂದ ಕೆಲಸ ಮಾಡುತ್ತೇವೆ. ಎಲ್ಲರಿಗೂ ಈ ಕರ್ತವ್ಯಪ್ರಜ್ಞೆ ಇದೆ. ಒಂದೇ ಸಮಸ್ಯೆ ಎಂದರೆ ಕೆಲವು ಸಲ ಪರಸ್ಪರ ವಿರುದ್ಧವಾಗಿರುವ ಕರ್ತವ್ಯಗಳಲ್ಲಿನ ಆಯ್ಕೆ. ಮೀಮಾಂಸಕರೇನೋ ವೇದಗಳನ್ನು ಅನುಸರಿಸುವುದೇ ಪರಿಹಾರವೆನ್ನುತ್ತಾರೆ. ಅವರಲ್ಲಿ ವಿಧಿ ನಿಷೇಧಗಳಿವೆ–ಅದರಂತೆ ನಡೆಯುವುದೇ ನೀತಿಯ ಹಾದಿ.

ತಪ್ಪಾಗಿ **Testament** ಎಂದು ಕರೆಯಲಾಗಿದೆ) ನೀತಿಯನ್ನು ಕಾಣುವ ಯಹೂದಿ ವಿಚಾರದಿಂದ ಬೆಳೆದು ಬಂದ ಕ್ರೈಸ್ತ ನೀತಿ ಇದನ್ನು ಪಲ್ಲಟ ಮಾಡಿತು. ಮೋಸೆಸ್‌ಗೆ ದೇವರು ಹತ್ತು ಆಜ್ಞೆಗಳನ್ನು ನೀಡಿ ಅವನ್ನು ನಡೆಸುತ್ತಿರುವ ವರೆಗೂ ನಿನ್ನ ಕುಲದವರನ್ನು ಕಾಯುವೆನೆಂಬ ಭರವಸೆ ನೀಡಿದ. ಯಾಕೆ ನೀತಿವಂತರಾಗಬೇಕೆಂಬ ಪ್ರಶ್ನೆಗೆ ಕ್ರೈಸ್ತ ಉತ್ತರ ಹೀಗೆ ಸಹಜವಾಗಿ, 'ಅದು ದೇವರ ಆಜ್ಞೆ' ಎಂಬುದಾಗಿದೆ. ಇನ್ನೊಬ್ಬನನ್ನು ಯಾಕೆ ಪ್ರೀತಿಸಬೇಕು, ಯಾಕೆ ಒಳ್ಳೆಯದನ್ನು ಮಾಡಬೇಕು ಎಂದರೆ ಅದಕ್ಕೆ ದೇವರ ಇನ್ನೊಂದು ಆಜ್ಞೆ ಕಾರಣ, ದೇವರಿಗೆ ಅವಿಧೇಯನಾದರೆ ಅವನ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಇಸ್ಲಾಂನ ನೀತಿಯು ಈ ಯಹೂದ್ಯ ಕ್ರೈಸ್ತ ನೀತಿಯನ್ನೇ ಹೋಲುವುದಾದರೂ ಇಲ್ಲಿ ಒಪ್ಪಂದ ವಿಲ್ಲ.

ಹೀಗೆ ನೀತಿಯ ಪ್ರಶ್ನೆಗೆ ಪ್ರಾಯೋಗಿಕವಾದ ಉತ್ತರ ಹೆದರಿಕೆಯನ್ನೆ ಅವಲಂಬಿಸಿದೆ. ಯಹೂದಿ–ಕ್ರೈಸ್ತರ ನೀತಿ ದೇವರ ಹೆದರಿಕೆಯನ್ನು (ಒಳ್ಳೆಯವ ಇಲ್ಲಿ ದೈವಭೀರು) ಆಧರಿಸಿದ್ದರೆ ಭಾರ

---

ವೇದಾಂತಿಗಳ ನೈತಿಕ ಮಾನದಂಡ ಪೂರ್ಣತೆ-ಯುಕ್ತ, ಹಿತಗಳ ಸಮನ್ವಯ ರೂಪ. ನೈಯಾಯಿಕರ ದೃಷ್ಟಿಯಲ್ಲಿ ಪೂರ್ಣತೆ ಸಾಧನೆಯ ಮೂಲಕ ಪಡೆಯುವಂಥದು. ವೇದಾಂತಿಗಳ ದೃಷ್ಟಿಯಲ್ಲಿ ಆತ್ಮನಲ್ಲೇ ಪೂರ್ಣತೆ ಸುಪ್ತವಾಗಿ ಇದೆ—ಇದನ್ನು ಅಜ್ಞಾನ ಮುಚ್ಚಿದೆ. ಅಜ್ಞಾನವನ್ನು ಹೋಗಲಾಡಿಸುವುದೇ ಸರಿಯಾದ ಮಾರ್ಗ. "ಮಾಡಬೇಕಾದ ಏಕೈಕ ಕೆಲಸವೆಂದರೆ ಅಜ್ಞಾನದ ಆವರಣವನ್ನು ತೆಗೆದು ಹಾಕುವುದು ಮಾತ್ರ. ಬ್ರಹ್ಮಸಾಕ್ಷಾತ್ಕಾರಕ್ಕೆ ಪ್ರಯತ್ನವೇನೂ ಬೇಕಿಲ್ಲ. ಇದು ಅತ್ಯಂತ ಪ್ರಸಿದ್ಧ" ಎನ್ನುತ್ತಾರೆ ಶಂಕರಾಚಾರ್ಯರು.

ಅಧರ್ಮ ಅಥವಾ ಕೆಡುಕಿನ ಬಗ್ಗೆ ಈ ಮೂರು ದರ್ಶನದವರು ಭಿನ್ನವಾಗಿ ಆಲೋಚಿಸುತ್ತಾರೆ. ನೈಯಾಯಿಕರು ಪ್ರತಿಯೊಬ್ಬನೂ ತನ್ನ ಹಿತವನ್ನು ಸ್ವತಂತ್ರವಾಗಿ ಆಯ್ದುಕೊಳ್ಳುತ್ತಾನೆ—ಕೆಟ್ಟದ್ದು ಮಾಡುವಾಗಲೂ ಅದು ತನ್ನ ಒಳಿತಿಗೇ ಎಂಬ ತಪ್ಪು ಗ್ರಹಿಕೆಯಿಂದ. ಸಾಕ್ರಟೀಸನ ಅಭಿಪ್ರಾಯವೂ ಇದೆ—ಜ್ಞಾನ ಹಾಗೂ ಒಳಿತನ್ನು ಆತ ಸಮೀಕರಿಸುತ್ತಾನೆ. ಜ್ಞಾನದ ಕೊರತೆಯಿಂದ ಮಾನವ ತಪ್ಪು ಮಾಡುತ್ತಾನೆ. ಪ್ಲೇಟೋ, ಅರಿಸ್ಟಾಟಲರ ಮುಖ್ಯ ಪ್ರಯತ್ನ ಸರಿಯಾದ ಜ್ಞಾನವನ್ನು ನೀಡುವುದೇ. ಮೀಮಾಂಸಕರು ಒಳಿತು-ಕೆಡಕಿನ ಜ್ಞಾನಶ್ರುತಿಯಿಂದ ಬರುತ್ತದೆ. ಶ್ರುತಿಗೆ ಹೊಂದದ ಮಾರ್ಗ ಕೆಡುಕಿಗೆ ಒಯ್ಯುವುದರಿಂದ ಅದೇ ಕೆಡುಕು ಎನ್ನುತ್ತಾರೆ. ಯಹೂದಿ, ಇಸ್ಲಾಂ ನೀತಿಯ ಮೂಲಭೂತ ದೃಷ್ಟಿ ಇದೇ. ಕ್ರೈಸ್ತ ನೀತಿಯೂ ಇದನ್ನೇ ಹೇಳಿ, ಮೂಲ ಪಾಪ ಮನುಷ್ಯಾತ್ಮವನ್ನು ಹಾಳುಗೆಡವಿದ್ದರಿಂದ, ತನ್ನಂತೆ ಬಿಟ್ಟರೆ ಅದು ಪಾಪವನ್ನಲ್ಲದೆ ಬೇರೇನನ್ನೂ ಮಾಡಲಾರ ಎಂದು ಸೇರಿಸುತ್ತದೆ.

ನ್ಯಾಯ–ಮೀಮಾಂಸ ದೃಷ್ಟಿಯ ಪ್ರಕಾರ (ಗುರಿಯ ಅಥವಾ ಶ್ರುತಿಯ) ಅಜ್ಞಾನ ಕೆಡುಕಿನ ಕಾರಣ. ವೇದಾಂತ ಇನ್ನೂ ಮುಂದೆ ಹೋಗಿ, ಅಜ್ಞಾನವೇ ಕೆಡುಕು ಎನ್ನುತ್ತದೆ. ಅದರ ಪ್ರಕಾರ ಒಳಿತು-ಕೆಡುಕು ಎರಡೂ ಅಜ್ಞಾನದ ಫಲಗಳು ಹಾಗೂ ನೀತಿ ಒಂದು ಸಾಪೇಕ್ಷವಾದ ವಿಚಾರ. ವೇದಾಂತದ ಲಕ್ಷ್ಯ ನೀತಿಯಲ್ಲ, ಅದನ್ನೂ ಮೀರಿ ಮುಂದೆ ಹೋಗುವುದು.

ತೀಯ ಸಂಪ್ರದಾಯದ ನೀತಿ ಧರ್ಮ ಅಥವಾ ಕರ್ಮದ ನಿಯಮದ ಹೆದರಿಕೆಯನ್ನು (ಒಳ್ಳೆಯವ ಇಲ್ಲಿ ಧರ್ಮಭೀರು) ಅವಲಂಬಿಸಿದೆ.

## ಅಸ್ತಿತ್ವವಾದೀ ಉತ್ತರ: ಆತ್ಮದ ಸುಪ್ತದೈವತ್ವ

ನಾವು ನೀತಿವಂತರೂ ಯಾಕೆ ಆಗಬೇಕೆಂಬುದಕ್ಕೆ ದೈವಶಾಸ್ತ್ರದ ತೊಡಕಿನಿಂದ ಸ್ವತಂತ್ರವಾದ ಇನ್ನೊಂದು ದೃಷ್ಟಿಕೋನದಿಂದ ಉತ್ತರಿಸ ಬಹುದು. ನೀತಿಯು ದೇವರ ಅಥವಾ ಪ್ರಕೃತಿಯ ನಿಯಮವಾಗಿದ್ದರೆ ಪ್ರಾಣಿಗಳೇಕೆ ಅದಕ್ಕೆ ಬದ್ಧ ವಾಗಿಲ್ಲ? (ಪ್ರಾಣಿಗಳಿಗೂ ಬುದ್ಧಿ ಇದೆ: ಅವು ಸರಿಯಾದ್ದು ಹಾಗೂ ಸುಖಗಳಲ್ಲಿ ಎರಡನೆಯ ದನ್ನು ಆರಿಸಿಕೊಳ್ಳುತ್ತದೆ.) ನೀತಿ ಬರೀ ಒಳ್ಳೆಯದನ್ನು ಗುರಿಯಾಗಿ ಹೊಂದಿಲ್ಲ. ಜವಾಬ್ದಾರಿಯನ್ನೂ ಒಳಗೊಂಡಿದೆ. ಮನುಷ್ಯ ಮಾತ್ರ ನೈತಿಕ ಜವಾಬ್ದಾರಿಯನ್ನು ಭಾವಿಸಬಲ್ಲ. ಇದರಿಂದ ಮಾನವನೊಳಗೇ ಏನೋ ಅದ್ವಿತೀಯ ವಾದದ್ದು ಇದೆ ಎನ್ನಬಹುದು.

ಇಮ್ಯಾನ್ಯುಅಲ್ ಕ್ಯಾಂಟ್ ಮಾನವ ಜ್ಞಾನದ ಬಗ್ಗೆ ವಿಚಾರ ಮಾಡುತ್ತ ಅತಿ ಮುಖ್ಯ ಸತ್ಯವೊಂದನ್ನು ಕಂಡನು. ಇದೇ 'ಅನಿವಾರ್ಯ ಕರ್ತವ್ಯ ಬುದ್ಧಿ' (Categorical Imperative) ಎಂಬ ಸ್ವತಃ ಕ್ರಿಯಾಶೀಲವಾದ ಸ್ವಾಯತ್ತ ನೈತಿಕ ನಿಯಮ. ಪ್ರಕೃತಿಯ ಇತರ ನಿಯಮಗಳು ವಿಧಿಗಳಲ್ಲ, ಬರೀ ವಾಸ್ತವ ಹೇಳಿಕೆಗಳು ಮಾತ್ರ. ನೀರು ನೂರು ಡಿಗ್ರಿ ಶಾಖದಲ್ಲಿ ಕುದಿಯುತ್ತದೆ ಎಂಬ ನಿಯಮ ಕುಡಿಯುವ ಮೊದಲು ನೀರನ್ನು ಕುದಿಸಿ ಎಂದೇನೂ ವಿಧಿಸುವುದಿಲ್ಲ. ನೀತಿ ಒಂದು ವಿಧಿ. ಏಕೆಂದರೆ ನೈತಿಕವಾಗಿ ಕೆಲಸ ಮಾಡಬೇಕೆಂಬ ಒತ್ತಾಯವನ್ನು ನೀವು ನಿಮ್ಮೊಳಗೇ ಭಾವಿಸು– ತ್ತೀರಿ, ಎಲ್ಲರೂ ಇಂತಹ ಒತ್ತಾಯವನ್ನು ಭಾವಿಸುವುದರಿಂದ ಇದೂ ಒಂದು ವಿಶ್ವನಿಯ ಮವೇ. ಅಲ್ಬರ್ಟ್ ಶ್ವೈತ್ಸರ್ ಆಫ್ರಿಕದ ಗೊಂಡಾರಣ್ಯಗಳಲ್ಲೂ ತನಗೆ ಧರ್ಮಬೋಧನೆಗೆ ಕಷ್ಟವೇ ಆಗಲಿಲ್ಲ ಎಂದು ಒಮ್ಮೆ ಹೇಳಿದ. ಅದಕ್ಕೆ ಕಾರಣ ಅತಿ ಪುರಾತನ ಬುಡಕಟ್ಟು ಜನಾಂಗದವರಲ್ಲೂ ನೈತಿಕಭಾವನೆ ಇದ್ದದ್ದು ಎಂದ.

ಈ ಅನಿವಾರ್ಯ ಕರ್ತವ್ಯಬುದ್ಧಿಯು ಆತ್ಮ ಸಾಕ್ಷಿಯಾಗಿ, ಒಳಗಿನ ದನಿಯಾಗಿ ತೋರಿಕೊಳ್ಳು ವುದು. ಆದರೆ ನಿಜವಾಗಿ ಇದು ಏನು? ಇದು ದೇವರ ಆಜ್ಞೆ ಎಂದು ಕ್ಯಾಂಟ್ ತಿಳಿದಿದ್ದಂತೆ ಅವನ ಬರಹದ ಕೆಲ ಭಾಗಗಳಲ್ಲಿ ಕಾಣುತ್ತದೆ. ಅದಕ್ಕೂ ಮೀರಿ ಇದರ ನೈಜ ಸ್ವಭಾವ ಅವನಿಗೂ ಅಚ್ಚರಿಯ ಸಂಗತಿ. 'ಯಾವಾಗಲೂ ನನ್ನಲ್ಲಿ ಹೊಸ ಅಚ್ಚರಿ, ಬೆರಗನ್ನು ಹುಟ್ಟಿಸುವ ಎರಡು ಸಂಗತಿಗಳಿವೆ: ನಕ್ಷತ್ರ ಖಚಿತವಾದ ಮೇಲಿನ ಸ್ವರ್ಗ, ನಮ್ಮೊಳಗಿನ ನೈತಿಕ ನಿಯಮ' ಎನ್ನುತ್ತಾನೆ.

ಇದು ಏನೆಂಬುದಕ್ಕೆ ಉತ್ತರವನ್ನು ಕ್ಯಾಂಟನಿ- ಗಿಂತ ಎರಡು ಸಾವಿರ ವರ್ಷದ ಹಿಂದಿದ್ದ ಮೆನ್ಷಿ ಯಸ್ (ಕ್ರಿ. ಪು. ೩೭೨–೨೮೯) ಎಂಬ ಚೀನೀ ತಾತ್ವಿಕ ನೀಡುತ್ತಾನೆ; ಏಕೆ ನೀತಿವಂತರಾಗಬೇಕು ಎಂದರೆ ನಮ್ಮ ನಿಜ ಪ್ರಕೃತಿಯೇ ಶುದ್ಧವಾದದ್ದು; ಒಳ್ಳೆಯವರೇಕೆ ಆಗಬೇಕೆಂದರೆ ನಮ್ಮ ಮೂಲ ಸ್ವಭಾವವೇ ಒಳ್ಳೆಯದು. ಆದ್ದರಿಂದ ಮೆನ್ಷಿ- ಯಸ್‌ನ ಕೊಡುಗೆಯ ಬಗ್ಗೆ ಚೀನೀ ತತ್ವಶಾಸ್ತ್ರದ ಚರಿತ್ರಕಾರ ಫುಂಗ್ ಯು ಲಾನ್ ಹೀಗೆನ್ನುತ್ತಾನೆ: "ಸ್ವಂತ ಪ್ರಯೋಜನದತ್ತ ಗಮನ ನೀಡದೆ ಪ್ರತಿ ಮಾನವನು ಬೇಷರತ್ತಾಗಿ ತಾನೇನು ಮಾಡ ಬೇಕೋ ಅದನ್ನು ಮಾಡಬೇಕು; ತಾನೇನಾಗಿರ ಬೇಕೋ ಆದಾಗಬೇಕು. ಅಥವಾ ಅವನು ತನ್ನಲ್ಲಿ ಇತರರನ್ನೂ ಒಳಗೊಳ್ಳುವಷ್ಟು ವೈಶಾಲ್ಯವನ್ನು ಪಡೆಯಬೇಕು ಇದೇ ಜನ್ (ಮಾನವತೆಯ ಸಾರ). ಕನ್‌ಫ್ಯೂಷಿಯಸ್ ಕೂಡ ಇದನ್ನೆ ಹೇಳಿದರೂ ಯಾಕೆ ಹೀಗಿರಬೇಕೆಂಬುದಕ್ಕೆ ಉತ್ತರಿಸಲು ವಿಫಲನಾದ. ಮೆನ್ಷಿಯಸ್ ಪ್ರಯತ್ನಿಸಿ ಆ ಮೂಲಕ ಮಾನವ ಪ್ರಕೃತಿಯ ಮೂಲಭೂತ

ಒಳ್ಳೆಯತನದ ಸಿದ್ಧಾಂತದ ಪ್ರವರ್ತಕನಾದ.

ಮೆನ್ಷಿಯಸ್ ಪ್ರಕಾರ ಈ ಮೂಲಭೂತ ಗುಣವೆ ಮಾನವ ಒಳ್ಳೆಯವನಾಗಿರಲು, ಒಳ್ಳೆಯದನ್ನು ಮಾಡಲು ಒತ್ತಡ ಬೀರುತ್ತದೆ. ಅಜ್ಞಾನ ಹಾಗೂ ಜೀವನ ವಿಧಾನಗಳಿಂದಾಗಿ ಈ ಮೂಲ ಪ್ರಕೃತಿ ಕಣ್ಮರೆಯಾಗುತ್ತದೆ. ಹೀಗೆ ಕಳೆದದ್ದನ್ನು ಮತ್ತೆ ಪಡೆಯುವುದೇ ಶಿಕ್ಷಣದ ಗುರಿಯಾಗಬೇಕು. ಋಷಿಗಳಿಗೂ ನಮಗೂ ಇರುವ ವ್ಯತ್ಯಾಸ ಎಂದರೆ ನಾವು ನಮ್ಮ ನೈಜಪ್ರಕೃತಿಯನ್ನು ಹೆಚ್ಚು ಬಾರಿ ಅಲಕ್ಷಿಸುತ್ತೇವೆ, ಅವರು ರಕ್ಷಿಸುತ್ತಾರೆ. 'ತನ್ನ ಮಗು-ಹೃದಯವನ್ನು ಕಳೆದುಕೊಳ್ಳದವನೇ ಮಹಾಪುರುಷ' ಎಂದ ಮೆನ್ಷಿಯಸ್.

ಆದರೆ ಮನುಷ್ಯ ಒಳ್ಳೆಯತನದ ಬೀಜಗಳನ್ನು ಮಾತ್ರ ಹೊಂದಿದ್ದಾನೆ, ಒಳ್ಳೆಯತನವನ್ನೇ ಅಲ್ಲ. ಅವನ್ನು ಹೇಗೆ ಆರೈಕೆಮಾಡಿ ಬೆಳೆಸುವನೋ ಅಷ್ಟು ಸ್ವರ್ಗಕ್ಕೆ ಸೇವೆಸಲ್ಲಿಸಬಲ್ಲ-ಆರೈಕೆ ಪೂರೈಸದಿದ್ದರೆ ತನ್ನ ಸ್ವಂತ ತಂದೆತಾಯಿಂದಿರಿಗೆ ಸೇವೆಸಲ್ಲಿಸಲೂ ಅಸಾಧ್ಯ ಎಂದು ಎಚ್ಚರಿಸುತ್ತಾನೆ.

ಮೆನ್ಷಿಯಸ್‌ನ ಈ ವಿಚಾರಕ್ಕೂ ವಿವೇಕಾನಂದರ ಸುಪ್ತದೈವಿಕತೆಯ ಸಿದ್ಧಾಂತಕ್ಕೂ ತುಂಬಾ ಸಾಮ್ಯವಿದೆ. ಮೆನ್ಷಿಯಸ್ ಬೀಜಗಳ, ಅವುಗಳ ಆರೈಕೆಯ ಬಗ್ಗೆ ಹೇಳಿದರೆ, ಸ್ವಾಮೀಜಿ ಪ್ರತಿಯೊಬ್ಬನಲ್ಲೂ ಸುಪ್ತವಾಗಿರುವ ದೈವಿಕತೆಯ ಬಗ್ಗೆ, ಅದನ್ನು ಹೊರತರುವುದರ ಬಗ್ಗೆ ಹೇಳುತ್ತಾರೆ. ಮೆನ್ಷಿಯಸ್‌ನ ವಿಚಾರ ಅಪೂರ್ಣ, ಒಳ್ಳೆಯದು ಆಗಿ ಇರುವ ಆ ಮಾನವ ಮೂಲ ಪ್ರಕೃತಿ ನಿಜವಾಗಿ ಏನು? ಅವನಿಗೆ ಗೊತ್ತಿರಲಿಲ್ಲ. ಆತ ಮನಸ್ಸಿನಿಂದಲೂ ಮುಂದೆ ಸಂಶೋಧಿಸಲಿಲ್ಲ. ಅವನಿಗಿಂತ ಕೆಲವು ಶತಮಾನಗಳ ಹಿಂದಿನ ಋಷಿಗಳು ಮನಸ್ಸಿಗಿಂತ ಮೇಲೆ ಏನಿರುವುದೆಂದು ಶೋಧಿಸಿದ್ದರು. ಮನಸ್ಸು ಸೂಕ್ಷ್ಮ ವಸ್ತು ಅಥವಾ ಶಕ್ತಿಯಿಂದ ಆಗಿದ್ದು, ನಿರಂತರ ಬದಲಾಗುವುದು. ಅಲ್ಲದೆ ಅನೇಕ ರೀತಿಯ ಹೊರಗಿನ, ಒಳಗಿನ ಒತ್ತಡಕ್ಕೆ ಅದು ಮಣಿಯುವಂಥದೂ ಆಗಿರುವುದು. ಹೀಗಾಗಿ ಅದು ಮಾನವನ ಸನಾತನ, ಪರಿಶುದ್ಧ, ನೈಜ ಪ್ರಕೃತಿ ಆಗಲಾರದು. ಋಷಿಗಳು ತಮ್ಮ ಕಾಣ್ಕೆಯಿಂದ ಈ ಮನಸ್ಸಿನಿಂದಲೂ ಮೇಲ್ಮಟ್ಟದಲ್ಲಿ ಸ್ವಯಂಪ್ರಕಾಶಿತ, ಸನಾತನ (eternal) ಶುದ್ಧ, ಅಮರ್ತ್ಯವಾದ ನೈಜ ಆತ್ಮ ಇರುವುದನ್ನು ಕಂಡರು; ಇಂದೊಂದೇ ಮಾನವನ ನೈಜ ಪ್ರಕೃತಿ.

ಮಾನವ ಯಾಕೆ ನೀತಿವಂತನಾಗಬೇಕು? ಅವನ ನೈಜ ಪ್ರಕೃತಿಯೇ ಪರಿಶುದ್ಧತೆ, ಅದೇ ಆತ್ಮ, ಆದ್ದರಿಂದ. ಯಾಕೆ ಆತ ಒಳ್ಳೆಯದನ್ನು ಮಾಡಬೇಕು? ಆತ್ಮ ಒಂದೇ-ಎಲ್ಲ ಜೀವಿಗಳಲ್ಲೂ ಅಡಗಿದೆ. ಯಾರಾದರೂ ಸ್ವಾರ್ಥದ ಅನೀತಿಯ ಕೆಲಸ ಮಾಡಿದರೆ ಅವನು ಅವನೇ ಆಗಿರಲು ಅಸಾಧ್ಯ; ತನ್ನ ಗೌರವವನ್ನು ಆತ ಕುಂದಿಸಿಕೊಳ್ಳುತ್ತಾನೆ. ತನ್ನ ಆತ್ಮದ ಪ್ರಭೆಯನ್ನು ಕಳೆದುಕೊಳ್ಳುತ್ತಾನೆ. ನೀತಿಯು ನಮ್ಮಿಂದ ಹೊರಗಿನ ಒಂದು ಶಕ್ತಿಯ ಹೆದರಿಕೆ, ಒತ್ತಡ ಅಥವಾ ಗುಲಾಮಗಿರಿ ಅಲ್ಲ. ಅದು ನಿಜವಾಗಿ ಮಾನವ ಏನು ಆಗಿರುವನೋ ಅದು; ನೈಜ ಅಸ್ತಿತ್ವದ, ಆತ್ಮದ ಪ್ರಭೆಯನ್ನು ಎಲ್ಲೆಡೆ, ಎಲ್ಲ ಸನ್ನಿವೇಶ-ಕಾಲದಲ್ಲಿ ಹೊರಚೆಲ್ಲುವಂತಹದು.

ಎಲ್ಲ ಬಗೆಯ ಹೆದರಿಕೆಗಳಿಂದ ನೀತಿಯನ್ನು ತಪ್ಪಿಸಿ, ಮಾನವನ ಸುಪ್ತ ದೈವಿಕತೆಯ ತಳಹದಿಯ ಮೇಲೆ ಶಕ್ತಿ ಆನಂದದ ಒರತೆಯಾಗಿ ಹಾಗೂ ಆತ್ಮದ ಎಲ್ಲ ಸಾಧ್ಯತೆಗಳನ್ನು ಸಾಕ್ಷಾತ್ಕರಿಸಿಕೊಳ್ಳುವ ಹಾದಿಯಾಗಿ ನೀತಿಯ ಹೊಸ ಸಿದ್ಧಾಂತವನ್ನು ನೀಡಿದ್ದು ವಿವೇಕಾನಂದರ, ಭಾರತದ ಕೊಡುಗೆ. ✡

# ಛತ್ರಿಯ ಚರಿತ್ರೆ

ಮಳೆಗಾಲ ಇಲ್ಲವೆ ಬಿಸಿಲು ಕಾಲ ಬಂತೆಂದರೆ ಛತ್ರಿಯ ಧೂಳು ಕೊಡವಿ ಹೊರ ತೆಗೆಯುತ್ತೇವೆ. ಅಥವಾ ಕೊಳ್ಳಲು ಅಂಗಡಿಗೆ ಹೋಗುತ್ತೇವೆ. ಈ ಕಾಲದಲ್ಲಿ ಅಂದರೆ ಮಳೆಗಾಲ ಹಾಗೂ ಬಿಸಿಲು ಕಾಲದಲ್ಲಿ ಛತ್ರಿಯ ಉಪಯೋಗ ಹೆಚ್ಚು. ಹೊರಗೆ ತೆಗೆದುಕೊಂಡು ಹೋದ ಛತ್ರಿಯನ್ನು ಮರೆಯುವುದು ಸಹ ಹೆಚ್ಚು. ಒಂದು ಅಂದಾಜಿನಂತೆ, ಈ ರೀತಿ ಛತ್ರಿಗಳನ್ನು ಬಸ್ಸು, ರೈಲು, ಹಾಗೂ ಇನ್ನಿತರ ಸ್ಥಳಗಳಲ್ಲಿ ಮರೆಯುವವರ ಸಂಖ್ಯೆ ಸುಮಾರು ಒಂದೂವರೆ ಲಕ್ಷಕ್ಕೂ ಹೆಚ್ಚು. ನಾವು ಛತ್ರಿಗಳನ್ನು ಮರೆಯಬಹುದು, ಆದರೆ ಇತಿಹಾಸ ಛತ್ರಿಗಳನ್ನು ಮರೆಯುವುದಿಲ್ಲ.

ಚರಿತ್ರೆಯಲ್ಲಿ ಶಿವಾಜಿ ಛತ್ರಪತಿಯಾಗಿದ್ದುದು ಎಲ್ಲರಿಗೂ ತಿಳಿದ ವಿಷಯವೇ. ಆದರೆ ಅವನಿಗೂ ಮೊದಲೇ ಏಶಿಯದ ಹಾಗೂ ಬೇರೆ ರಾಷ್ಟ್ರಗಳ ರಾಜರುಗಳು ಛತ್ರಿಯನ್ನು ಹೊಂದಿದ್ದರೆಂದು ತಿಳಿದುಬಂದಿದೆ. ಆದರೆ ಅವುಗಳಲ್ಲೆಲ್ಲಾ ಬರ್ಮಾದ ದೇಶ ರಾಜರಲ್ಲಿದ್ದ ಛತ್ರಿಗಳು ಬಹಳ ದೊಡ್ಡದಾಗಿದ್ದವು. ಒಬ್ಬ ಸುಲ್ತಾನನಂತೂ ತಾನು ಹೋದೆಡೆಯಲ್ಲೆಲ್ಲಾ, ರತ್ನ, ವಜ್ರ ವೈಢೂರ್ಯಗಳಿಂದ ಕೂಡಿದ ಛತ್ರಿಯನ್ನು ಕೊಂಡೊಯ್ಯುತ್ತಿದ್ದನಂತೆ. ಆ ಕಾಲದಲ್ಲಿ ಈ ಛತ್ರಿಯನ್ನು ಹೊಂದುವ ಅಧಿಕಾರ ರಾಜರಿಗೆ ಮಾತ್ರ ಸೀಮಿತವಾಗಿದ್ದುವು. ಸಾಮಾನ್ಯ ಜನರು ಇದರ ಉಪಯೋಗದಿಂದ ವಂಚಿತರಾಗಿದ್ದರು. ಈಸ್ಟ್ ಇಂಡಿಯಾ ಕಂಪನಿಯ ಉನ್ನತ ಅಧಿಕಾರಿಗಳಿಗೆ ಮಾತ್ರ ಈ ರೀತಿ ಛತ್ರಿಯನ್ನು ಹೊಂದುವ ಅಧಿಕಾರವಿತ್ತು. ಈ ಅಧಿಕಾರವನ್ನು ಅವರಿಗೆ ಗವರ್ನ್‌ರ್ ಜನರಲ್ ಕೊಡುತ್ತಿದ್ದನು.

ಪ್ರಾರಂಭದಲ್ಲಿ ಯುರೋಪ್ ದೇಶದಲ್ಲಿ ಈ ಛತ್ರಿಯನ್ನು ಸ್ತ್ರೀಯರು ಮಾತ್ರ ಉಪಯೋಗಿಸುತ್ತಿದ್ದರು. ಗಂಡಸರು ಇದನ್ನು ಉಪಯೋಗಿಸಿದಾಗ ಅವರು ಹಾಸ್ಯಕ್ಕೆ ಗುರಿಯಾಗುತ್ತಿದ್ದರು.

ಆದರೆ ಈಗ ಜಾದೂಗಾರರಿಗಾಗಿ, ದೇವಸ್ಥಾನಗಳಲ್ಲಿ ದೇವರ ತಲೆಯ ಮೇಲೆ ಹಿಡಿಯಲು, ಸರ್ಕಸ್ಸಿನಲ್ಲಿ ಉಪಯೋಗಿಸಲು, ಹೋಟೆಲ್‌ಗಳಲ್ಲಿ ನೆರಳಿಗಾಗಿ, ಆಧುನಿಕ ಸ್ತ್ರೀಯರಿಗೆ ಅವರ ಅಲಂಕಾರಕ್ಕೆ ಸರಿ ಹೊಂದುವಂತಹ ತರತರಹದ ಛತ್ರಿಗಳು, ದೊಡ್ಡದು, ಸಣ್ಣದು, ಮಡಿಚಿ ಜಂಭದ ಚೀಲದೊಳಗೆ ಇಟ್ಟು ಹೋಗುವಂತಹ ಅನೇಕ ರೀತಿಯ ಛತ್ರಿಗಳು ದೊರೆಯುತ್ತವೆ. ಜೊತೆಗೆ 'ಸೀ ಥ್ರೂ' (See through) ಛತ್ರಿಗಳಂತೂ ಈಗ ಜನಪ್ರಿಯವಾಗಿವೆ.

ಸಂಗ್ರಹ :– **ಹೆಚ್. ಆರ್. ಸತ್ಯನಾರಾಯಣ**

ಪುಣ್ಯಸ್ಮರಣೆ, ಚಿರಸ್ಮರಣೆ, ಶ್ರದ್ಧಾಂಜಲಿ
ಸವಿನೆನಪು... ಎಷ್ಟೆಲ್ಲ ಹೆಸರುಗಳು!
ನಿಮಗೆ ಹಳೆಯ ರೀತಿ ಹೇಸಿಗೆಯೆನಿಸಿದರೆ
ಇದೋ ನಿಮಗಾಗಿ ಇಲ್ಲಿ ಕೆಲ ಹೊಸ ಮಾದರಿಗಳಿವೆ.
ಬಳಸಿಕೊಳ್ಳಿ...

# ಹಾರಿಕೊಟ್ಟ ದಾರಿ

ಡಾ. ವಿಷ್ಣು ಶರ್ಮ ವನಹಳ್ಳಿ

**ನೆನಹು**

ಕೈ. ವಾ. ಶ್ರೀ ಕೊಟ್ರಬಸಪ್ಪ ಶರಣಸಂಗಪ್ಪ ಪ್ಯಾಟೀ ಶೆಟ್ರುದಲಾಲಿ ವ್ಯಾಪಾರಸ್ಥರು
ಹಳೇ ಮಂಡೀ ಪೇಟೆ— ಶಂಕರ ನಗರ

ಜನನ : ಅಕ್ಟೋಬರ ೨: ೧೮೯೫ ಮರಣ : ಅಕ್ಟೋಬರ ೨: ೧೯೭೪

ಅಂದು ನೀವ್ ಅವತರಿಸಿ ಬುವಿಗೆ ಬಂದ್ರಿ ಶರಣರಾಗಿ ನೀವು ಇಲ್ಲಿ ನಿಂದ್ರಿ
ಕಾಯಕದಿ ನೀವು ಕೈಲಾಸ ಕಂಡ್ರಿ ಬಂದದ್ದು ನೀವು ಬಳಕೊಂಡು ಉಂಡ್ರಿ

— ಮೆ. ಕೊಟ್ರಬಸಪ್ಪ ಶರಣ ಸಂಗಪ್ಪ ಪ್ಯಾಟೀಶೆಟ್ರು
ದಲಾಲಿ ವ್ಯಾಪಾರಸ್ಥರು, ಶಂಕರ ನಗರ
— ಮೆ. ಶಿವಶರಣ ದಲಾಲಿ ಅಂಗಡಿ ರವಿವಾರ ಪೇಟೆ — ಹಿರೇಹಾಳ
— ಮೆ. ಶ್ರೀಶೈಲ ಆಯಿಲ್ ಮಿಲ್ಸ್ ಮಾಳಮಡ್ಡಿ.

ಗಾಂಧೀ ಜಯಂತಿಯ ಈ ಪವಿತ್ರ ದಿನದಂದು ನಾವು ತಮ್ಮ ಆದರ್ಶಮಯ ಜೀವನದ ನೆನಪನ್ನು ತುಂಬಿದ ಹೃದಯದಿಂದ ಮಾಡಿಕೊಂಡು ತಮ್ಮ ಮಾರ್ಗದಲ್ಲಿ ತಪ್ಪದೇ ಮುನ್ನಡೆಯುತ್ತೇವೆ ಎಂದು ಪಣ ತೊಡುತ್ತೇವೆ.

—ಮಕ್ಕಳು, ಮೊಮ್ಮಕ್ಕಳು, ಸಿಬ್ಬಂದಿ ಆಪ್ತರು, ಮಿತ್ರರು.

(ಸಂಪಾದಕರ ತಿದ್ದುಪಡಿ—ನಿನ್ನೆ ಪ್ರಕಟವಾದ ಕೈ. ವಾ. ಶ್ರೀ ಕೊಟ್ರಬಸಪ್ಪ ಶರಣ ಸಂಗಪ್ಪ ಪ್ಯಾಟೀಶೆಟ್ರು - ಶಂಕರನಗರ ಇವರ ಫೋಟೋದ ಬದಲಾಗಿ ಪ್ರಮಾದವಶಾತ್ ಬೇರೊಬ್ಬರ ಫೋಟೋ ಪ್ರಕಟವಾಗಿತ್ತು. ಈ ದಿನ ಕೈ. ವಾ. ಕೊಟ್ರಬಸಪ್ಪ ಶರಣಸಂಗಪ್ಪ ಪ್ಯಾಟೀಶೆಟ್ರು ಇವರ ಸರಿಯಾದ ಫೋಟೋ ಕೊಡಲಾಗಿದೆ. ಪ್ರಮಾದಕ್ಕೆ ವಿಷಾದಿಸಲಾಗಿದೆ.)

## ಸಹಕಾರ ಮಹರ್ಷಿಗೆ ನಮನ

ಜನನ : ೧೯೨೩ ಅಕ್ಟೋಬರ ೪ ಮರಣ : ಬಸವಜಯಂತಿ, ೧೯೮೩

ದಿ. ಶಂಕರ ಅಣ್ಣಾ ಜಂಬಣ್ಣಾ ಗುಬ್ಬಿ ಸಂಸ್ಥಾಪಕರು:

೧. ಜೈಕಿಸಾನ ಸಹಕಾರಿ ಸಕ್ಕರೆ ಕಾರಖಾನೆ ನಿ, ಹಾಳಭಾವಿ ೨. ರೈತ ಬಂಧು ಪಗ್ಗ ಹಂಗಡ ಸಹಕಾರಿ ಸಂಘ ನಿಯಮಿತ. ೩. ಕಾಮಧೇನು ಹಾಲಿನ ಉತ್ಪಾದಕರ ಸಹಕಾರಿ ಸಂಘ ನಿ. ೪. ಹಾಳಭಾವಿ ತಾಲೂಕಾ ಖಾದಿ ಗ್ರಾಮೋದ್ಯೋಗ ಸಂಘ ನಿ. ೫. ಹಾಳಭಾವಿ ಹೊಸ್ನೂರು ಸಹಕಾರಿ ಸ್ಪಿನಿಂಗ್ ಮತ್ತು ಜಿನಿಂಗ್ ಸೊಸ್ಯಾಟಿ-ಲಿ. ೬. ಹಾಳಭಾವಿ ಸಹ-ಕಾರಿ ಕಾಟನ್ ಸೇಲ್ ಸೊಸ್ಯಾಟಿ-ಲಿ

ಸಹಕಾರಕ್ಕಾಗಿ, ಸಹಕಾರ್ಯಕ್ಕಾಗಿ ತಾವೊಂದು ಹೆಸರಾಗಿದ್ದಿರಿ. ನೀವು ಮಾಡಿದ್ದು ಸಹಕಾರವಾಯಿತು, ನುಡಿದದ್ದು ಸಹಕಾರವಾಯಿತು. ನೀವು ಸಹಕಾರ ಮಹರ್ಷಿಗಳಾದಿರಿ. ಯುಗಾದಿಯ ಈ ಪರ್ವ ಕಾಲದಲ್ಲಿ ನಿಮ್ಮ ನೆನಪು ತನು ತುಂಬಿ, ಮನತುಂಬಿ ಮತ್ತೊಂದು ಹೆಜ್ಜೆ ಇಡಲು ನಮಗೆ ಸ್ಫೂರ್ತಿದಾಯಕವಾಗಿದೆ. ಅಲ್ಲದೆ......

## ಹಾಕಿಕೊಟ್ಟ ದಾರಿ

ದಿ. ಶ್ರೀಮತಿ ಖಾತುನಬಿ ಖಾದರಸಾಬ ಬಾಗವಾನ, ಜನಾಬ ಖಾದರಸಾಬ ಅಲ್ಲಿ-ಸಾಬ ಬಾಗವಾನ ಕಾಯಿಪಲ್ಯೆ ಹೂ ಹಣ್ಣುಗಳ ದಲಾಲರು ಮಾರ್ಕೆಟ್ ರಾಯಗಡ ಇವರ ಪತ್ನಿ

ಜನನ : ಅಕ್ಟೋಬರ ೨೦ ೧೯೧೮

ಮರಣ : ೧೯೮೩

ತಾವು ದೈವಾಧೀನರಾಗಿ ಇಂದಿಗೆ ಸರಿಯಾಗಿ ಒಂದು ವರುಷವಾಯಿತು. ತುಂಬಿದ ಹಡಗದಂತೆ ಇದ್ದ ನಮ್ಮ ಸಂಸಾರವನ್ನು ಎಚ್ಚರಿಕೆಯಿಂದಲೂ ಪ್ರೇಮ ವಿಶ್ವಾಸ-ದಿಂದಲೂ ನಡೆಸುತ್ತಿದ್ದ ನಿಮ್ಮ ನೆನಪು ಬಾರದೆ ಒಂದು ದಿನವೂ ಕಳೆದಿಲ್ಲ. ನೀವು ಹಾಕಿಕೊಟ್ಟ ದಾರಿಯಲ್ಲಿ ನಾವೆಲ್ಲರೂ ನಡೆಯುತ್ತಿದ್ದೇವೆ ಹಾಗೂ ಮುಂದೆಯೂ ನಡೆಯುತ್ತೇವೆ ಎಂದು ಪಣ ತೊಡುತ್ತೇವೆ.

ತಮ್ಮ

೮ ಜನ ಗಂಡುಮಕ್ಕಳು

೮ ಜನ ಹೆಣ್ಣುಮಕ್ಕಳು

ನೂರಕ್ಕೂ ಹೆಚ್ಚಿನ ಮೊಮ್ಮಕ್ಕಳು ಹಾಗೂ

ಮರಿಮಕ್ಕಳು ಮತ್ತು

ವಿಶಾಲವಾದ ಬಾಗವಾನ ಪರಿವಾರ.

## ಪುಣ್ಯ ಸ್ಮರಣೆ

ದಿ. ಶ್ರೀ ಪಿ. ಬಿ. ಕಾಶಿವಾಲೆ

ಸಂಸ್ಥಾಪಕರು, ನ್ಯೂ ಪಾಪ್ಯುಲರ ಜ್ಯುವೆಲರ್ಸ್ ಸರಾಫರು ಹಾಗೂ ಬಡ್ಡೀ ವ್ಯಾಪಾರಸ್ಥರು ಸಂಭಾಜಿ ಸ್ಟ್ರೀಟ್ ಬೆಳಗಾಂವ

ಜನನ : ೧೯೨೩ ಜುಲೈ ೮

ಮರಣ : ಮಹಾವೀರ ಜಯಂತಿ ೧೯೭೯

ತಾವು ಗತಿಸಿ ಹೋಗಿ ಇಂದಿಗೆ ಆರು ವರುಷಗಳು ಸಂದರೂ ತಮ್ಮ ನೆನಪು ಪದೇ ಪದೇ ಆಗುತ್ತದೆ. ಭಗವಾನ್ ಮಹಾವೀರನ ಜಯಂತಿ ಬರುತ್ತಲೇ ತಾವೇ ಎದುರು ಬಂದು ನಿಂತಂತೆ ಭಾಸವಾಗುತ್ತದೆ. ತಾವು ಕಲಿಸಿದ ವ್ಯವಹಾರ ಕುಶಲತೆ, ಅವಿರತ ಪರಿಶ್ರಮ, ಹಾಗೂ ದುಂದು ವೆಚ್ಚರಹಿತ ನಿರಾಡಂಬರ ಜೀವನದ ಪಾಠಗಳನ್ನು ನಾವೆಂದೂ ಮರೆಯಲಾರೆವು. ವೃತ್ತಿಯಲ್ಲಿಯ ಪ್ರಾಮಾಣಿಕತೆಯಿಂದಾಗಿ ಇದೀಗ ನಮ್ಮ ಫರ್ಮು ೩೮ ನೆಯ ವರುಷದಲ್ಲಿ ಭರದಿಂದ ಪದಾರ್ಪಣೆಮಾಡುತ್ತಲಿದೆ. ನಮ್ಮ ಫರ್ಮಿನ ಸಿಸ್ಟರ್ ಕನ್ಸರ್ನ ಎಂದು ಮಾಡರ್ನ್ ಜ್ಯೂವೆಲರಿ – ಗೋಲ್ಡ್ ಪ್ಲೇಟ್‌ನ ಆಭರಣದ ವಿಭಾಗವನ್ನು ಆರಂಭಿಸಿದ್ದೇವೆ ಹಾಗೂ ತಮ್ಮ ಆತ್ಮಕ್ಕೆ ಶಾಂತಿ ಕೋರುತ್ತೇವೆ.

ಪತ್ನಿ, ಮಕ್ಕಳು,

ಸೊಸೆಯಂದಿರು, ಮೊಮ್ಮಕ್ಕಳು.

ಕುಂಭಕರ್ಣ ಪಶು ಆಹಾರ ಸಹಕಾರಿ ಮಿಲ್ಸ್ ನಿಯಮಿತ ಇವರ ಉದ್ಘಾಟನೆಯನ್ನು ಭಾವಪೂರ್ಣ ಶ್ರದ್ಧಾಂಜಲಿಯೊಂದಿಗೆ ಇಂದು ಆರಂಭಿಸುತ್ತಿದ್ದೇವೆಂದು ಘೋಷಿಸಲು ಸಂತೋಷವೆನಿಸುತ್ತದೆ. ನಿಮ್ಮ ಕೃಪೆ ಸದಾ ನಮ್ಮ ಮೇಲಿರಲಿ ಹಾಗೂ ನಿಮ್ಮ ಆತ್ಮಕ್ಕೆ ಶಾಂತಿ ಸಿಗಲಿ. ಇಂತು ಬಸವ ಜಯಂತಿ ನೆನಪು.

ತಮ್ಮ
ಜಯಂತ ಶಂಕರ ಅಣ್ಣಾ ಗುದ್ಲಿ ಮ್ಯಾ. ಡ್ಯಾರೆಕ್ಟರ್
೧. ಸೌ. ಶಾಲಿನಿತಾಯಿ ಶಂಕರ ಅಣ್ಣಾ ಗುದ್ಲಿ ಚೇಅರಮನ್
೨. ಸೌ. ಮಾಲತಿ ಬಾಯಿ ವಸಂತರಾವ ಜಾಕಿ (ಮಗಳು) ವಾ. ಚೇಅರಮನ್
ಡ್ಯಾರೆಕ್ಟರ್ಸ :
೩. ವಸಂತರಾವ ಅಪ್ಪಣ್ಣಾ ಜಾಕಿ ೪. ಚಂಬಣ್ಣಾ ಶಂಕರ ಅಣ್ಣಾ ಗುದ್ಲಿ
೫. ಮಲಿಕಾಜಿ ಶಂಕರ ಅಣ್ಣಾ ಗುದ್ಲಿ ೬. ಮಾರುತಿ ಶಂಕರ ಅಣ್ಣಾ ಗುದ್ಲಿ
೭. ದಿನೇಶ ಶಂಕರ ಅಣ್ಣಾ ಗುದ್ಲಿ ೮. ವಿನಯಾ ಶಂಕರ ಅಣ್ಣಾ ಗುದ್ಲಿ
೯. ಫಕೀರಪ್ಪಾ ಭರಮಪ್ಪಾ ಪೂಜಾರ (ಆಳು)

# ಮಹಾನ್ ಪರಂಪರೆಯ ದ್ರಷ್ಟಾರ

ದಿವಂಗತ ಶ್ರೀ. ಮಾಂಗೀಲಾಲ ಚುನೀಲಾಲ ಬೋರಾ

ಜನನ : ೧೮೫೦
ಮರಣ : ತಿಲಕ ಜಯಂತಿ ೧೯೪೧
ಸ್ಥಾಪಕರು : ನ್ಯೂ ಭರೋಸಾ ಮಿಲ್ಸ್ ಮಾಳಮಾರುತಿ

ಅವರೊಬ್ಬ ಮಹಾನ್ ದ್ರಷ್ಟಾರರಾಗಿದ್ದರು. ಕನಸುಗಾರರಾಗಿದ್ದರು. ಚತುರ ಯೋಜಕರೂ ಆಗಿದ್ದರು. ಕಷ್ಟ ಸಹಿಷ್ಣುಗಳೂ ಆಗಿದ್ದರು. ಒಂದೇ ಮಾತಿನಲ್ಲಿ ಹೇಳುವದಾದರೆ ಅವರೊಬ್ಬ ಶಿಸ್ತಿನ ಶಿಪಾಯಿ ಆಗಿದ್ದರು. ಅಂದು ಕೇವಲ ಕೆಲ ಸಾವಿರ ರೂಪಾಯಿಗಳ ಭಾಂಡವಲದಿಂದ ಆರಂಭಿಸಲಾಗಿದ್ದ ಮಿಲ್ಲು ಇಂದು ಕೋಟಿ ಕೋಟಿ ಜನರ ಮನವರಳಿಸುವ ಸುಂದರ ಮಾಳಮಾರುತಿ ಬಟ್ಟೆಗಳ ತಯಾರಿಕೆಯಲ್ಲಿ ಅಗ್ರಣಿಯಾಗಿದೆ. ಒಣನೆಲದಲ್ಲಿ ಇಂದು ಮಾವು ಚಿಗುರಿದೆ. ಕೋಗಿಲೆ ಹಾಡಿದೆ. ಹೃದಯ ಹಿಗ್ಗಿದೆ. ವಿವಿಧ ಬಣ್ಣಗಳ ಬೆಡಗಿನ ಬಟ್ಟೆಯ ನಿರ್ಮಿತಿಯನ್ನು ನೋಡುತ್ತಿರುವಾಗ ಆ ಮಹಾನ್ ಪರಂಪರೆಯ ದ್ರಷ್ಟಾರನ ನೆನಪು ಬಾರದೆ ಹೋಗುವದಿಲ್ಲ. ಲೋಕಮಾನ್ಯ ತಿಲಕರ ಜಯಂತಿಯ ಈ ಶುಭ ದಿನದಂದು ಆ ದ್ರಷ್ಟಾರನಿಗೆ ಪ್ರಣಾಮಗಳು. ನಿಮ್ಮ ಬಟ್ಟೆಯ ಅನೇಕ ಬೇಡಿಕೆಗಳಿಗೆ ನಮ್ಮ ಒಂದೇ ಭರವಸೆ.

ನ್ಯೂ ಭರೋಸಾ ಮಿಲ್ಸ್
ಮಾಳಮಾರುತಿ

## ಪುಣ್ಯ ಸ್ಮರಣೆ

ದಿ. ಶ್ರೀ ರಾವಬಹಾದ್ದೂರ ಶಿವಲಿಂಗಪ್ಪನವರು ಪಿಡ್ಡಿ

ಜನನ : ೨೦ ಜೂನ್ ೧೮೯೦

ಮರಣ : ೨೧ ಜುಲೈ ೧೯೭೦

ಗಾಂಧೀಜಿಯ ಚಳುವಳಿಯ ಕಾಲದಲ್ಲಿಯೂ ಬ್ರಿಟಿಶರೊಂದಿಗೆ ಹೆಗಲಿಗೆ ಹೆಗಲು ಹಚ್ಚಿ ನಿಮ್ಮ ತತ್ವಾದರ್ಶಗಳನ್ನು ಮೆರೆದಿರಿ. ರಾವ ಬಹಾದ್ದೂರರೆಂಬ ಪದವಿ ಬ್ರಿಟಿಶರಿಂದಲೇ ಪಡೆದು ಲೋಕಮಾನ್ಯರಾದಿರಿ. ಕಾಲ ಬಂದಾಗ ಕಾಂಗ್ರೆಸಿನಲ್ಲೂ ದುಡಿದಿರಿ. ಉತ್ತಮೋತ್ತಮ ಸ್ಥಾನಗಳನ್ನು ಅಲಂಕರಿಸಿ ಸಭಾಭೂಷಣ ರಾದಿರಿ. ವ್ಯವಹಾರ, ರಾಜಕಾರಣಗಳ ಸುಂದರ ಸಮನ್ವಯ ಸಾಧಿಸಿದಿರಿ. ನಿಮ್ಮ ಪುಣ್ಯ ಸ್ಮರಣೆ ಇಂದಿಗೂ ನಮಗೆ ದಾರಿದೀಪ ವಾಗಿದೆ.

ಇವರಿಂದ ಪ್ರಕಟಿತ

ಮಗ, ಸೊಸೆ,<br>
ಮೊಮ್ಮಕ್ಕಳು,<br>
ಮರಿಮಕ್ಕಳು.

## ಮಹಾನ್ ಆತ್ಮನ ನೆನಪು

ದಿ. ೧೫-೮-೧೯೬೪.

ದಿ. ಘನಶ್ಯಾಮದಾಸಜಿ ಪರಗೋವಿಂದ ದಾಸಜಿ ಓರ್ಝಾ; ಸಂಸ್ಥಾಪಕರು—<br>
ಆನೆ ಛಾಪ ಲವಂಗಿ ಬೀಡಿ ಹಾಗೂ ಒಂಟೆ ಛಾಪ ಸ್ಪೇಶಲ್ ಸಣ್ಣ ಬೀಡಿ<br>
ಮು. ಪೋ. ಕುರ್ಬೆಟ ಜಿಲ್ಲಾ ದ. ಮ.

ಜನನ : ಆಗಸ್ಟ ೧೫, ೧೮೮೭. ಮರಣ : ಸ್ವಾತಂತ್ರ್ಯ ದಿನ ೧೯೪೭.

ಸ್ವಾತಂತ್ರ್ಯೋತ್ಸವದ ಇಂದಿನ ಪುಣ್ಯ ದಿನದಂದು ನಿಮ್ಮ ಪವಿತ್ರ ನೆನಪನ್ನು ನತಮಸ್ತಕರಾಗಿ ಮಾಡಿಕೊಳ್ಳುತ್ತಿದ್ದೇವೆ. ದೇಶವು ಸ್ವಾತಂತ್ರ್ಯೋತ್ಸವದ ಸಂಭ್ರಮದಲ್ಲಿ ನಲಿದಾಡುತ್ತಿದ್ದಾಗಲೇ ದೇಶದ ಬೀಡಿ ಉದ್ಯಮದ ಧ್ರುವತಾರೆಯಾದ ತಾವು ಪರಲೋಕವಾಸಿಗಳಾದುದನ್ನು ನಾವು ಹೇಗೆ ತಾನೇ ಮರೆತೇವು? ಈ ಮಧ್ಯೆ ಗತಿಸಿದ ಕಾಲದಲ್ಲಿ ಒಂದು ದಿನವೂ ಒಂದು ಕ್ಷಣವೂ ನಿಮ್ಮ ನೆನಪಾಗದೆ ಹೋಗಿಲ್ಲ. ನಿಮ್ಮ ದೇಶಪ್ರೇಮ, ಸಮಾಜ ಸೇವಾಬುದ್ಧಿ, ಸಹೃದಯತೆ, ನಿರಾಡಂಬರ ಗುಣ, ಕಷ್ಟ ಸಹಿಷ್ಣುತೆಗಳನ್ನು ನಾವು ಚಾಚೂ ತಪ್ಪದೆ ಅನುಸರಿಸಿಕೊಂಡು ಬಂದಿದ್ದೇವೆ. ನೀವು ಹಾಕಿಕೊಟ್ಟ ದಾರಿ ನಮಗೆ ಇಂದಿಗೂ ಮಾರ್ಗ ದರ್ಶಕವಾಗಿದೆ.

ನಿಮ್ಮ ಆತ್ಮೀಯರಾದ,<br>
ಮ. ಆನೆ ಛಾಪ ಲವಂಗಿ ಬೀಡಿ: ಕುರ್ಬೆಟ (ಹಳದಿ ದಾರ ೨೦ ಬೀಡಿಗಳು ೫೦ ಪೈಸೆ)<br>
ಮ. ಒಂಟೆ ಛಾಪ ಸ್ಪೇಶಲ್ ಬೀಡಿ: ಕುರ್ಬೆಟ (ಕೆಂಪು ದಾರ ೨೦ ಬೀಡಿಗಳು ೪೦ ಪೈಸೆ)<br>
ಮೆ. ತ್ರಿಮೂರ್ತಿ ಸುಗಂಧಿ ಜರ್ದಾ–ಕುರ್ಬೆಟ ಪ್ಲಾಸ್ಟಿಕ್ ಡಬ್ಬಿ ರೂ. ೧–೫೦ ಪೈಸೆ<br>
ಮೆ. ಶಂಖ ಮಾರ್ಕ ದಿಲ್‌ಖುಷ್ ನಸ್ಯ ಕುರ್ಬೆಟ<br>
(ಸಣ್ಣದು ಒಂದು ರೂಪಾಯಿ ದೊಡ್ಡದು ಎರಡು ರೂಪಾಯಿ)

ಹಾಗೂ ಪತ್ನಿ, ಮಕ್ಕಳು, ಮೊಮ್ಮಕ್ಕಳು ಎಲ್ಲ ಫರ್ಮುಗಳ ಕಾರ್ಮಿಕರು, ಅಧಿಕಾರಿಗಳು, ಬಂಧು ಬಳಗದವರು ಹಾಗೂ ನಮ್ಮ ಅಸಂಖ್ಯಾತ ಬೀಡಿ ಸೇದುವ ನಸ್ಯ ಏರಿಸುವ ಜರ್ದಾ ತಿನ್ನುವ ಅಭಿಮಾನೀ ಬಳಗದವರು.

(ಮಲ್ಲಿಗೆಯ ಹೂವುಗಳ ಹಾರವನ್ನು ಹಾಕಿದ ಶ್ರೀಯುತರ ಫೋಟೋ ಬ್ಲಾಕಿನ ಕೆಳಗಡೆಯಲ್ಲಿ ಮೇಲ್ಕಂಡ ಪ್ರಕಟಣೆ ಇರುವದಾಗಿ ಓದುಗರು ಭಾವಿಸಬೇಕು—ಲೇ.)

◈ ಅನಂತ ಜ್ಯೋತಿಷಿ

ಅದ್ಭುತ ಸ್ಮಾರಕ

# ಗೇಟ್‌ವೇ ಆರ್ಚ್

ಅಮೇರಿಕದ ಮಿಸ್ಸೂರಿ ರಾಜ್ಯದ ಸೇಂಟ್ ಲೂಯಿ ನಗರದ ಅಂಚಿಗುಂಟ ಹರಿಯುತ್ತದೆ ಮಿಸಿಸಿಪಿ. ಆ ಮನೋಲ್ಲಾಸಕರ ದೃಶ್ಯಕ್ಕೆ ಹೆಚ್ಚಿನ ಮೆರಗು ನೀಡಿದೆ ಗೇಟ್‌ವೇ ಆರ್ಚ್ ಸ್ಮಾರಕ. ವಿಮಾನಗಳು ಸೇಂಟ್‌ಲೂಯಿಯಲ್ಲಿ-ಳಿಯುವಾಗ ಈ ಕಮಾನಿನೊಳಗಿಂದಲೇ ರನ್‌ವೇ ತಲಪುತ್ತವೆಂದರೆ ಈ ಸ್ಮಾರಕ ಎಷ್ಟೆತ್ತರ ಇದೆಯೆಂಬುದರ ಕಲ್ಪನೆಯುಂಟಾದೀತು.

ಅಮೇರಿಕದ ರಾಷ್ಟ್ರೀಯ ಸ್ಮಾರಕವಾಗಿರುವ ಈ ಆರ್ಚ್ ಒಂದು ಸುಂದರ ಕಲ್ಪನೆಯ, ಸಾಹಸ ಪ್ರತೀಕದ ಮತ್ತು ಕಲಾನೈಪುಣ್ಯದ ಉದಾಹರಣೆಯಾಗಿದೆ. ಪೂರ್ತಿ ಸ್ಟೇಯಿನ್‌ಲೆಸ್ ಸ್ಟೀಲ್‌ನಿಂದ ನಿರ್ಮಾಣಗೊಂಡ ಇದನ್ನು 'ಗೇಟ್ ವೇ ಟು ದಿ ವೆಸ್ಟ್' ಅಥವಾ ಪಶ್ಚಿಮದ ಮಹಾದ್ವಾರವೆನ್ನುತ್ತಾರೆ ಇಲ್ಲಿಯ ಜನ. ಇದರ ಎತ್ತರ ಭೂಮಿಯಿಂದ ೬೩೦ ಅಡಿಗಳು.

ಜಗತ್ತಿನ ಕೆಲವು ಪ್ರಮುಖ ರಾಷ್ಟ್ರೀಯ ಸ್ಮಾರಕಗಳ ಪಟ್ಟಿಯಲ್ಲಿ ಈ ಗೇಟ್‌ವೇಗೆ ಮೊದಲ ಸ್ಥಾನ. ಆಧುನಿಕ ವಿಜ್ಞಾನದ ಕೌಶಲಗಳು ಇದರ ನಿರ್ಮಾಣಕ್ಕೆ ಕಾರಣವಾಗಿವೆ.

ಎರಡುನೂರು ವರ್ಷಗಳ ಹಿಂದಿನ ಮಾತು. ಕೆಲವು ಸಾಹಸಿಗಳು ಮಿಸಿಸಿಪಿ ನದಿಯ ಪಶ್ಚಿಮ ಕ್ಷೇತ್ರವನ್ನು ಸುಧಾರಣೆ ಮಾಡಿ ಅಲ್ಲಿಯೇ ವಾಸಿಸತೊಡಗಿದರು. ಅವರ ಆ ಮಹತ್ಕಾರ್ಯದ ಸ್ಮರಣೆಗೆಂದೇ ಈ ಕಮಾನು ರಚಿಸಲ್ಪಟ್ಟಿತು. ಆ ಜನರ ಪರಿಶ್ರಮ ಹಾಗೂ ದೃಢ ಸಂಕಲ್ಪಕ್ಕೆ ದ್ಯೋತಕ ಈ ದೃಢ ಲೋಹದ ಸ್ಮಾರಕ.

ಈ ಸ್ಮಾರಕ ನಿರ್ಮಾಣಗೊಂಡ ಜಾಗದಲ್ಲಿ ೧೯೩೩ರಲ್ಲಿ ಲೂಥರ್ ಎಲಿಸ್ಮಿಥ್‌ರ ವಿಶೇಷ ಪರಿಶ್ರಮದಿಂದ ಮಿಸಿಸಿಪಿ ನದಿ ದಂಡೆಯಲ್ಲಿ ಉದ್ಯಾನವು ನಿರ್ಮಾಣವಾಯಿತು. ೧೯೩೫ನೇ ಇಸವಿಯಲ್ಲಿ ಅಲ್ಲಿಯ ನಾಗರಿಕರು ಸ್ಮಾರಕದ ಯೋಜನೆ ಹಾಕಿಕೊಂಡರು. ಅಮೇರಿಕ ಕಾಂಗ್ರೆಸ್ ಇದರ ಖರ್ಚಿಗಾಗಿ ಮೂರು ಕೋಟಿ ಡಾಲರುಗಳನ್ನು ಕೊಡಬೇಕೆಂದು ನಿರ್ಧಾರವಾದಾಗ ಈ ಯೋಜನೆ ತೂಗುಯ್ಯಾಲೆಯಲ್ಲಿ ಬಿತ್ತು.

೧೯೫೬ರಲ್ಲಿ ಅಮೇರಿಕದ ರಾಷ್ಟ್ರಪತಿಯಾಗಿದ್ದ ಐಸೆನ್‌ಹಾವರ್ ೧೭.೭೫ ಕೋಟಿ ರೂಪಾಯಿಗಳಷ್ಟು ಹಣವನ್ನು ಮಂಜೂರು ಮಾಡಿದರು.

(ಸಾಧಾರ)

ಲೂಥರ್ ಸ್ಮಿಥ್ ರೇ ಈ ಯೋಜನೆಯಲ್ಲಿ ಪ್ರಮುಖ ಪಾತ್ರವಹಿಸಿದವರು. ಅವರು ಸ್ಮಾರಕಕ್ಕಾಗಿ ಅನೇಕ ರೂಪರೇಷೆಗಳನ್ನು ಮಾಡಿದರು. ಅಲ್ಲದೇ ಸ್ಮಾರಕದ ರೂಪರೇಷೆ ತಯಾರಿಸಿ ಕೊಟ್ಟವರಿಗೆ ಪ್ರಥಮ ಪುರಸ್ಕಾರವೆಂದು ೫೦ ಸಾವಿರ ಡಾಲರ್ ಹಾಗೂ ದ್ವಿತೀಯ ಪುರಸ್ಕಾರವೆಂದು ೨೦ ಸಾವಿರ ಡಾಲರ್‌ಗಳನ್ನೂ ಘೋಷಿಸಿದರು. ೧೦ ಸಾವಿರ ಡಾಲರುಗಳ ಸಮಾಧಾನಕರ ಬಹುಮಾನವೂ ಇತ್ತು.

ಅಮೇರಿಕದ ವಾಸ್ತುಶಿಲ್ಪಿ ಈರೋ ಸಾರಿಸೇವರ್ ನಿರ್ಮಿಸಿದ ರೂಪರೇಷೆಗೆ ಪ್ರಥಮ ಪುರಸ್ಕಾರ ದೊರೆಯಿತು.

೧೯೬೨ರ ಮಾರ್ಚ್ ತಿಂಗಳಲ್ಲಿ ಈ ಸ್ಮಾರಕದ ನಿರ್ಮಾಣ ಕಾರ್ಯ ಪ್ರಾರಂಭವಾಯಿತು. ಇದಕ್ಕಾಗಿ ೧೧.೫ ಕೋಟಿ ರೂಪಾಯಿಗ ಗುತ್ತಿಗೆಯನ್ನು ಸೇಂಟ್ ಲೂಯಿಯ ಮೆಕ್‌ಡೊನಾಲ್ಡ್ ಕನ್‌ಸ್ಟ್ರಕ್ಶನ್ ಕಂಪನಿಗೆ ನೀಡಲಾಯಿತು. ಅವರು ಕಮಾನಿನ ಹೊರ ಆವರಣಕ್ಕೆ ಸ್ಟೀಲ್ ಹಾಕಲು ಡೆಸ್‌ಮಾಯಿನ್ಸ್ ಸ್ಟೀಲ್ ಕಂಪನಿಗೆ ನೀಡಿದರು.

ಆದರೆ ಮುಂದೆ ಅನಿಷ್ಟಗಳು ದಾಳಿಯಿಟ್ಟವು. ಅನೇಕ ಸಮಸ್ಯೆಗಳು ಎದುರಾದವು. ನಿರ್ಮಾಣ ಕಾರ್ಯ ೮೭೫ ದಿನಗಳಲ್ಲಿ ಮುಗಿಯಬೇಕೆಂದು ನಿಶ್ಚಯಿಸಲಾಗಿತ್ತು. ಅದರಲ್ಲಿ ಸಾಮುಗ್ರಿಗಳ ಸಾಗಾಟಕ್ಕಾಗಿ ೧೨೫ ದಿನಗಳು.

೬೩೦ ಅಡಿ ಎತ್ತರದ ಈ ಅಖಂಡ ಲೋಹದ ಕಮಾನನ್ನು ಹೇಗೆ ಸಾಗಿಸಿದ್ದಾರು? ಹೇಗೆ ನಿಲ್ಲಿಸಿದ್ದಾರು? ಗೇಟ್‌ವೇ ಆರ್ಚ್ ಹಿಂದೆ



ಭೂಗತ ಸಂಗ್ರಹಾಲಯವೊಂದಿದೆ– ಮ್ಯೂಸಿಯಂ ಆಫ್ ವೆಸ್ಟ್‌ವರ್ಡ್ ಎಕ್ಸ್‌ಪಾನ್‌ಶನ್ ಎಂದು ಅದರ ಹೆಸರು. ಇಲ್ಲಿ ೧೨ ಭೂಗತ ಬೀದಿಗಳೂ ಎರಡು ಭೂಗತ ಚಿತ್ರಮಂದಿರಗಳೂ ಇವೆ.

ಈ ಸ್ಮಾರಕದ ಪರ್ಯವೇಕ್ಷಣ ಮಂಚ ೬೫ ಅಡಿ ಉದ್ದ, ಏಳು ಅಡಿ ಅಗಲವಿದೆ. ಇದರಲ್ಲಿ ಹೊರಗೆ ನೋಡಲು ೩೨ ಚಿಕ್ಕ ಚಿಕ್ಕ ಕಿಡಕಿಗಳಿವೆ. ಸ್ಟೇಯಿನ್‌ಲೆಸ್ ಸ್ಟೀಲ್ ಕಂಭಗಳ ಕಮಾನಿನ ಒಳಗೆ ಮೂರು ಬಗೆಯ ಸಾಧನಗಳಿವೆ.

೨೦೦ ಅಡಿ ಎತ್ತರದ ಮೇಲೆ ಗೇಟ್‌ವೇ ಆರ್ಚ್ ಗೋಡೆಗಳ ಹೊರಭಾಗದ ಮೇಲೆ ಕಾಲು ಇಂಚು ದಪ್ಪದ ಸ್ಟೀಲ್ ಪ್ಲೇಟುಗಳಿವೆ. ಗೋಡೆಯ ಒಳಗೆ ಮುಕ್ಕಾಲು ಇಂಚು ದಪ್ಪದ ಕಾರ್ಬನ್ ಸ್ಟೀಲ್ ಪ್ಲೇಟುಗಳಿವೆ. ಭೂಮಿಯ ಮೇಲೆ ಗೋಡೆ ಮೂರು ಅಡಿ ದಪ್ಪವಿದ್ದು ೪೦೦ ಅಡಿ ಎತ್ತರದ ನಂತರ ಏಳೂಕಾಲು ಅಡಿ ದಪ್ಪವಿದೆ.

ಈ ಗೇಟ್‌ವೇ ಆರ್ಚ್ ವಾಸ್ತುಶಿಲ್ಪಿಗಳ ಅಭಿಪ್ರಾಯದಂತೆ ಇದರ ಆಯುಸ್ಸು ೧೦೦೦ ವರ್ಷಗಳು. ಅಂದರೆ ಮುಂಬರುವ ೧೦-೧೨ ಪೀಳಿಗೆಗಳಿಗೆ ಇದು ಅತ್ಯಂತ ಮಹತ್ವದ ಪ್ರಾಚೀನ ಸ್ಮಾರಕವಾಗಿಬಿಡುತ್ತದೆ.



ಸಿಸಿಯನ್‌ನ ಪ್ರಸಿದ್ಧ ಶಿಲ್ಪಿ ಪೋಲಿಕ್ಲಿಟಸ್. ಒಂದೇ ರೀತಿಯ ಎರಡು ಪ್ರತಿಮೆಗಳನ್ನು ಒಮ್ಮೆ ಆತ ಕೆತ್ತಲಾರಂಭಿಸಿದ. ಒಂದು ಪ್ರತಿಮೆಯನ್ನು ಸಾರ್ವಜನಿಕ ಸ್ಥಳದಲ್ಲಿ ಕೆತ್ತುತ್ತಿದ್ದ, ಇನ್ನೊಂದು ಪ್ರತಿಮೆಯನ್ನು ತನ್ನ ಮನೆಯಲ್ಲೇ ಕೆತ್ತುತ್ತಿದ್ದ.

ಗುಟ್ಟಾಗಿ ತನ್ನ ಮನೆಯಲ್ಲೇ ಕೆತ್ತುತ್ತಿದ್ದ ಪ್ರತಿಮೆಯ ನಿರ್ಮಾಣಕ್ಕೆ ತನ್ನ ಅಂತಃಪ್ರೇರಣೆ, ಸಹಜಶಕ್ತಿ ಸಾಮರ್ಥ್ಯ ಪ್ರತಿಭೆಗಳ ಮೇರೆಗೆ ನಡೆದುಕೊಳ್ಳುತ್ತಿದ್ದ. ಆದರೆ ಸಾರ್ವಜನಿಕ ಸ್ಥಳದಲ್ಲಿ ತಾನು ಕೆತ್ತುತ್ತಿದ್ದ ಪ್ರತಿಮೆಗೆ ಸಾರ್ವಜನಿಕರು ಪ್ರತಿಕ್ರಿಯಿಸುತ್ತಿದ್ದಂತೆ, ವಿಮರ್ಶಿಸುತ್ತಿದ್ದಂತೆ, ಅವರ ಇಚ್ಛೆಯ ಮೇರೆಗೆ ಬದಲಾವಣೆ ಮಾಡುತ್ತ ಹೋದ!

ಕೊನೆಗೆ ಎರಡು ಪ್ರತಿಮೆಗಳೂ ಪೂರ್ಣಗೊಂಡಾಗ, ಅವುಗಳನ್ನು ಸಾರ್ವಜನಿಕ ಸ್ಥಳದಲ್ಲಿ ಒಂದರ ಪಕ್ಕ ಇನ್ನೊಂದು ಪ್ರತಿಮೆಯನ್ನಿಟ್ಟು ಪ್ರದರ್ಶಿಸಿದ.

ಸಾರ್ವಜನಿಕ ಸ್ಥಳದಲ್ಲಿ ನಿರ್ಮಿಸಿದ ಪ್ರತಿಮೆಯನ್ನು ತುಂಬಾ ತೆಗಳಲಾಯಿತು. ಆದರೆ ಅವನು ಗುಟ್ಟಾಗಿ ನಿರ್ಮಿಸಿದ ಪ್ರತಿಮೆಯನ್ನು ಮುಕ್ತಕಂಠದಿಂದ ಹಾಡಿ ಹೊಗಳಲಾಯಿತು.

ಆತನ ಪ್ರತಿಭೆಗೆ ಕರ್ತೃತ್ವ ಶಕ್ತಿಗೆ ಸಂದ ಸನ್ಮಾನ ಇದು.

ಆಗ ಪೊಲಿಕ್ಲಿಟಸ್,

"ಅಥೀನಿಯನ್ ಜನರೇ ! ನೀವು ತೆಗಳಿದ ಪ್ರತಿಮೆಯೇ ನಿಮ್ಮ ಕೃತಿ, ನೀವು ಹೊಗಳು-ತ್ತಿರುವ ಪ್ರತಿಮೆಯೇ ನನ್ನ ಕೃತಿ!" ಎಂದು ಹೇಳಿದ.

ಸಂಗ್ರಹ : ಎಸ್. ವಿಶ್ವನಾಥ

– ೮೩ –

# ಮಾಹಿತಿಯ ಮಾಹಿತಿ, ಸಕ್ಕರೆಯ ಚೀನೀತನ

ಹಿಂದುಸ್ತಾನೀ ಮೂಲಕ, ಮರಾಠಿ ಮೂಲಕ ಅಥವಾ ನೇರವಾಗಿ ಕನ್ನಡಕ್ಕೆ ಬಂದ ಅರಬ್ಬೀ ಶಬ್ದಗಳು ಸಾವಿರಾರು. ಕೆಲವೊಮ್ಮೆ ಅವು ಪರಕೀಯ ಶಬ್ದಗಳೆಂದು ನಮಗೆ ಸಹಸಾ ಗೋಚರಕ್ಕೇ ಬರುವದಿಲ್ಲ. **ಮಾಹಿತಿಯನ್ನೇ** ತೆಗೆದುಕೊಳ್ಳಿ. ಇದು ನಮಗೆ ಮರಾಠಿಯಿಂದ ಬಂದದ್ದು. ಶಬ್ದದ ರೂಪ ನೋಡಿದರೆ ಇದು ದೇಶೀಯ ಶಬ್ದವೇ ಅನ್ನಿಸಬೇಕು. ಆದರೆ ವಾಸ್ತವಿಕವಾಗಿ ಅದು ಅರಬ್ಬೀ ಪದ. ಮೂಲ ರೂಪ **ಮಾಹಿಯತ್**; ಮರಾಠಿಯಲ್ಲಿ **ಮಾಹಿತ** ಆಗಿ ಕನ್ನಡದಲ್ಲಿ **ಮಾಹಿತಿ** ರೂಪ ಧರಿಸಿತು. ಪೇಶವೆ ಕಾಲದಲ್ಲಿ ಮರಾಠಾ ಸಾಮ್ರಾಜ್ಯಕರ್ತರು ಮೊಗಲರು ಬಳಸುತ್ತಿದ್ದ ಪಾರಸೀಕ ಭಾಷೆಯನ್ನೇ ಬಹುತರವಾಗಿ ಆಡಳಿತದಲ್ಲಿ ಮುಂದುವರಿಸಿದರಲ್ಲದೆ ಆ ಭಾಷೆಯಿಂದ ಸಾರಾ-ಸಗಟಾಗಿ ಶಬ್ದಗಳನ್ನು ಮರಾಠಿಗೂ ತಂದುಕೊಂಡರು. ಕನ್ನಡದಲ್ಲೀಗ ಈ ಶಬ್ದಕ್ಕೆ ವಿವರ, ತಿಳಿವಳಿಕೆ ಇತ್ಯಾದಿ ಅರ್ಥಗಳಿದ್ದರೆ ("ನನಗೆ ಅವರು ಮಾಹಿತಿ ಕೊಟ್ಟರು") ಮರಾಠಿಯಲ್ಲಿ ಪರಿಚಿತ, ಬಳಕೆಯಿದ್ದದ್ದು ಎಂಬರ್ಥದಲ್ಲಿ ಅದರ ಪ್ರಯೋಗವಾಗುತ್ತದೆ. ಉರ್ದುವಿನಲ್ಲಿ ಅದರ ಮೂಲ ಅರಬ್ಬಿ ಅರ್ಥಕ್ಕೆ ಸಮೀಪವಾಗಿ ಪದಾರ್ಥದ ವಾಸ್ತವಿಕ ತತ್ತ್ವ, ಗುಣ ಅಥವಾ ಸ್ವರೂಪ, ಪಾರಮಾರ್ಥಿಕ ಸ್ವರೂಪ ಎಂಬರ್ಥವಿದೆ. ಈ ಅರ್ಥ ಮರಾಠಿ ಅಥವಾ ಕನ್ನಡ ಅರ್ಥಕ್ಕಿಂತ ಗಂಭೀರವಾಗಿದೆ. ಹೀಗೆ **ಮಾಹಿತಿ** ಮೂಲದಿಂದ ಅರ್ಥಹ್ರಾಸ ಹೊಂದಿದ್ದರೂ ಕನ್ನಡದಲ್ಲಿ ಅದು ಪಡೆದುಕೊಂಡ ಅರ್ಥ ನಮ್ಮ ತತ್ಸಮಾನವಾದ ಯಾವ ಹಳೇ ಶಬ್ದಕ್ಕೂ ಇಲ್ಲದ ವಿಶಿಷ್ಟ ಅಭಿಪ್ರಾಯವನ್ನು ಪ್ರಕಟಿಸಲು ನೆರವಾಗಿದೆ.

**ಮಾಲ್** (ಮಾಲು, ಮ್ಯಾಲು) ಶಬ್ದ ಕನ್ನಡದಲ್ಲಿ ಗಟ್ಟಿಯಾಗಿ ಬೇರೂರಿ ವ್ಯವಹಾರದಲ್ಲಿ ಉಪಯೋಗಕ್ಕೆ ಬಿದ್ದಿದೆ. **ಸರಕು** ಎಂಬರ್ಥದಲ್ಲಿ ಸಾಮಾನ್ಯರಿಗೆ ಅದು ಪರಿಚಿತ. "ಪರದೇಶದಿಂದ ಮಾಲು ತರಿಸಿದೆ" ಎನ್ನುತ್ತೇವೆ. **ಮಾಲ್ ಗಾಡಿ** ಎನ್ನುವಾಗ ಸರಕು ಸಾಗಿಸುವ ರೈಲು ಬಂಡಿ ಎಂದು ಅಭಿಪ್ರಾಯ. ಮರಾಠಿಯಲ್ಲಿ ಸರಕಿಗಲ್ಲದೆ **ಸೊತ್ತಿಗೂ** ಈ ಪದ ಅನ್ವಯಿಸುತ್ತಿದೆ. ಶುದ್ಧ ಕನ್ನಡದಲ್ಲಿ ಒಡವೆ ಎನ್ನಿ. **ಮಾಲಿಕ** ಅಂದರೆ ಕನ್ನಡದಲ್ಲಿ ಕೂಡ **ಮಾಲು ಉಳ್ಳವ, ಒಡವೆ ಉಳ್ಳವ, ಒಡೆಯ.** ಇಲ್ಲಿ ವ್ಯಾಪಾರೀ ಸರಕಲ್ಲದೆ **ಸೊತ್ತು** ಕೂಡ ಅಭಿಪ್ರೇತವಾಗುತ್ತದೆ. ಅರಬ್ಬಿಯಲ್ಲಿ **ಮಾಲ್** ಶಬ್ದಕ್ಕೆ ಇವೆರಡಕ್ಕಿಂತ ಉದಾತ್ತ ಅರ್ಥವುಂಟು. ಸಂಪತ್ತು, ಧನ, ಶ್ರೀ; ಅಮೂಲ್ಯ ಪದಾರ್ಥ ಇತ್ಯಾದಿ. ಅದ್ದರಿಂದ "ಖುದಾ ಮಾಲಿಕ ಹೈ" (ದೇವರು ಒಡೆಯ) ಇತ್ಯಾದಿಯಾಗಿ ಕೇಳಬರುತ್ತದೆ.

ಲಂಪಟರ ಭಾಷೆಯಲ್ಲಿ ಸೂಳೆಗಾರಿಕೆಗಿಳಿದ ಸುಂದರ ಸ್ತ್ರೀಗೆ **ಮಾಲ್** ಎಂಬ ಶಬ್ದ ಪ್ರಯೋಗವಿದೆ. ಕುಂಟಣಿಗಳು ವಿಟರಿಗೆ "ಒಳ್ಳೇ ಹೊಸ **ಮಾಲು** ಬಂದಿದೆ." ಎಂದು ಆಮಿಷ ತೋರಿಸುತ್ತಾರೆ. ಇದು ಕೂಡ ಮೇಲ್ಕಾಣಿಸಿದ ಅರಬ್ಬಿ ಶಬ್ದವೇ. ಇದು ಹೆಣ್ಣನ್ನು ಕಳಪೆ ಮಾಡುವ ಶಬ್ದ ಎಂದೇ ಭಾವಿಸಿದ್ದೆ. ಆದರೆ **ಮಾಲ್** ಶಬ್ದಕ್ಕೆ **ಸುಂದರಿ** ಎಂಬ ಅರ್ಥವೂ ಇದೆ ಎಂದು ಉರ್ದು ಕೋಶಗಳಲ್ಲಿ ನೋಡಿ ನನ್ನೆಣಿಕೆ ತಪ್ಪೆನಿಸಿತು.

ಉತ್ತರ ಕರ್ನಾಟಕದ ಕಟ್ಟಡ ಕೆಲಸದ ಭಾಷೆಯಲ್ಲಿ ಸಿಮೆಂಟ್—ಉಸುಬು ಬೆರೆಸಿದ ಹಸಗಾರೆ ಮುದ್ದೆಯನ್ನು ಮಾಲು ಎಂದು ನಿರ್ದೇಶಿಸುತ್ತಾರೆ. ಇದು ಸೊತ್ತು, ಆಸ್ತಿ ಎಂಬರ್ಥದ **ಮಾಲ್** ಪದಕ್ಕೆ ಸಂಬಂಧಿಸಿದ್ದಲ್ಲ. ಬಹುಶಃ ಅದು **ಮಾಯಲ್** ( = ಮಿಶ್ರಣ) ಎಂಬ ಅರಬ್ಬಿ

ಪದದ ಕನ್ನಡೀಕರಣ ಅಥವಾ ಅಪಭ್ರಂಶ. ಹೀಗೆ ಸುಣ್ಣ-ಉಸುಬು ಅಥವಾ ಸಿಮೆಂಟು ಉಸುಬಿನ **ಮಿಶ್ರಣ ಮಾಯಲ್ = ಮಾಲ್** ಆಗುತ್ತದೆ.

ಕಬ್ಬು ಮತ್ತು ಅದರ ಉಪೋತ್ಪತ್ತಿಗಳಿಂದ ಸಕ್ಕರೆ, ಬೆಲ್ಲ ಮೊದಲಾದವೆಲ್ಲ ಭಾರತೀಯ ಮೂಲದವೇ ಎಂಬುದು ಸಾರ್ವತ್ರಿಕ ಗ್ರಹಿಕೆಯಾಗಿದೆ. ಸಂಸ್ಕೃತದಿಂದ ಹೊರಟ **ಶರ್ಕರಾ** ಕನ್ನಡದಲ್ಲಿ **ಸಕ್ಕರೆ**ಯಾದಂತೆ ಗ್ರೀಕ್ Sakeheron, ಲ್ಯಾಟಿನ್ Saccharum, ಇಂಗ್ಲೀಷ್ Sugar, ಅರಬ್ಬಿ **ಸುಕ್ಕರ್**, ಫ್ರೆಂಚ್ SUCRE ಇಂಗ್ಲೀಷ್ Jaggery (ಬೆಲ್ಲ) ಆಗಿ ವ್ಯಾಪಿಸಿದೆ. ಸಂಸ್ಕೃತದಲ್ಲಿ ಉಸುಬು ಎಂಬರ್ಥವನ್ನೂ **ಶರ್ಕರಾ** ಶಬ್ದ ಕೊಡುತ್ತದೆ. ಉಸುಬಿನ ರೂಪ ಸಾಮ್ಯದಿಂದ ಸಕ್ಕರೆಗೆ ಆ ಹೆಸರು ಬಂದಿರಬೇಕು. ಹೀಗೆ ಅದು ಭಾರತೀಯ ಮೂಲದ್ದೆಂಬುದು ಖಚಿತವೆನಿಸುತ್ತದೆ. ಆದರೂ ಚೀನೀಯ ಸಂಶೋಧಕರು ಈಚೆಗೆ ಕಬ್ಬು ಮೂಲತಃ ಚೀನದ್ದೇ ಎಂದು ಸಾಧಿಸಿದ್ದಾರೆ. ಇದು ನಿರಾಧಾರವೆಂದು ತೋರಿದರೂ ಅವರಿಗೆ ನಿಲ್ಲಲು ಒಂದಾದರೂ ಕಾಲು ಇದೆ. ಪಾರಸೀಕ ಭಾಷೆಯಲ್ಲಿ ಮತ್ತು ಆ ಮೂಲಕ ಉರ್ದುವಿನಲ್ಲಿ ಸಕ್ಕರೆಗೆ **ಚೀನಿ** ಎಂಬ ಹೆಸರೂ ಇದೆ. ಪಿಂಗಾಣಿ ಮೊದಲಾದ ಕೆಲ ವಸ್ತುಗಳಿಗೂ ಚೀನಿ ಎಂಬ ಹೆಸರಿದ್ದು **ಅವು ಚೀನದಲ್ಲಿ ಮೊದಲು** ಉತ್ಪತ್ತಿಯಾದವೆಂಬುದು ಎಲ್ಲರೂ ಒಪ್ಪಿದ ಮಾತಾದ್ದರಿಂದ ಸಕ್ಕರೆಯೂ ಇರಾಣಕ್ಕಂತೂ ಚೀನದಿಂದ ಬರುತ್ತಿದ್ದಿರಬಹುದು. ಭಾರತದಲ್ಲಿ ಮೂಲತಃ ಉತ್ಪತ್ತಿಯಾದ ಸಕ್ಕರೆಗೆ ಚೀನಿ ಎಂಬ ಹೆಸರು ಬಿದ್ದದ್ದು ವಿಚಿತ್ರವಾದಂತೆ, ಸಕ್ಕರೆಯದೇ ಇನ್ನೊಂದು ಅವತಾರವಾದ ಕಲ್ಲುಸಕ್ಕರೆಗೆ ಅರಬ್ಬಿ ಭಾಷೆಯಲ್ಲಿ ಮಿಸರೀ ಎಂಬ ಹೆಸರಿದ್ದದ್ದೂ ಸೋಜಿಗ. ಯಾಕೆಂದರೆ **ಮಿಸರಿ** ಎಂದರೆ **ಮಿಸ್ರ** ದೇಶದ್ದು **ಮಿಸ್ರ** ಎಂದರೆ ಇಜಿಪ್ತ್ ದೇಶ. ಇದು ಹೇಗಾಯಿತು ಎಂದು ಸುನೀತಿ ಚಟರ್ಜಿ ಆಶ್ಚರ್ಯಪಟ್ಟಿದ್ದಾರೆ.

ನಮ್ಮ ದಿನ ಬಳಕೆಯ ಶುಚಿ ವಸ್ತುವಾದ **ಸಾಬೂನು** ಎಂಬ ಹೆಸರು ಮೂಲತಃ ಅರಬ್ಬಿ-ಪರ್ಶಿಯನ್—**ಸಾಬುನ್ ಸಾಬೂನ್**ನಿಂದ ಎರವಲು ಪಡೆದದ್ದು. ಆದರೆ ಉತ್ತರ ಕರ್ನಾಟಕದಲ್ಲಿಯೂ ಬಂಗಾಲ ಮೊದಲಾದ ಕೆಲ ಪ್ರಾಂತಗಳಲ್ಲಿಯೂ ಅದನ್ನು **ಸಾಬಾಣ, ಸಾಬಾನ್** ಎಂದು ಹೆಸರಿಸಲಾಗುತ್ತದೆ. ಇದು ಮಾತ್ರ ನೇರ ಆಯಾತವಲ್ಲ. ಪೋರ್ತುಗೀಸರು ಅರಬ್ಬಿ **ಸಾಬೂನ**ನ್ನು ಎರವಲು ತೆಗೆದುಕೊಂಡು ಅದನ್ನು **ಸಾಬಾಂವ್** ಎಂದು ಕರೆದರು. (ಅರಬರಿಗೂ ಸ್ಪೇನ್ ಪೋರ್ತುಗಾಲಗಳಿಗೂ ಪುರಾತನ ಶತ್ರು-ಮಿತ್ರ ಸಂಬಂಧ) ನೇರ ಎರವಿನ ಬದಲು ಎರವಲಿಗರಿಂದ ಎರವಲು ಪಡೆದವರು ಅದನ್ನು ಸಾಬಾಣ ಮಾಡಿಕೊಂಡರಷ್ಟೇ. ಸಾಬೂನಿಗಿರುವ ಇನ್ನೊಂದು ಹೆಸರಾದ **ಸಬಕಾರ** ಎಂಬುದರ ಕಥೆ ಸ್ವಲ್ಪ ಬೇರೆ. ಕಾರ, ಖಾರ (ಸಂಸ್ಕೃತ ಕ್ಷಾರ) ಎಂಬ ಅಲ್ಕಲಿ ಪದಾರ್ಥ ಮೊದಲಿಂದ ಬಟ್ಟೆ ಒಗೆಯುವುದರಲ್ಲಿ ಬಳಕೆಯಾಗಿತ್ತು. ಕೊಬ್ಬು ಸಹಿತವಾದ ಕಾರ ಸಾಬಾಂವ್. **ಸಾಬಾಂವ್** ಬಂದಾಗ ಈ ಹೊಸ ಶಬ್ದದೊಡನೆ ಹಳೇ **ಕಾರವೂ** ಸೇರಿಕೊಂಡು **ಸಬಕಾರ**ವಾಗಿಬಿಟ್ಟಿತು.

ಶಬ್ದಗಳ ಜನ್ಮಟ್ಟಿ ಹೊರಟರೆ ಕೆಲವೊಮ್ಮೆ ಕಣ್ಣು ಕಾಲು ತಪ್ಪಿಸುವ ಸಾಮ್ಯಗಳು ಎದುರಾಗುತ್ತವೆ. ನಮ್ಮ **ಹರಿಕಾರ** ಶಬ್ದಕ್ಕೆ ಸುದ್ದಿ, ಪತ್ರ ಮೊದಲಾದವುಗಳನ್ನು ದೂರದೂರುಗಳಿಗೆ ಒಯ್ದು ಮುಟ್ಟಿಸುವ ನೌಕರ ಎಂಬರ್ಥವಿದೆ. ಉರ್ದು ಕೋಶಗಳನ್ನು ತಿರುವುವಾಗ **ಹರಕಾರಾ** ಎಂಬ ಶಬ್ದಕ್ಕೆ ಇದೇ ಅರ್ಥ ಕಂಡು ಬೆರಗಾದೆ. ಅದೇನೂ ದ್ರಾವಿಡದಿಂದ ಉರ್ದುವಿಗೆ ದಾಟಿದ ಶಬ್ದವಲ್ಲ—ಅದು ಪಾರಸೀಕ ಶಬ್ದ ಎಂದು ಕೋಶಗಳಲ್ಲಿ ಸ್ಪಷ್ಟ ನಿರ್ದೇಶನ ನೋಡಿದರೂ ನನ್ನ ಸೋಜಿಗ ಬಗೆಹರಿಯಲಿಲ್ಲ. ಸಮಾಧಾನವಾಗಬೇಕಾದರೆ ನಮ್ಮ **ಹರಿಕಾರ**ದ ಮೂಲ ಹಳೆಗನ್ನಡದ ರೂಪ **ಪರಿಕಾಱ** ಎಂದೂ ಅದರರ್ಥ (ಪರಿ = ಸಾಗುವಿಕೆ, ಅದರ ಕಾಱ = ಮಾಡುವವ ಅಂದರೆ ಸುದ್ದಿ ತೆಗೆದುಕೊಂಡು **ಓಡುವವ** ಎಂದೂ ತಿಳಿಯಬೇಕಾಯಿತು.

—**ಪಾ. ವೆಂ.**

## ಮಲಯಾಳಂ ಕಥೆ

# ಪತಿ ಪತ್ನಿ ಬ್ರೆಡ್ ಪ್ರೇ

ಮೂಲ :
ಸಿ. ಭಾಸ್ಕರನ್
ಕನ್ನಡಕ್ಕೆ :
ಡಾ. ಅಶೋಕಕುಮಾರ

ಕುಮಾರನ ಮನೆ ತೆರೆದುಕೊಟ್ಟು; ಕೆಲಸದವಳು ಕೋಣೆಯನ್ನು ಗುಡಿಸಿ ಶುಚಿಗೊಳಿಸುವುದನ್ನು ನೋಡುತ್ತಾ ನಿಂತೆ ನಾನು.

ಹೊಸದಾಗಿ ಮದುವೆಯಾದ ಕುಮಾರ ಮತ್ತು ಅವನ ಹೆಂಡತಿ ಇಂದು ಊರಿನಿಂದ ಬರುತ್ತಾರೆ. ಇಂದು ಭಾನುವಾರ. ಕಳೆದ ಬುಧವಾರ ಗುರುವಾಯೂರಿನಲ್ಲಿ ಮದುವೆ ನಡೆದಿರುತ್ತದೆ. ಕಲ್ಲಿಕೋಟೆಯಿಂದ ವರ ಮತ್ತು ಸಂಬಂಧಿಕರು, ಮುಂಬಯಿಯಿಂದ ವಧು ಮತ್ತು ಸಂಬಂಧಿಕರು ಗುರುವಾಯೂರಿಗೆ ಬರಬೇಕೆಂದು ಮೊದಲೇ ನಿರ್ಧರಿಸಿ ಆಗಿತ್ತು.

ಕುಮಾರ ಗೃಹಸ್ಥಾಶ್ರಮವನ್ನು ಪ್ರವೇಶಿಸುತ್ತಾನೆ. ಋಷಿಯಂತಹ ಕುಮಾರ ಗೃಹಸ್ಥಾಶ್ರಮಿಯಾಗುವದನ್ನು ನೆನೆದಾಗ ನಗು ಬರುತ್ತದೆ. ಹಿಂದೆ ಋಷಿಗಳೂ ಮದುವೆಯಾಗುತ್ತಿದ್ದರಲ್ಲ. ನಾನು ಮತ್ತು ಕುಮಾರ ವಿವಾಹ ಬೇಡವೆಂದು ನಿರ್ಧರಿಸಿದ್ದೆವು. ಕೊನೆಗೆ ಕುಮಾರ ಮಾತು ತಪ್ಪಿದ. ಏನೇ ಆದರೂ ನಾನು ನನ್ನ ನಿರ್ಧಾರದಿಂದ ಸ್ವಲ್ಪವೂ ಬದಲಾಗಲು ನಿರ್ಧರಿಸಿಲ್ಲ. ತಿಳಿದೂ ತಿಳಿದೂ ಹುಲಿಯ ಪಂಜರದೊಳಗೆ ಹೊಕ್ಕು ಬಾಗಿಲು ಮುಚ್ಚಿಕೊಳ್ಳಲು ನಾನು ಮೂರ್ಖನಲ್ಲ. ಹೆಣ್ಣು ಕಟ್ಟಿಕೊಂಡರೆ ಕಣ್ಣು ಕಟ್ಟಿಕೊಂಡಂತೆ ಅಲ್ಲವೇ. ಬಳಿಕ ಎಲ್ಲಿಯ ಸ್ವಾತಂತ್ರ್ಯ? ಮನೆಗೆ ತಡವಾಗಿ ಬಂದರೆ ಕಾರಣ ಹೇಳಬೇಕು. ಆರಾಮವಾಗಿ ಕುಳಿತು ಕ್ರಿಕೆಟ್ ಕಾಮೆಂಟರಿ ಕೇಳೋಣ ಎಂದರೆ ಆಗ ಶುರು ದುಂಬಿಗಳ ಝೇಂಕಾರದಂತೆ ಮಕ್ಕಳ ಅಳು. ಇನ್ನು ಸಿನಿಮಾ ನೋಡೋಣ ಎಂದರೆ? ಮಕ್ಕಳು ಮರಿಗಳೊಂದಿಗೆ ಬಿಸಿಲಲ್ಲಿ ಉದ್ದದ ಕ್ಯೂನಲ್ಲಿ ನಿಂತು ಟಿಕೆಟ್ ತೆಗೆದು ಎಷ್ಟು ಸಲ ಸಿನಿಮಾ ನೋಡಲು ಸಾಧ್ಯ?

ಕುಮಾರನಿಗೆ ಇಂತಹ ದೂರುಗಳಿಲ್ಲ. ಅವನಿಗೆ ಸಿನಿಮಾ ಎಂದರೆ ಅಲರ್ಜಿ. ವರ್ಷಕ್ಕೆ ಒಂದೆರಡು ಸಲ ಬಿಡುಗಡೆಯಾಗುವ ಗದ್ದಧಾರಿ ಸಿನಿಮಾ ಯಾವುದನ್ನಾದರೂ ನೋಡುತ್ತಾನಷ್ಟೆ. ಕ್ರಿಕೆಟ್ ಎಂದರೆ ಸಾಕು, ಸಿಟ್ಟು ಬರುತ್ತದೆ. ಹುಂ, ಕಾಲಕ್ಕೆ ತಕ್ಕಂತೆ ಬದಲಾಗದಿದ್ದರೆ ಅದಕ್ಕೆ ಶಿಕ್ಷೆಯನ್ನೂ ಅನುಭವಿಸಲಿ.

ಇತ್ತೀಚಿನವರೆಗೆ ಕುಮಾರ ಮತ್ತು ನಾನು ಒಟ್ಟಿಗೆ ವಾಸಿಸುತ್ತಿದ್ದೆವು. ಬಳಿಕ ಬೇರೊಂದು ಮನೆ ಸಿಕ್ಕಾಗ ಕುಮಾರ ಅಲ್ಲಿಗೆ ಹೋದ. ಒಂದು ಸಾಲಿನಲ್ಲಿ ಐದು ಮನೆಗಳು. ಮನೆ ಎಂದರೆ ಒಂದು ಬೆಡ್‌ರೂಂ, ಅಡಿಗೆ ಕೋಣೆ, ವರಾಂಡ, ಬಾತ್‌ರೂಂ, ಕಕ್ಕಸು ಇಷ್ಟೇ.

ಕುಮಾರನನ್ನು 'ಸ್ವಾಮೀಜಿ' ಎಂದೇ ನಾನು ಕರೆಯುತ್ತಿದ್ದೆ. ನನ್ನನ್ನು ಅವನು ಬದಲಿಗೆ 'ಹೋತ' ಎಂದು ಕರೆಯುತ್ತಿದ್ದ. ನನ್ನ ಗಡ್ಡ ಅವನ ಪ್ರಕಾರ ಆಡಿನ ಗಡ್ಡ. ನಾನು ಹೇಳಿ ನೋಡಿದೆ "ನೀನು ಬೇಕಾದರೆ ನನ್ನನ್ನು ಲೆನಿನ್ ಎಂದು ಕರೆ; ಆಫೀಸ್‌ನವರೆಲ್ಲಾ ಹಾಗೇ ಕರೆಯುವುದು" ಎಂದು. ಇಲ್ಲ ಅವನು ಮಾತ್ರ 'ಹೋತ' ಎಂದೇ



ಕರೆಯುತ್ತಾನೆ.

ಒಂದು ಸಂಜೆ ಕುಮಾರ ಸಿಳ್ಳು ಹಾಕುತ್ತಾ ನನ್ನ ಕೋಣೆಗೆ ಬಂದು, ಮುಗಿಯುತ್ತಿದ್ದ ಸಿಗರೇಟನ್ನು ದೂರಕ್ಕೆಸೆಯುತ್ತಾ ಹೇಳಿದ. "ಕೊನೆಗೆ ನಾನು ಸಾಕ್ರೆಟೀಸನ ಉಪದೇಶವನ್ನು ಸ್ವೀಕರಿಸುವುದೆಂದೇ ನಿಶ್ಚಯಿಸಿದೆ." ಆದರೆ ನಾನು ಸಾಕ್ರೆಟೀಸ್‌ನ ಉಪದೇಶ ಏನು ಎಂದು ಕೇಳಲಿಲ್ಲ. ಅವನೇ ಹೇಳಿದ, "ನಾನು ಮದುವೆಯಾಗಲು" ನಿರ್ಧರಿಸಿದೆ ಅಂತ.

"ಓಹೋ ಭೇಷ್, ಭಲೇ ಭೇಷ್!" ನಾನು ಕೈ ತಟ್ಟಿ ಅಭಿನಂದಿಸಿದೆ.

*

ಮದುಮಗನೂ ಮದುಮಗಳೂ ಸಂಜೆಯ ಹೊತ್ತಿಗೆ ಬಂದು ತಲಪಿದರು. ಗೇಟ್ ತೆರೆಯುವ ಶಬ್ದ ಕೇಳಿ ನಾನು ಓಡಿ ಹೋಗಿ ನೋಡಿದೆ. ಕುಮಾರ ನನ್ನನ್ನು ಹೆಂಡತಿಗೆ ಪರಿಚಯಮಾಡಿಸಿ ಕೊಟ್ಟ. ಕೈ ಮುಗಿದು ನಾನು ಸ್ವಗತವೆಂಬಂತೆ ಮುಗುಳ್ನಕ್ಕೆ. ಕುಮಾರನ ಹೆಂಡತಿ ಬಹಳ ಸುಧಾರಿಸಿದವಳು. ಮುಂಬಯಿ ನಗರದ ಹೆಣ್ಣಿನ ವೇಷ. ಸ್ಲೀವ್‌ಲೆಸ್, ತುಟಿಗಳಲ್ಲಿ ಸುಂದರ ಬಣ್ಣ, ತೀಡಿದ ಹುಬ್ಬುಗಳು, ಸ್ಮಾರ್ಟ್ ಲುಕ್, ಕುಮಾರನ ಮುಖದಲ್ಲಿ ಲಜ್ಜೆಯೋ ವಿಷಣ್ಣತೆಯೋ ಎಂದು ತಿಳಿಯಲಾಗದ ಭಾವನೆ.

ಬಾಗಿಲು ತೆರೆದು ಕುಮಾರ ಮಡದಿಗೆ ಮನೆ ತೋರಿಸಿಕೊಟ್ಟ. ಅವಳ ಮುಖದಲ್ಲಿನ ಪ್ರಸನ್ನತೆ ತಟ್ಟನೆ ಅಸ್ತಮಿಸಿತು. ಅಡಿಗೆ ಕೋಣೆಯ ಮೂಲೆಯ ಸ್ಟೌವ್, ಅಲ್ಮೇರಾದಲ್ಲಿನ ಅಲ್ಯುಮಿನಿಯಂ ಪಾತ್ರೆ, ಖಾಲಿ ಹಾರ್ಲಿಕ್ಸ್ ಬಾಟಲಿಗಳು ಇವುಗಳನ್ನೆಲ್ಲಾ ಅವಳು ಗಾಬರಿಯಿಂದ ನೋಡುತ್ತಾ ನಿಂತಳು. ಮುಂಬಯಿಯ ತನ್ನ ಫ್ಲ್ಯಾಟ್ ಮತ್ತು ಅಡಿಗೆ ಕೋಣೆಯಿರಬೇಕ ಅವಳ ಮನದಲ್ಲಿ ಮೂಡಿ ಮರೆಯಾದದ್ದು.

ನಾನು ಗಂಭೀರವಾಗಿ ಕೇಳಿದೆ, "ಏನು ಕುಮಾರ? ನಮಗೆಲ್ಲಾ ಯಾವಾಗಪ್ಪ ಪಾರ್ಟಿ? ನಮಗೆ ಹೋಟೆಲಿನ ಪಾರ್ಟಿ ಬೇಡ!" ಬಳಿಕ ಮಿಸೆಸ್ ಕುಮಾರರಿಗೆ ಹೇಳಿದೆ "ವೆಜ್ಜೊ ನಾನ್‌ವೆಜ್ಜೋ ಯಾವುದಾದರೂ ಪರವಾಗಿಲ್ಲ. ಮನೆಯಲ್ಲಿ ತಯಾರಿಸಿದ್ದು ಸಾಕು."

ಕುಮಾರ ಹೇಳಿದ, "ಎಲ್ಲಾ ಕೊಡೋಣ ಕಣೋ. ಇವಳಿಗೆ ಕುಕ್ಕಿಂಗ್ ಎಲ್ಲಾ ಸ್ವಲ್ಪ ಸರಿಯಾಗಿ ಬರಲಿ." ನಾನು ಅಚ್ಚರಿ ತೋರಿದೆ, "ಹಾಗಾದರೆ ಕುಕ್ಕಿಂಗ್ ಬರೋಲ್ಲ?"

ಮಿಸೆಸ್ ಕುಮಾರ ಅಷ್ಟು ಬೇಗ ಪರಾಜಿತಳಾಗುವ ಗುಂಪಿನವಳಲ್ಲ. "ಎಲ್ಲಾ ಬರುತ್ತೆ. ಆದರೆ ಇದುವರೆಗೆ ನಾನೇ ಮಾಡಿ ನೋಡಿಲ್ಲ!"

ಬಂದು ಎರಡು ದಿನಗಳಾಗಲಿಲ್ಲ, ಆಗಲೇ ಮಿಸೆಸ್ ಕುಮಾರ ತನ್ನ ಅಸಹನೆಯನ್ನು ವ್ಯಕ್ತಪಡಿಸತೊಡಗಿದಳು. ಹೊಸ ಊರು ಅವಳಿಗೆ ಏನೂ ಹಿಡಿಸದಂತೆ. ಗಂಡನೊಡನೆ ಕೇಳಿದಳು, "ಮತ್ತೆ ಟ್ರಾನ್ಸ್‌ಫರ್ ವಿಚಾರ ಏನಾಯ್ತು?" ಪ್ರಶ್ನೆ ಕೇಳಿ ಕುಮಾರ ಸ್ವಲ್ಪ ಗಪ್ಚ ತುರಿಸಿಕೊಂಡ. ಬಳಿಕ ತೆವಳುವವನಂತೆ ಹೇಳಿದ, "ಇಷ್ಟರಲ್ಲೇ ನನಗೊಂದು ಪ್ರಮೋಷನ್ ಸಿಗಲಿದೆ. ಅದರ ಬಳಿಕವೇ ಟ್ರಾನ್ಸ್‌ಫರ್‌ಗೆ ಅಪ್ಲೈ ಮಾಡೋದು. ಪ್ರಮೋಷನ್‌ಗಿಂತ ಮೊದಲೇ ಮುಂಬಯಿಗೆ ಹೋದರೆ ನನ್ನ ಸೀನಿಯಾರಿಟಿ ಹೊರಟು ಹೋಗುತ್ತದೆ."

ನಿರೀಕ್ಷಿಸಿದ ಉತ್ತರ ಸಿಕ್ಕಿದುದಕ್ಕೇ ಇರಬೇಕು ಸ್ವಲ್ಪ ಹೊತ್ತು ಗಾಢಮೌನ. ಒಂದು ಕವಡೆ ಬಿದ್ದರೂ ಕೇಳಿಸುತ್ತದೆ. ಕೊನೆಗೆ ನಿಶ್ಶಬ್ದವನ್ನು ಭೇದಿಸಿದ್ದುದು ಮಿಸೆಸ್ ಕುಮಾರಳ ಧ್ವನಿ.

"ಇಷ್ಟು ರಿಮೋಟ್ ಪ್ಲೇಸ್ ಎಂದು ತಿಳಿದಿರಲಿಲ್ಲ. ನೀವೆಲ್ಲರೂ ಆಫೀಸ್‌ಗೆ ಹೋದರೆ ರಸ್ತೆಯಲ್ಲಿ ಸಹ ಒಬ್ಬ ಮನುಷ್ಯನನ್ನೂ ನೋಡಲಾಗದು."

ನಾನು ಸತ್ಯವನ್ನು ಬಿಡಿಸಿ ಹೇಳಿದೆ. "ಸಂಶಯವಿಲ್ಲ. ಹತ್ತು ವರ್ಷದ ಹಿಂದಿನವರೆಗೆ ಇದು ಯಥಾರ್ಥವಾಗಿ ಗ್ರೇವ್‌ಯಾರ್ಡ್ ಆಗಿತ್ತು. ಬರೀ ಈಚಲು ಮರಗಳಿದ್ದವು. ಅಲ್ಲವೇ ಕುಮಾರ ? ನಮ್ಮ ಬ್ಯಾಂಕ್ ಬಂದ ಬಳಿಕವೇ ಈ ಊರೆಲ್ಲಾ ಅಭಿವೃದ್ಧಿಯಾದುದು. ಇನ್ನೊಂದು ಹತ್ತು ವರ್ಷ ಕಳೆಯಲಿ ನೀವೇ ಕೇಳುತ್ತೀರಿ ಇದು ಹಳೇ ಜಾಗವೇ ಎಂದು. ಅಷ್ಟು ಫಾಸ್ಟ್ ಡೆವಲಪ್‌ಮೆಂಟ್ ಇಲ್ಲಿ. ಅಲ್ಲವೇ ಕುಮಾರ?"

ಕುಮಾರ ನೋಟದಿಂದ ನನ್ನನ್ನು ಬೇಡ ಎಂದು ತಡೆಯದಿದ್ದಲ್ಲಿ ನಾನು ಪುನಃ ಏನೇನೋ ಹೇಳಿ ಮಿಸೆಸ್ ಕುಮಾರಳ ಆತ್ಮಸ್ಥೈರ್ಯವನ್ನು ನಾಶಗೊಳಿಸುತ್ತಿದ್ದೆ.

ಪ್ರತಿ ದಿನ ಸಂಜೆ ಕುಮಾರ ಪತ್ನಿಯೊಡನೆ ಸಿಟಿಯನ್ನು ಸುತ್ತಲು ಹೋಗುತ್ತಿದ್ದ. ಅದೆ ಸಿನಿಮಾ ನೋಡಲು ಹೋದೆವೆಂದು ಕುಮಾರ ಹೇಳುವುದಿಲ್ಲ. ಬದಲಾಗಿ "ಮೂರು ಗಂಟೆ ಆರಾಮಾಗಿ ನಿದ್ರಿಸಿದೆ. ನಷ್ಟವಿಲ್ಲ. ಐದು ರೂಪಾಯಿಗೆ ಮೂರು ಗಂಟೆ ಏರ್‌ಕಂಡಿಶನ್ ನಿದ್ರೆ" ಎನ್ನುತಾನೆ.

ಇತ್ತೀಚೆ ಕುಮಾರ ಎಂದಿನಂತೆ ಹೆಚ್ಚಾಗಿ ತಮಾಷೆ ಮಾತುಗಳನ್ನಾಡತೊಡಗಿದ್ದಾನೆ. ಒಮ್ಮೊಮ್ಮೆ ಸಾಯಂಕಾಲ ನಾವು ಮನೆಯ ಅಂಗಳದಲ್ಲಿ ಬೆತ್ತದ ಕುರ್ಚಿಗಳಲ್ಲಿ ಕುಳಿತು ಏನೇನೋ ಚರ್ಚೆ ಮಾಡುತ್ತೇವೆ.

ಅಂತಹ ಒಂದು ಸಂಜೆ ಸಿಟಿಯಲ್ಲಿ ನಡೆಯುತ್ತಿದ್ದ ಹಿಂದಿ ಚಿತ್ರವನ್ನು ನೋಡಲು ಹೋಗಲು ಒಪ್ಪಿ ಕುಮಾರ ಹೆಂಡತಿಯನ್ನು ಕಾಯುತ್ತಾ ತಂಗಾಳಿಗೆ ಮೈಯೊಡ್ಡಿ ಅಂಗಳದಲ್ಲಿ ಕುಳಿತಿದ್ದ. ಪಡುವಣದಲ್ಲಿ ಮರೆಯಾಗಿರುವ ಸೂರ್ಯನ ಕುಂಕುಮ ಶೋಭೆಯಲ್ಲಿ ಮರೆಯಾಗಿರುವ ಬೇವಿನ ಮರಗಳು, ಬೇವಿನೆಲೆಗಳಲ್ಲಿ ಕಂಪನಗಳನ್ನುಂಟು ಮಾಡಿ ತಂಗಾಳಿ ಹರಿದು ಬರುತ್ತಿತ್ತು. ಬೇವಿನ ಮರವನ್ನಪ್ಪಿ ಬೆಳೆದಿದ್ದ ಹೂಬಳ್ಳಿಯ ಗಾಢ ಪರಿಮಳ ಗಾಳಿಯಲ್ಲಿ ಹರಡಿತು. ಎಲ್ಲ ರೀತಿಯಿಂದಲೂ ಆಹ್ಲಾದಕರವಾದ ಸಂಜೆ.

ಒಂದು ಹಾಡನ್ನು ಗುನುಗುನಿಸುತ್ತಾ ಕುಮಾರನ ಪತ್ನಿ ಸಿದ್ಧಳಾಗಿ ಮನೆಗೆ ಬೀಗ ಹಾಕಿ ಹೊರಟಳು. ಜೀನ್ಸ್ ಮತ್ತು ಷರ್ಟ್ ಧರಿಸಿದ್ದಳು. ಅದನ್ನು ಕಂಡೊಡನೆ, ಕುಮಾರನ ಕಂಗಳಲ್ಲಿ ಕೋಪ ಭುಗಿಲೆದ್ದಿತು. ಹುಬ್ಬುಗಳು ಬಾಗಿದವು. ಮೀಸೆ ಅದುರಿತು. ಕುಮಾರ ಹೆಂಡತಿಯ ಕೈ

ಯಿಂದ ಬೀಗದ ಕೈ ಪಡೆದುಕೊಂಡು ಬಾಗಿಲು ತೆರೆದು ಸೀದಾ ಮನೆಯೊಳಕ್ಕೆ ಹೋದ. ವಿಷಯ ತಿಳಿಯದೆ ಪತ್ನಿಯೂ ಅವನನ್ನನುಸರಿಸಿದಳು. ಸ್ವಲ್ಪ ಹೊತ್ತಿನ ಬಳಿಕ ಸೀರೆ, ಬ್ಲೌಸ್ ಧರಿಸಿದ ಪತ್ನಿಯೊಡನೆ ಅವಸರವಾಗಿ ಹೋಗುತ್ತಿದ್ದ ಕುಮಾರ. ಕೇವಲ ಉಡುಪುಗಳ ಬಗ್ಗೆ ತರ್ಕಮಾಡಿ ಅಮೂಲ್ಯವಾದ 'ಸಿನಿಮಾ' ಕಳೆದುಕೊಳ್ಳಲು ವಿವೇಕಿಗಳಾರೂ ತಯಾರಿರುವುದಿಲ್ಲವಲ್ಲ!

ಮದುವೆಯಾದ ಬಳಿಕ ಗಮನೀಯ ಬದಲಾವಣೆ ಕುಮಾರನಲ್ಲಿ ಕಂಡುಬಂತು. ಕುಮಾರ ಆಗಾಗ ನನ್ನ ಕೋಣೆಗೆ ಬಂದು ಚಿತ್ರ ನೋಡುವ ನೆಪದಲ್ಲಿ ಫಿಲಂ ಮ್ಯಾಗಸಿನ್‌ಗಳನ್ನು ಓದತೊಡಗಿದ. ಬಳಿಕ ಎಲ್ಲಾ ನಂಗೊತ್ತು. ನಿನ್ನನ್ನು ಪರೀಕ್ಷಿಸಲೋಸುಗ ಕೇಳುತ್ತೇನೆ ಎಂಬ ಭಾವದಲ್ಲಿ ಸಿನಿಮಾ ತಾರೆಯರ ಹಾಗೂ ಸಿನಿಮಾಗಳ ಬಗ್ಗೆ ಹಲವು ಸಂಶಯಗಳನ್ನು ಕೇಳುವನು.

ಒಂದು ದಿನ ನಾನು ಆಫೀಸ್‌ನಿಂದ ಬಂದಾಗ ಗಂಡ ಹೆಂಡತಿ ವಾದಿಸುತ್ತಿದ್ದರು. ತೀರ್ಪು ನೀಡಲು ನನ್ನನ್ನು ಕರೆದರು. ಹೆಂಡತಿ ಕೇಳಿದಳು, "ಹೇಮಮಾಲಿನಿ ಗಂಡ ಯಾರು?" ಇದೂ ಒಂದು ಪ್ರಶ್ನೆಯೇ ಎಂದು ಅಲಕ್ಷ್ಯವಾಗಿ ನಾನು ಹೇಳಿದೆ "ಧರ್ಮೇಂದ್ರ!"

"ಇವರು ಹೇಳುತ್ತಿದ್ದಾರೆ ಜಿತೇಂದ್ರ ಎಂದು. ಅಯ್ಯೋ ಇವರಿಗೆ ಇದೂ ಗೊತ್ತಿಲ್ಲ." ಹೆಂಡತಿ ಗಂಡನನ್ನು ಅಣಕಿಸಿದಳು.

ಕುಮಾರ ಬಿಳಿಚಿಕೊಂಡು ಸುಮ್ಮನೆ ಪೆಂಕಾಗಿ ನಕ್ಕ.

ಹೊಸಬನಾದ ಕುಮಾರ ಎಡವಿದ್ದ. ಅವನಿಗೇನು ಗೊತ್ತು, ಪಾಪ, ಹಿಂದಿ ಸಿನಿಮಾದಲ್ಲಿ ಹೀಗೆಯೇ ಸಾವಿರಾರು ಇಂದ್ರರು ಕುಮಾರರು ಇದ್ದಾರೆಂದು! ಏನೇ ಆಗಲಿ, ನನ್ನ ಜ್ಞಾನವನ್ನು ಪ್ರದರ್ಶಿಸಲು ಸಿಕ್ಕಾಗ ಅವಕಾಶವನ್ನು ಉಪಯೋಗಿಸಿಕೊಳ್ಳಲು ನಾನು ನಿರ್ಧರಿಸಿದೆ. ನಾನು ಕೇಳಿದೆ.

"ಹೇಮಮಾಲಿನಿ ಧರ್ಮೇಂದ್ರರಿಗೆ ಒಂದು ಮಗುವಿದೆ. ಅದರ ಹೆಸರು ಗೊತ್ತೇ?"

ಮಿಸೆಸ್ ಕುಮಾರ ಸೋಲನ್ನೊಪ್ಪಿಕೊಂಡಳು, ನಾನು ಮಗುವಿನ ಹೆಸರು ಹೇಳಿದಾಗ ಅವಳ ಕಣ್ಣುಗಳು ಅರಳಿದವು. ಆ ಕಣ್ಣುಗಳಲ್ಲಿ ಆರಾಧನೆಯ ಒಂದು ಸುಂದರ ಬೆಳಕನ್ನು ನಾನು ಕಂಡೆ. ಕೊನೆಗೆ ನಾನು ಹೇಳಿದೆ. "ಇತ್ತೀಚಿನ ರಿಪೋರ್ಟಿನಂತೆ ಹೇಮಾ-ಧರಮ್‌ರ ಸಂಬಂಧ ಕಡಿದು ಹೋಗಲಿದೆ. ಸಿನಿಮಾದವರ ಬಂಧ ವಲ್ಲವೇ? ಅವರಿಗೆ ಬಂಧಗಳೆಂದರೆ ಬಟ್ಟೆ ಬದಲಾಯಿಸಿದಂತಲ್ಲವೇ?"

ಆ ಬಳಿಕ ನಾನು ಆಫೀಸ್‌ನಿಂದ ಬರುವುದನ್ನು ಕಾಯುವುದು ಮಿಸೆಸ್ ಕುಮಾರಳ ಅಭ್ಯಾಸವೇ ಆಗಿಬಿಟ್ಟಿತು. ನನ್ನ ಕೈಯಲ್ಲಿ ಯಾವುದಾದರೂ ಸಿನಿಮಾ ಮ್ಯಾಗಸಿನ್ ಇರುತ್ತದೆ. ಅದನ್ನು ಬಿಸಿ ಬಿಸಿಯಾಗಿ ಓದಬಹುದು. ನನಗೂ ಸಂತೋಷವಾಯಿತು. ಇಬ್ಬರೂ ಸಿನಿಮಾ ಪ್ರೇಮಿಗಳು ತಾನೆ. ಅಷ್ಟೇ ಅಲ್ಲ ಕ್ರಿಕೆಟ್ ಪ್ರೇಮಿಗಳೂ ಹೌದು. ನನಗಿಂತ ಹೆಚ್ಚು ಆಸಕ್ತಳೋ ತಿಳಿಯದು. ಕ್ರಿಕೆಟ್ ಕಾಮೆಂಟರಿ ಕೇಳುವ ಉತ್ಸಾಹದಲ್ಲಿ ಊಟ ಮಾಡುವುದನ್ನು ಮರೆತುಬಿಡುತ್ತಿದ್ದಳಂತೆ.

ಒಮ್ಮೆ ನಾನು ಹೇಳಿದೆ, "ನಾನು ಒಬ್ಬ ನಟನೂ ಹೌದು ! ಕಳೆದ ಸಲ ನಮ್ಮ ಕ್ಲಬ್ ವಾರ್ಷಿಕೋತ್ಸವದ ನಾಟಕದಲ್ಲಿ ನಾನೇ ಹೀರೋ ಆಗಿದ್ದೆ!" ಅವಳಿಗೆ ನನ್ನ ಬಗ್ಗೆ ಇದ್ದ ಗೌರವ ವರ್ಧಿಸಿತು. ನನ್ನ ಸಾಮರ್ಥ್ಯಗಳನ್ನು ಅಂಗೀಕರಿಸುವ ಕೆಲವರಾದರೂ ಈ ಊರಲ್ಲಿ ಇದ್ದಾರೆಂಬ ಭಾವನೆ ನನ್ನಲ್ಲಿ ಹೊಸ ಜೀವನವನ್ನು ಚಿಗುರಿಸಿತು.

ಒಂದು ದಿನ ಮಿಸೆಸ್ ಕುಮಾರ ಕೇಳಿದಳು: "ನೀವು ಸಿನಿಮಾದಲ್ಲಿ ಅಭಿನಯಿಸಬಾರದೇಕೆ? ಯು ಲುಕ್ ಹ್ಯಾಂಡ್ಸಮ್. ಒಳ್ಳೇ ಎತ್ತರ ವಿದ್ದೀರಿ ಅಮಿತಾಬ್‌ನಂತೆ."

ನಾನು ಸುಮ್ಮನೆ ಒಂದು ಸುಳ್ಳು ಹೇಳಿದೆ. "ಕೆಲವು ಆಫರ್‌ಗಳು ಬಂದಿದ್ದವು. ನಾನೇ ಬೇಡ ಎಂದೆ. ಅದೆಲ್ಲ ಸುಮ್ಮನೆ ತಲೆನೋವು. ಆದರೂ ಒಳ್ಳೇ ಚಾನ್ಸ್ ಸಿಕ್ಕಿದರೆ ಒಂದು ಕೈ ನೋಡುತ್ತೇನೆ!" ಏನೇ ಇರಲಿ, ಮಿಸೆಸ್ ಕುಮಾರಳಿಗೆ ಸೌಂದರ್ಯ ಪ್ರಜ್ಞೆ ಇದೆ. ಕುಮಾರನಂತೆ ಆಕೆ ಕಂಟ್ರಿ ಅಲ್ಲ.

ಹೀಗಿರಲು ಕುಮಾರ ಮೂರು ದಿನ ಶೇವ್ ಮಾಡಲಿಲ್ಲ. ಗಡ್ಡ ಬೆಳೆಸುವ ತಯಾರಿಯೇ?

ಅಲ್ಲ. ಕುಮಾರ ದಾಡಿ ಬೋಳಿಸಿದ. ಪೂರ್ಣ ಅಲ್ಲ. ಗಲ್ಲದ ಮೇಲೆ ಸ್ವಲ್ಪ ಉಳಿಸಿದ್ದಾನೆ. ನನಗೆ ನಗು ಬಂತು. ಗಂಡನನ್ನು ಪೂರ್ಣ ಮಾಡರ್ನ್ ಮಾಡಿಯೇ ತೀರುವೆನೆಂಬ ಹಟ ಹಿಡಿದಂತಿದೆಯಲ್ಲ ಮಿಸೆಸ್ ಕುಮಾರ!

ದಿಢೀರನೆ ಒಂದು ದಿನ ಕುಮಾರ ಮತ್ತು ಪತ್ನಿ ಮುಂಬಯಿಗೆ ಹೋದರು. ತಂದೆ ತಾಯಿಗಳನ್ನು ಕಾಣಲು ಹೋಗಬೇಕೆಂದು ಹೆಂಡತಿ ಒತ್ತಾಯಿಸುತ್ತಿದ್ದಾಳೆಂದು ಕುಮಾರ ಹೇಳಿದ. ಆದರೆ ಹಿಂದಿರುಗಿ ಬಂದದ್ದು ಕುಮಾರನೊಬ್ಬನೇ. ನಾನು ಕೇಳದೆಯೇ ಕುಮಾರ ಹೇಳಿದ. "ಬಂದ ದಿನದಿಂದಲೇ ಶುರು ಮಾಡಿದ್ದಳು ಮುಂಬಯಿ ಜಪ. ಹೋಗಿ ಇದ್ದು ಆಸೆ ತೀರಲಿ."

ಕುಮಾರ ಆವೇಶದಲ್ಲಿದ್ದ. ನಾನೇನೂ ಕೇಳಲಿಲ್ಲ. ಕುಮಾರನೇ ಹೇಳಿದ, ಹಾವ ಭಾವಗಳೊಂದಿಗೆ, "ಮುಂಬಯಲ್ಲಿ ಅದಿದೆ. ಇಲ್ಲಿ ಅದಿಲ್ಲವಲ್ಲ. ಮುಂಬೈಯಲ್ಲಿ ಇದು ಇದೆ. ಇಲ್ಲಿ ಇದಿಲ್ಲ. ಮುಂಬೈ...ಮುಂಬೈ... ಮುಂಬೈ. ನಾನೇನೇ ಆದರೂ ಮುಂಬೈಗೆ ಹೋಗಲು ನಿರ್ಧರಿಸಿಲ್ಲ. ಹೊನ್ನು ಕೊಟ್ಟರೂ ನಾನು ಆ ಕಾಂಕ್ರೀಟ್ ಕಾಡಿಗೆ ಹೋಗೋದಿಲ್ಲ. ಅವಳು ಇದ್ದು ಆಸೆ ತೀರಿದ ಬಳಿಕ ಬರಲಿ. ಒಳ್ಳೆಯ ಪರಿಪೂರ್ಣ ಮನಸ್ಸಿದ್ದರೆ ಮಾತ್ರ ಹಿಂದಿರುಗಿ ಬಂದರೆ ಸಾಕು ಎಂದು ಹೇಳಿದ್ದೇನೆ. ನನ್ನಿಂದ ಸಾಧ್ಯವಿಲ್ಲ ಇನ್ನು ಈ ಕಾಟ ತಾಳಲು."

ಕುಮಾರ ಮೇಜಿನ ಮೇಲಿದ್ದ ಮ್ಯಾಗಸಿನ್ ತೆಗೆದುಕೊಂಡು ಮುಖಚಿತ್ರ ನೋಡಿದ. ಆದರೆ ಮನಸ್ಸು ಬೇರೆಲ್ಲೋ ಇದ್ದುದರಿಂದ ಪತ್ರಿಕೆಯನ್ನು ಪುನಃ ಮೇಜಿನ ಮೇಲೆ ಎಸೆದು, "ಮುಂಬಯಿಗೆ ಟ್ರಾನ್ಸ್‌ಫರ್ ಸಿಗುತ್ತೆ ಎಂದು ಹೇಳಿದುದರಿಂದ ಮದುವೆಗೆ ಒಪ್ಪಿದಳಂತೆ! ಈಗ ತಪ್ಪು ನನ್ನದೆ...! ನಿಜ ಹೇಳಬೇಕೆಂದರೆ ಮದುವೆಗೆ ಮುಂಚೆ ನನ್ನಲ್ಲಿ ಕೆಲವು ಆದರ್ಶಗಳಿದ್ದವು"... ಅಂದ ಕುಮಾರನ ಕಣ್ಣುಗಳು ಹೊಳೆದವು. ಆರ್ದ್ರವಾದ ಸ್ವರದಲ್ಲಿ ಕುಮಾರ ಹೇಳಿದ: "ಹಳ್ಳಿಯ ಮುಗ್ಧ ಹೆಣ್ಣು ಶಾಲೀನ..." ಸುಂದರಿಯಾದ ಆ ಗ್ರಾಮೀಣ ಕನ್ನಿಕೆಯನ್ನು ಸ್ವಪ್ನದಲ್ಲಿ ಕಂಡಂತೆ ಕುಮಾರ ನಿಶ್ಶಬ್ಧವಾಗಿ ಕುಳಿತ. ಸ್ವಲ್ಪ ಹೊತ್ತಿನ ಬಳಿಕ ಒಂದು ದೀರ್ಘ ನಿಃಶ್ವಾಸದೊಂದಿಗೆ ಅವನು ಭಾಷಣವಾರಂಭಿಸಿದ. "ಕೊನೆಗೆ ನನಗೆ ಸಿಕ್ಕಿದುದೋ? ಶಿವನೇ... ಬಂದ ದಿನವೇ ನಾನು ನೇರವಾಗಿ ಹೇಳಿಬಿಟ್ಟೆ. ಈ ಸ್ಲೀವ್‌ಲೆಸ್ ಎಲ್ಲಾ ಇಲ್ಲಿ ಬಳಕೆಯಲ್ಲಿಲ್ಲ! ನನಗೆ ಅದು ಹಿಡಿಸೋದಿಲ್ಲ!" ಈಗ ಕುಮಾರನ ದನಿ ಸ್ವಲ್ಪ ಏರಿತು; "ಹುಂ! ನೋಡಿದವರು ಏನಂದಕೊಳ್ಳುತ್ತಾರೆ ಗೊತ್ತೆ? ಹುಂ! ಆ ಜೀನ್ಸ್ ಷರ್ಟ್, ಸಣ್ಣ ಮಗು ನೋಡು ಜೀನ್ಸ್ ಹಾಕಿ ನಡೆಯಲು."

ಕುಮಾರ ಉಸಿರಾಡಿದ ಸ್ವಲ್ಪ ನಿಲ್ಲಿಸಿ. ವಿಷಯ ಸ್ವಲ್ಪ ಜಟಿಲವಾಗಿದೆ ಎಂದು ನನಗೆ ಅರಿವಾಯಿತು. ಕ್ರಮೇಣ ಕುಮಾರನ ಮುಖದ ಸ್ನಾಯುಗಳ ಬಿಗಿತ ಸಡಿಲವಾಯಿತು. ಹಳೆಯ ಶಾಂತತೆ ಹಿಂತಿರುಗಿತು. ಮನದ ಭಾರ ಇಳಿದಂತೆ ತೋರಿತು. "ಹೆಣ್ಣು ಹುಡುಗಿಯರಿಗೆ ಇರಬೇಕಾದುದು ದೊಡ್ಡ ಅಕ್ಯಾಡೆಮಿಕ್ ಕ್ವಾಲಿಫಿಕೇಷನ್ ಅಲ್ಲ. ಸ್ವಲ್ಪ ಅಚ್ಚುಕಟ್ಟುತನ" ಎಂದು ಒಂದು ತತ್ವವನ್ನು ಸಾರಿ ಕುಮಾರ ಕೊನೆಗೆ ಎದ್ದುಹೋದ.

ಹೀಗೇ ಎರಡು ದಿನ ಕಳೆಯಿತು. ಅಂದು ಆಫೀಸ್‌ನಿಂದ ಕುಮಾರ ಬಂದುದು ಸೀದಾ ನನ್ನ ಕೋಣೆಗೆ. ಉತ್ಸಾಹವಿಲ್ಲದೆ ಕುರ್ಚಿಯಲ್ಲಿ ಬಿದ್ದುಕೊಂಡು ಮೈ ಚಾಚಿ ಒಂದು ನಿಟ್ಟುಸಿರು ಬಿಟ್ಟ. ಮೂರೇ ದಿನದಲ್ಲಿ ಕುಮಾರ ಸುಸ್ತಾಗಿದ್ದಾನೆ. ಕಣ್ಣುಗಳಲ್ಲಿ ಹಿಂದಿನ ಹೊಳಪಿಲ್ಲ ವಿಷಾದ ಭಾವ.

ಕುಮಾರ ಕುರ್ಚಿಯಲ್ಲಿ ಬಾಗಿ ಕುಳಿತು ತಲೆಯನ್ನು ಬೆರಳುಗಳಿಂದ ಒತ್ತಿ ಹಿಡಿದು ಹೇಳಿದ. "ತುಂಬಾ ತಲೆನೋವು. ಸರಿಯಾಗಿ ನಿದ್ರಿಸದುದರಿಂದ ಇರಬೇಕು." ಸ್ವಗತವೆಂಬಂತೆ ಕುಮಾರ ಮುಂದುವರಿಸಿದ. "ತುಂಬಾ ಬೋರ್ ಹೊಡೀತಿದೆ. ಮೊದಲೆಲ್ಲಾ ಆಫೀಸ್ ಬಿಟ್ಕೊಡನೆ ಮನೆಗೆ ಹೋಗಲು ಎಷ್ಟು ಉತ್ಸಾಹವಿರುತ್ತಿತ್ತು ಹೆಂಡತಿ ಕಾದಿರುತ್ತಾಳೆ ಎಂದುಕೊಂಡು. ಈಗ ಮನೆಗೆ ಹೋಗಬೇಕೆಂದೇ ಅನಿಸುತ್ತಿಲ್ಲ. ಅಲ್ಲಿಗೆ ಹೋದರೆ ಅತ್ಯಂತ ಏಕಾಂತತೆ

ಎನಿಸುತ್ತದೆ."

ಕೇಳಿದಾಗ ನಗು ಬಂತು. 'ಮೊದಲು' ಅಂತೆ! ಮದುವೆಯಾಗಿ ಮೂವತ್ತು ದಿನಗಳೇ ಕಳೆದಿರುವುದು; ಮೂವತ್ತು ವರ್ಷಗಳು ಕಳೆದಿರುವಂತೆ ಬೇಸರ ಮತ್ತು ಏಕಾಂತತೆಯ ವರ್ಣನೆಗಳು.

ಕುಮಾರ ಟೀಪಾಯಿಯ ಮೇಲೆ ಕಾಲುಗಳನ್ನು ಚಾಚಿ ಕುಳಿತ. ಅವನನ್ನು ಗಾಢವಾದ ಚಿಂತೆಯಲ್ಲಿ ಮುಳುಗಲು ಬಿಟ್ಟು ನಾನು ಅಡಿಗೆ ಕೋಣೆಗೆ ಹೋದೆ. ಚಹಾ ಮಾಡಿ ಎರಡು ಕಪ್‌ಗಳಲ್ಲಿ ತುಂಬಿಕೊಂಡು ಹಿಂದಿರುಗಿದೆ.

ಚಹಾವನ್ನು ಒಂದು ಸಲ ಗುಟುಕರಿಸಿ ಕುಮಾರ ಹೇಳಿದ. ಮೊದಲೆಲ್ಲ ಉಷಾಗೆ ಚಹಾ ಮಾಡಲು ಸಹ ಬರುತ್ತಿರಲಿಲ್ಲ. ಎಲ್ಲವನ್ನೂ ಅವಳು ತಕ್ಷಣ ಕಲಿತಳು. ಉಷಾ ಈಗ ಅತ್ಯಂತ ಚೆನ್ನಾಗಿ ಚಹಾ ಮಾಡಲು ಬಲ್ಲಳು.

ತಾನು ಭಾವನಾವಿವಶನಾಗಿ ಹೇಳಿದುದನ್ನು ತಿದ್ದಿ ಹೇಳುವ ಆತುರ ಕುಮಾರನಲ್ಲಿತ್ತು. ಏನೇ ಆದರೂ ಕುಮಾರ ಓರ್ವ ಗಂಡ ತಾನೇ, ಅಥವಾ 'ಹೆಣ್ಣಿನ ಗುಲಾಮ' ತಾನೇ? ಮದುವೆಯಾದ ಬಳಿಕ ಎಲ್ಲಾ ಗಂಡಸರೂ ಹೇಗೆ 'ಹೆಣ್ಣಿನ ಗುಲಾಮ'ರಾಗುತ್ತಾರೇನು?

"ಎಲ್ಲಾ ತಪ್ಪುಗಳೂ ಇಂದಿನ ವಿದ್ಯಾಭ್ಯಾಸ ಪದ್ಧತಿಯಿಂದೇ." ಕೊನೆಗೆ ಕುಮಾರನು ದಾರಿ ಬದಲಾಯಿಸಲು ಅವಕಾಶ ಕಂಡುಕೊಂಡ. ವಿದ್ಯಾಭ್ಯಾಸ ಪದ್ಧತಿ! ಎಂಥಾ ಒಂದು ಸಿಲಬಸ್ ರಾತ್ರಿ ಹಗಲು ಓದಿದರೂ ಮುಗಿಯೋಲ್ಲ. ನಂತರ ಅಡಿಗೆ ಕೋಣೆಗೆ ಹೋಗಲು ವೇಳೆ ಎಲ್ಲಿದೆ? ಓದು ಮುಗಿದೊಡನೆ ಮದುವೆಯೂ ಆಗಿಹೋಯ್ತು. "ಪಾಪ ಉಷಾ!" ಅತಿಯಾದ ಪಾಪ ಪ್ರಜ್ಞೆ ಕುಮಾರನ ಧ್ವನಿಯಲ್ಲಿ ವ್ಯಕ್ತವಾಯಿತು.

"ನಾನು ಹಳ್ಳಿಯಲ್ಲಿ ಹುಟ್ಟಿ ಬೆಳೆದವನು. ಉಷಾ ಸಿಟಿಯಲ್ಲಿ ಬೆಳೆದವಳು. ನಮಗಿಲ್ಲದ ಕೆಲವು ಗುಣಗಳು ಸಿಟಿಯಲ್ಲಿ ಬೆಳೆದವರಿಗಿರುತ್ತವೆ."

ಹೊಸ ಸಂಶೋಧನೆ!

"ಉಷಾ ಎಷ್ಟು ಸ್ಮಾರ್ಟ್! ಒಂದು ಕೆಲಸವನ್ನು ಅವಳಿಗೆ ಒಮ್ಮೆ ತೋರಿಸಿ ಕೊಟ್ಟರೆ ಸಾಕು. ಹೇಳಿದರೆ ನಂಬೋಲ್ಲ. ಎರಡು ವಾರಗಳಲ್ಲಿ ಉಷಾ ಕುಕ್ಕಿಂಗ್ ಪೂರ್ಣ ಕಲಿತಳು."

ಕುಮಾರನ ಸುಭಾಷಿತಗಳನ್ನೆಲ್ಲಾ ರೆಕಾರ್ಡ್ ಮಾಡಿಡುವುದು ಅಗತ್ಯ ಎಂದು ನನಗೆ ತೋರಿತು.

ಹೆಣ್ಣಿನ ಗುಲಾಮ ಎಂದು ನೂರು ಸಲ ಕೂಗಿ ಹೇಳಲೇ? ಕ್ಷಮೆ ಕೇಳಿ ಹೆಂಡತಿಯ ಕಾಲು ಹಿಡಿದು ಗಂಡುಕುಲಕ್ಕೆ ಅವಮಾನ ಮಾಡಲೂ ಈ ಗುಲಾಮ ಹಿಂಜರಿಯುವವನಲ್ಲ. ನನ್ನ ಧಾರ್ಮಿಕ ರೋಷ ಹೊತ್ತಿ ಉರಿಯತೊಡಗಿತು. "ಒಳ್ಳೇ ಮನಸಿದ್ದರೆ ಮಾತ್ರ ಇಲ್ಲಿಗೆ ಬಂದರೆ ಸಾಕು ಎಂದು ಹೇಳಿಯೂ ಬಿಟ್ಟೆ" ಎಂದೂ ಹೇಳಿದ. "ಬರಲು ಇಷ್ಟವಿಲ್ಲ" ಎಂದು ಮುಖಕ್ಕೆ ಹೊಡೆದಂತೆ ಹೇಳಬೇಕಿತ್ತು ಅವಳು. ನನ್ನ ಹಟ ಹೆಚ್ಚುತ್ತಲೇ ಇತ್ತು. ಹಿಂದೆ ಗಂಡನ ಜೊತೆ ಸೀತೆ ಹೊರಟಿದ್ದಳು ಎಂದು ಈಗಿನ ಕಾಲದ ಹುಡುಗಿಯರು ಅದಕ್ಕೆ ತಯಾರಿಲ್ಲ. ಅವಳಿಗೆ ಬೇಕಾದ ವಿಷಯ ಚರ್ಚಿಸಲು ನಾನೊಬ್ಬ ಇಲ್ಲಿ ಇಲ್ಲದಿದ್ದರೆ ಮಜಾ ಇರುತ್ತಿತ್ತು. ಅದನ್ನೆಲ್ಲಾ ನೆನೆಸಿಕೊಂಡಷ್ಟೂ ನನ್ನ ಧಾರ್ಮಿಕ ರೋಷ ಹೆಚ್ಚುತ್ತಲೇ ಇತ್ತು.



"ರಂಗಪ್ಪನಾಯ್ಕ್ರು ನಿಮ್ಮ ಸಾಲಾನ ನೀವು ಮೇಲೆ ಬಂದಾಗ್ಲೇ ಕೊಡ್ತಾರಂತೆ. ಸಾಯೋಕ್ಮುಂಚೆ ಹೇಳಿದ್ರು."

ಎರಡು ದಿನಗಳ ಬಳಿಕ ಸಂಜೆ ಕುಮಾರ ರೂಮಿಗೆ ಬಂದ. ಏನೋ ದೊಡ್ಡ ದುರಂತ ನಡೆದಂತೆ ಅಸ್ವಸ್ಥನಾಗಿದ್ದ. ಕುರುಚಲು ಗಡ್ಡ ಬೆಳೆದ ಮುಖದಲ್ಲಿ ದುಃಖ ಹರಿದು ಬಂದಿತ್ತು.

ಕುಮಾರ ನನ್ನನ್ನು ಕರೆದ. "ಬಾ, ನಾವು ಹೊರಗಡೆ ಸ್ವಲ್ಪ ಸುತ್ತಾಡಿ ಬರೋಣ."

ಬಹುತೇಕ ನಿರ್ಜನವಾದ ಪ್ರದೇಶದಲ್ಲಿ ನಾವು ಒಟ್ಟಾಗಿ ನಡೆದೆವು. ಕುಮಾರ ಏನೂ ನುಡಿಯು ತ್ತಿಲ್ಲ. ನಮ್ಮಿಬ್ಬರ ನಡುವೆ ನಿಶ್ಶಬ್ದತೆ ಅತಿಯಾದ ಅಗಲುವಿಕೆ ಉಂಟುಮಾಡುವಂತಿತ್ತು. ಕೈಗಳೆರ ಡನ್ನೂ ಜೇಬಿನಲ್ಲಿಳಿಬಿಟ್ಟು ತಲೆ ತಗ್ಗಿಸಿ ನಡೆಯು ತ್ತಿರುವ ಕುಮಾರನನ್ನು ಅಂದು ಮೊದಲ ಬಾರಿಗೆ ನಾನು ಅನುಕಂಪದಿಂದ ನೋಡಿದೆ. ನನ್ನಂತೆ ಉತ್ಸಾಹಿಯಾಗಿ, ಸ್ವತಂತ್ರನಾಗಿ, ಹಗುರವಾಗಿ ನಡೆದವನೇ ಇವನೂ, ಕೇವಲ ಮೂವತ್ತು ದಿನ ಗಳ ಹಿಂದಿನ ವರೆಗೆ.

ಮುಖ್ಯ ರಸ್ತೆಯಲ್ಲಿ ಜನಸಂದಣಿ ಹೆಚ್ಚಾಗ ತೊಡಗಿತ್ತು. ಕೆಲಸ ಮುಗಿದು ಸಂಜೆ ಗೂಡು ಸೇರಲು ಆತುರದಿಂದ ಧಾವಿಸುವ ಪಯಣಿಗರು ನಮ್ಮನ್ನು ದೂಡಿ ಸರಿಸಿ ಮುಂದೆ ಸಾಗಿದರು.

ಕುಮಾರ ನನ್ನನ್ನೂ ಕರೆದುಕೊಂಡು 'ಬಾರ್' ಪ್ರವೇಶಿಸಿದ. 'ಬಾರ್'ನೊಳಗಿನ ಮಂಕು ಬೆಳಕು ಶೋಕಮೂಕವಾದ ವಾತಾವರಣಕ್ಕೆ ಇಂಬು ಕೊಟ್ಟಿತು. ಕುಮಾರ ಅತಿ ಅಪರೂಪ ವಾಗಿ ಮದ್ಯ ಸೇವಿಸುವವನು. 'ಬಾರ್'ನಲ್ಲಿ ಕುಡಿಯುವುದನ್ನು ಇಂದು ಮೊದಲ ಸಲ ನೋಡುತ್ತಿದ್ದೇನೆ.

ಮೇಜಿನ ಎದುರು ಬದುರು ಕುಳಿತು ಪಿಸು ಮಾತಾಡುವ ಮಧ್ಯವಯಸ್ಕರನ್ನು ನೋಡುತ್ತಾ ಕುಮಾರ ಗ್ಲಾಸನ್ನೆತ್ತಿ ತುಟಿಗೆ ತಾಗಿಸಿದ. ಎಷ್ಟೋ ಹೊತ್ತಿನ ಬಳಿಕ ಮದ್ಯ ನೀಡಿದ ಹೊಸ ಚೈತನ್ಯದಿಂದ ಕುಮಾರ ಬಾಯಿ ತೆರೆದ. "ಉಷಾ ಬರೋಲ್ಲ. ಇನ್ನು ನಾನು ಕರೆದರೂ ಅವಳು ಬರೋಲ್ಲ. ಎಲ್ಲರಿಗೂ ಇರುವುದಿಲ್ಲವೇ ಅವರವರ ಅಭಿಮಾನ. I have hurt her feelings."

ಸ್ವಲ್ಪ ಹೊತ್ತು ಏನೋ ಆಲೋಚಿಸಿ ಪುನಃ ಶುರು ಮಾಡಿದ. "ಅಡಿಗೆಯಲ್ಲಿ ಅವಳು ನಿಷ್ಣಾತ ಳಲ್ಲ ಎಂದವಳು ಚೆನ್ನಾಗಿ ತಿಳಿದಿದ್ದಳು. ಆಮುವ ರಿಂದ ಬಡಿಸುವಾಗಲೇ ಅಪರಾಧಿಯಂತೆ ಅವಳು ಹೇಳುತ್ತಿದ್ದಳು, 'ಒಂದೂ ಚೆನ್ನಾಗಿಲ್ಲ ನೋಡಿ. ಅನ್ನ ಸ್ವಲ್ಪ ಜಾಸ್ತಿ ಬೆಂದಿದೆ, ಇಲ್ಲದಿ ದ್ದರೆ ಸಾರಿಗೆ ಖಾರ ಜಾಸ್ತಿಯಾಯಿತು' ಎಂದೆಲ್ಲಾ. ಒಂದು ದಿನ ಅವಳು ಮಾಡಿದ ಸಾಂಬಾರು ತುಂಬಾ ಚೆನ್ನಾಗಿದೆ ಎಂದು ಅಭಿ ನಂದಿಸಿದಾಗ ಅವಳ ಸಂತೋಷವನ್ನು ನೋಡ ಬೇಕಿತ್ತು. ಪಾಪ ಉಷಾ!"

ಕುಮಾರ ಗ್ಲಾಸನ್ನೆತ್ತಿ ಒಂದೇ ಗುಟುಕಿಗೆ ಎಲ್ಲ ವನ್ನು ಒಳಕ್ಕೆ ಸೇರಿಸಿದ. ಪುನಃ ಆಲೋಚಿಸ ತೊಡಗಿದ. ಅವನ ಕಂಗಳು ಹನಿಗೂಡಿದವು. ಕಣ್ಣೊರೆಸಿಕೊಳ್ಳುತ್ತಾ ಹೇಳತೊಡಗಿದ. "ಅವಳು ಸಣ್ಣ ಮಕ್ಕಳಂತೆ ನಾನೇನೇ ಹೇಳಿದರೂ ಒಂದಕ್ಕೂ ಎದುರುತ್ತರ ನೀಡಿಲ್ಲ ಇದುವರೆಗೂ. ನಾನು ಮುನಿಸಿಕೊಂಡು ಮಲಗಿ ದರೆ ಅವಳು ಕೈಯಲ್ಲೊಂದು ಬಿಸ್ಕಿಟ್ ಹಿಡಿದು ಮೆಲ್ಲನೆ ಒಳಗೆ ಬರುವಳು. ಬಿಸ್ಕಿಟ್ ಚೂರುಗ ಳನ್ನು ನನ್ನ ಬಾಯಿಯಲ್ಲಿರಿಸಿ ನನ್ನ ಮುನಿಸು ಇಳಿಯಿತೇ ಎಂದು ಉತ್ಕಂಠತೆಯಿಂದ ನೋಡು ತ್ತಿದ್ದಳು. ಪಾಪ ಉಷಾ!'"

ಪುನಃ ಮುಂದುವರಿದ. "ಒಮ್ಮೆ ಏಕೊ ಅವ ಳನ್ನು ಕಾಡಿಸಲು ನಾನು ಟೆರೇಸ್‌ಗೆ ಹೋಗಿ ಅವಿತುಕೊಂಡೆ. ಅವಳು ನನ್ನನ್ನು ಎಲ್ಲಾ ಕೋಣೆಗಳಲ್ಲೂ ಅರಸಿ, ಕೊನೆಗೆ ಹೊರಗಿನ ಗೇಟ್ ಬಳಿ ಕಾದು ನಿಂತು, ಒಳಗೆ ಬಂದಾಗ ನಾನಲ್ಲೇ ಇದ್ದೆ. ಅವಳ ಮುಖ ಆಗ ನೋಡಬೇಕಿತ್ತು. ಹನಿದುಂಬಿದ ಕಂಗಳಿಂದ ಕೇಳಿದಳು. 'ಎಲ್ಲಿ ಅವಿತ ದ್ದೀರಿ? ನಾನೆಲ್ಲೆಲ್ಲಿ ಹುಡುಕಿದೆ ಗೊತ್ತೆ?'

ಕುಮಾರ ಕರ್ಚೀಫ್‌ನಿಂದ ಮುಖವೊರೆಸಿ ಪುನಃ ಹೇಳಿದ, "ಎರಡು-ಮೂರುದಿನ ನಾನು ಜ್ವರ-ನೆಗಡಿ ಆಗಿ ಮಲಗಿದ್ದೆನಲ್ಲ. ಪರವಾಗಿಲ್ಲ ಎಂದು ಹೇಳಿದ್ದರೂ ರಾತ್ರಿ ಪ್ರತಿ ಗಂಟೆಗೊಮ್ಮೆ ಎದ್ದು ಅವಳು ನನ್ನ ಮೈ ಮುಟ್ಟಿ ನೋಡು ತ್ತಿದ್ದಳು. ಸಣ್ಣ ಜ್ವರವೊಂದನ್ನು ಅಲಕ್ಷಿಸಿದುದ ರಿಂದ ಅದು ಹೆಚ್ಚಾಗಿ ಅವರ ಪಕ್ಕದ ಮನೆಯ ಮುದುಕರೊಬ್ಬರು ಮರಣ ಹೊಂದಿದುದನ್ನು ಅವಳು ಸ್ಮರಿಸಿದಳು. ಪಾಪ ಉಷಾ!"

ಕುಮಾರನ ಕಣ್ಣುಗಳಿಂದ ಧಾರೆ ಧಾರೆಯಾಗಿ ಕಣ್ಣೀರು ಹರಿಯಿತು. ಅದನ್ನು ಕಂಡು ನನ್ನ ಸಹಾನುಭೂತಿಯು ಕಟ್ಟೆಯೊಡೆಯಿತು ನಾನು ತಿಳಿಯದೆ ಹೇಳಿಬಿಟ್ಟೆ. "ಪಾಪ ಕುಮಾರ!"

ಕುಮಾರನಿಗೆ ಏನೆಂದು ಸಮಾಧಾನ ಹೇಳುವುವೆಂದರಿಯದೆ ನಾನು ಪರಿತಪಿಸಿದೆ. ಪ್ರಧಾರಿಗಳು ಹೇಳುವಂತೆ "ನನಗೂ ಮಾತುಗಳೇ ಬರುತ್ತಿಲ್ಲ" ಕುಮಾರನ ಬಗ್ಗೆ ನನಗೆ ಅನುಕಂಪ ಮೂಡಿತು. ಮನುಷ್ಯರ ತಲೆ ಇಷ್ಟೇ. ಸುಖಕ್ಕಾಗ ಯಾರೂ ಮಿತಿಮೀರಿ ಸಂತೋಷಪಡಬಾರದು. ಸುಖದ ಹಿಂದೆಯೇ ದುಃಖ ಕಾದಿದೆ ಎಂಬ ವೇದಾಂತ ವಿಚಾರಗಳಲ್ಲಿ ಮುಳುಗಿ ನಾನಿದ್ದೆ. ಕುಮಾರನ ಬಗ್ಗೆ ನನಗಿದ್ದ ತಪ್ಪು ಕಲ್ಪನೆಗಳಿಗಾಗಿ ವಿಷಾದಿಸಿದೆ. ಕುಮಾರ ಹೀಗೆ ವೇಗೆಯನುಭವಿಸುವನೆಂದು ಯಾರು ಅರಿತಿದ್ದರು? ಆದರೆ ಈಗ ಅವನಿಗೆ ಹೇಗೆ ಸಹಾಯ ಮಾಡುವುದು ಎಂದು ಯೋಚಿಸಬೇಕಾಗಿತ್ತು. A-friend in need...

ನಾವು ಮನೆಗೆ ಬಂದೆವು. ಅವನಿಗೆ ಸುಖನಿದ್ರೆ ಕೋರಿ ನಾನು ರೂಮ್‌ಗೆ ಬಂದೆ. ಯೋಚನೆಗಳಿಂದಾಗಿ ನಿದ್ರೆ ಬರಲಿಲ್ಲ. ತಟ್ಟನೆ ನನಗೆ ತೋರಿತು,' ನಾನು ಹೇಳಿದರೆ ಮಿಸೆಸ್ ಕುಮಾರ ಒಂದು ಪುನರ್ ಪರಿಶೀಲನೆ ಮಾಡದೆ ಇರಲಾರಳು. ಅವಳಿಗೆ ಯಾರಲ್ಲಾದರೂ ಸ್ವಲ್ಪ ಗೌರವ ಇದ್ದರೆ ಅದು ನನ್ನಲ್ಲೇ ಅಲ್ಲವೇ? ನನ್ನ ಅಭಿಮಾನ ಸ್ವಲ್ಪ ಕಡಿಮೆಯಾದರೂ ಪರವಾಗಿಲ್ಲ, ಕುಮಾರನನ್ನು ಕಾಪಾಡಬೇಕು. ನಾನು ನಿರ್ಧರಿಸಿದೆ. ಇಲ್ಲದಿದ್ದರೆ ಅವನು ನನ್ನೆದುರೇ ಕುಡಿದು ಸಾಯುತ್ತಾನೆ. ನನ್ನಲ್ಲಿದ್ದ ದೀನಾನುಕಂಪ, ಮನುಷ್ಯತ್ವ ಧಿಡೀರನೆ ಮೈ-ಮುರಿದು ಎದ್ದವು.

ಬೆಳಿಗ್ಗೆ ಯಾರೋ ಗೇಟ್ ತಟ್ಟುವ ಶಬ್ದ ಕೇಳಿ ನಾನು ಎಚ್ಚೆತ್ತು ಎದ್ದು ಹೋಗಿ ನೋಡಿದಾಗ...

ಆಶ್ಚರ್ಯ! ಮಿಸೆಸ್ ಕುಮಾರ!

ಒಂದು ವಾರದಲ್ಲಿ ಹತ್ತು ವರ್ಷ ಹೆಚ್ಚಾದಂತೆ ಕಾಣುತ್ತಿದ್ದಳು. ಪ್ರಯಾಣದಿಂದ ಸುಕ್ಕು ಬಿದ್ದ ಸೀರೆ, ಬಾಚಿ ಹೆಣೆಯದ ತಲೆಗೂದಲು ಅವಳನ್ನು ಇನ್ನಷ್ಟು ಬಳಲಿದಂತೆ ಮಾಡಿದ್ದವು.

ಹೆಗಲಿನಿಂದ ಏರ್‌ಬ್ಯಾಗ್ ತೆಗೆದು ಕೈಯಲ್ಲಿ ಹಿಡಿದು, ಬತ್ತಿದ ಮುಗುಳ್ನಗುವಿನೊಂದಿಗೆ ನೇರವಾಗಿ ಹೋಗಿ ಮುಚ್ಚಿದ್ದ ಕುಮಾರನ ಮನೆ ಬಾಗಿಲನ್ನು ಅವಳು ಮೃದುವಾಗಿ ತಟ್ಟಿದಳು. ಬಾಗಿಲು ತೆರೆಯಲಿಲ್ಲ. ಒಳಗಿನಿಂದ ಚಿಲಕ ಹಾಕಲಾಗಿತ್ತು.

ಆತಂಕದಿಂದ ನಾನು ಓಡಿ ಹೋಗಿ ಜೋರಾಗಿ ಬಾಗಿಲು ತಟ್ಟಿದೆ. ಪುನಃ ಪುನಃ

ಬಾಗಿಲು ತೆರೆಯಿತು. ಕುಮಾರ, ಹೆಂಡತಿ ಪರಸ್ಪರ ಒಂದು ನಿಮಿಷ ನೋಡಿ ನಿಂತರು.

ತಟ್ಟನೆ ನನ್ನ ಇರುವಿಕೆಯನ್ನು ಪೂರ್ಣ ಅಲಕ್ಷಿಸಿ ಮಿಸೆಸ್ ಕುಮಾರ ತುಟಿಗಳನ್ನು ಅರಳಿಸಿ ಕುಮಾರನ ಎದೆಗೆ ಒರಗಿದಳು.

ನಾನು ಹಿಂತಿರುಗಿ ಬಂದೆ. ಎಲ್ಲಾ ಒಂದು ಸಿನಿಮಾದಂತೆ ನನಗೆ ತೋರಿತು. ಆದರೆ ಈ ರೀತಿಯ 'ಸುಖಾಂತ್ಯ'ವನ್ನು ಕಂಡಾಗ ಯಾವಾಗಲೂ ಉಂಟಾಗುತ್ತಿದ್ದ ಸಮಾಧಾನ, ಸಂತೋಷ ಈಗ ಉಂಟಾಗುತ್ತಿಲ್ಲ.

ಈ ವಿಶಾಲ ಪ್ರಪಂಚದಲ್ಲಿ ನಾನೊಬ್ಬನೇ ಏಕಾಂಗಿ, ನಿರಾವಲಂಬಿ ಎಂದು ನನಗೆ ತೋರುತ್ತಿದೆ.

ಒಮ್ಮೆ ಹಿಂದಿ ನಟ ಡೇವಿಡ್ ಮರೆತು ಸಲೂನೊಂದರ ಬಳಿ ಹೊಕ್ಕು ಕುರ್ಚಿಯಲ್ಲಿ ಕುಳಿತುಬಿಟ್ಟರು. ಡೇವಿಡ್‌ರ ತಲೆಯಲ್ಲಿದ್ದ ಕೆಲವೇ ಕೆಲವು ಕೂದಲುಗಳನ್ನು ಕುತೂಹಲದಿಂದ ನೋಡಿದ ನಾಯಿಂದ,

"ಸರ್! ಇವುಗಳನ್ನು ಕತ್ತರಿಸಬೇಕೋ ಅಥವಾ ಉದುರಿಸಬೇಕೋ?" ಎಂದು ಕೇಳಿದನಂತೆ!

–ಎಸ್. ವಿಶ್ವನಾಥ

# ಹಮ್ಮುರಾಬಿಯ ಇನ್ನೊಂದು ಮುಖ

ವೆಂಕಟರಮಣ ಬಳ್ಳ

[illegible] ಅದಕ್ಷತೆಯಿಂದ ರೋಗಿಯನ್ನು ಕೊಂದ [illegible], ಉದುರಿದ ಕಳಪೆ ಕಟ್ಟಡವನ್ನು ಕಟ್ಟಿದ [illegible] ಮತ್ತು ಓಡಿ ಹೋದ ಗುಲಾಮನಿಗೆ ಆಶ್ರಯದಾತನಾದವ — ಈ ಮೂವರಿಗೂ [illegible]ವಾದ ಲಕ್ಷಣ ಯಾವುದು ಎನ್ನುವ ಪ್ರಶ್ನೆ ತುಸು ವಿಲಕ್ಷಣವೇ. ಉತ್ತರ: ಈ ಮೂವರೂ ಮರಣದಂಡನೆಗೆ ಮಾತ್ರ ಅರ್ಹರು ಎಂದು. ಏಕೆಂದರೆ ಇವರು ಮೂರು ಸಾವಿರ ವರ್ಷಗಳ ಹಿಂದೆ ಬೆಬಿಲೋನಿಯಾದಲ್ಲಿ ಇದ್ದವರು ಮಾತ್ರ [illegible]. ಇವರು ಎಸಗಿದ ಅಪರಾಧಗಳು ಹಮ್ಮುರಾಬಿಯ ಶಾಸನದಲ್ಲಿ ಅಡಕವಾದವುಗಳು.

ಹಮ್ಮುರಾಬಿಯ ಶಾಸನವನ್ನು ೧೯೦೧ ರಲ್ಲಿ ಪ್ರಕಾಶಕ್ಕೆ ತರಲಾಗಿದ್ದು ಇದೀಗ ಪ್ಯಾರಿಸ್ಸಿನಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ. ಇರಾಣಿನ ಸೂಸ ನಗರದಲ್ಲಿ ಲಭ್ಯವಾದ ಈ ಏಳು ಅಡಿ ಎತ್ತರಕ್ಕೆ ನಿಂತಿರುವ ಕಪ್ಪು ಶಿಲಾಲೇಖವು ಪ್ರಾಚೀನ ಸೆಮೆಟಿಕ್ ಸಂಸ್ಕೃತಿಯ ಬಗೆಗೆ ನಿಜಕ್ಕೂ ದಂಗು ಬಡಿಸುವ ವಿಷಯಗಳನ್ನು ತಿಳಿಸುತ್ತದೆ. ಚೂಪು ಅಂಚುಗಳುಳ್ಳ ಅಕ್ಷರಮಾಲೆಯಲ್ಲಿ ಕೊರೆಯಲಾದ ಈ ಮುನ್ನೂರು ಕಾನೂನುಗಳ ಪಟ್ಟಿಯು ಎಷ್ಟು ವಿವರಗಳನ್ನೊಳಗೊಂಡಿದೆಯೆಂದರೆ, ಇವುಗಳ ಆಧಾರದಿಂದ ಪ್ರಾಚೀನ ಬೆಬಿಲೋನಿಯದ ಜನಜೀವನವನ್ನು ಯಥಾವತ್ತಾಗಿ ಚಿತ್ರಿಸುವುದು [illegible].

ಈ ಶಾಸನ ಹಮ್ಮುರಾಬಿಯನ್ನು ಅಮರನಾಗಿಸಿದೆ. ಆದರೆ ಆತ ಇನ್ನೂ ಕೆಲವು ಕಾರಣಗಳಿಗಾಗಿ ಮುಖ್ಯನಾಗುತ್ತಾನೆ. ಪರ್ಶಿಯನ್ ಕೊಲ್ಲಿಯಿಂದ ಉತ್ತರಕ್ಕೂ ಪಶ್ಚಿಮಕ್ಕೂ ಟೈಗ್ರಿಸ್–ಯೂಫ್ರೆಟಿಸ್ ಕಣಿವೆಯುದ್ದಕ್ಕೂ ಅಸ್ಸೀರಿಯದಿಂದ ಮೆಡಿಟರೇನಿಯನ್ ತೀರದ ವರೆಗೂ ವಿಶಾಲವಾಗಿ ಹರಡಿದ ಸಾಮ್ರಾಜ್ಯದ ಮಹಾರಾಜನಾದ ಈತ ಓರ್ವ ಪ್ರತಿಭಾವಂತ ಸೈನಿಕ ಹಾಗೂ ರಾಜನೀತಿಗಳ ತಜ್ಞನಾಗಿದ್ದ. ಮೂವತ್ತು ಲಕ್ಷ ಜನಸಂಖ್ಯೆಯ ಇವನ ಸಾಮ್ರಾಜ್ಯ ಪಶ್ಚಿಮ ಏಶಿಯಾದ ರಾಜನೈತಿಕ ಮತ್ತು ಧಾರ್ಮಿಕ ಕೇಂದ್ರವಾಗಿ ಬೆಳೆಯಿತು.

ಕ್ರಿಸ್ತಪೂರ್ವ ೨೦೬೭-ರ ಕಾಲಕ್ಕೆ ಎಮೊರೈ-ಟಿಕ್ ಅಥವಾ ಪಾಶ್ಚಾತ್ಯ ಸೆಮಿಟಿಕ್ ವಂಶದ ಆರನೆ ಅರಸನಾಗಿ ಬೆಬಿಲೋನಿಯದ ಗದ್ದುಗೆ-ಯನ್ನೇರಿದಾಗ ಹಮ್ಮುರಾಬಿಯ ಪ್ರಭಾವ ಈ ನಗರದ ಬಹಿರ್ವಲಯಗಳಲ್ಲಿ ಮಾತ್ರ. ಚಾಣಾಕ್ಷ ಆಡಳಿತ ನಿರ್ವಹಣೆಯಿಂದ, ದಕ್ಷ ಕಂದಾಯ ವಸೂಲಿಯಿಂದ ಆತ ತನ್ನ ಸೇನೆಯನ್ನು ಬಲಪಡಿಸಿದ. ರಾಜಧಾನಿಯ ಸೌಂದರ್ಯವನ್ನು ಹೆಚ್ಚಿಸಿದ. ಜನರಿಗೆ ಹೆಚ್ಚು ಹೆಚ್ಚು ಸವಲತ್ತು-ಗಳನ್ನು ನೀಡಿದ. ಈತನ ಆಳ್ವಿಕೆಯ ಕಾಲದಲ್ಲಿ ಕಿಷ್‌ನಿಂದ ಪರ್ಶಿಯನ್ ಕೊಲ್ಲಿಯ ವರೆಗೆ ಕಾಲುವೆಯೊಂದನ್ನು ತೋಡಲಾಯಿತು. ತನ್ಮೂಲಕ ಇಕ್ಕೆಲದ ಒಣ ಬಂಜರು ಪ್ರದೇಶ ಫಲವತ್ತಾದರೆ ಸದಾ ತಲೆ ತಿನ್ನುತ್ತಿದ್ದ ಟೈಗ್ರಿಸ್ ನದಿಯ ನೆರೆ ಪ್ರವಾಹ ನಿಯಂತ್ರಣಗೊಂಡಿತು.

ಐಹಿಕ ಅನುಕೂಲಗಳ ಜೊತೆ ದೇವಸ್ಥಾನಗಳನ್ನೂ ಕಟ್ಟಿಸಿಕೊಟ್ಟು ಜನರ ಆಧ್ಯಾತ್ಮಿಕ ಬದುಕಿಗೆ ಇಂಬು ಕೊಟ್ಟಾಗ ದೈವ ಸಹಾಯ ಹಮ್ಮುರಾಬಿಯದಾಯಿತು. ಮೆಸೊಪೊಟೇ-ಮಿಯಾದ ದೇವರುಗಳನ್ನೆಲ್ಲ ಸೇರಿಸಿ [illegible]

ಮಾತ್ರವೇ ಪ್ರಧಾನ ದೇವತೆಯೆಂದು ಸಾರಿದ್ದು ಈ ಎಲ್ಲ ಪ್ರದೇಶಗಳ ಮೇಲೆ ಪ್ರಭುತ್ವ ಗಳಿಸಲು ಹಮ್ಮುರಾಬಿಗೆ ಸಹಾಯಕವಾಯಿತು. ಪಕ್ಕದ ಕಿರಿ ರಾಜ್ಯಗಳು ಬೆಬಿಲೋನಿಯದ ಅಧಿಪತ್ಯಕ್ಕೆ ಒಳಗಾಗುವುದು ಕಷ್ಟವಾಗಲಿಲ್ಲ ಎಂಬುದನ್ನು ಹೇಳುವುದೇ ಬೇಡ.

ವೈರಿಗಳನ್ನು ದುರ್ಬಲಗೊಳಿಸಲು ಆತನು ಬಳಸುತ್ತಿದ್ದ ತಂತ್ರ ಒಂದೇ ಒಂದು, ಪ್ರತಿಯೊಬ್ಬರನ್ನೂ ಉಪಾಯದಿಂದ ತಮ್ಮ ಮಿತ್ರ ಪಕ್ಷಗಳಿಂದ ಬೇರ್ಪಡಿಸಿ ಆಮೇಲೆ ಬಗ್ಗಿಸುತ್ತಿದ್ದನೆಂಬುದನ್ನು ಎಲ್ಲ ಚರಿತ್ರಕಾರರೂ ಒಪ್ಪುತ್ತಾರೆ.

ಸೂರ್ಯದೇವನಿಂದ ('ಶಾಮಾಶ್') ಬಂದ ಈ ಶಾಸನವನ್ನು ಅಧಿಕೃತವಾಗಿ ಪಡೆಯುವ ಹಮ್ಮುರಾಬಿಯ ಚಿತ್ರದ ಕೆಳಗೆ ಅಧ್ಯಾಯ ಇಪ್ಪತ್ತೆಂಟು ಕಾಲಂಗಳಲ್ಲಿ ಈ ದೊರೆಯು ಹೇಳಿದ ಕಾನೂನುಗಳನ್ನು ಬರೆಯಲಾಗಿದೆ.

ಪ್ರಾರಂಭದ ಸೊಲ್ಲುಗಳೆಲ್ಲ ಸಾಕಷ್ಟು ಬರಿ ಪರಾಕುಗಳೇ ಆಗಿವೆ. "ಬುದ್ಧಿವಂತನಾದ ಮಹಾರಾಜ ಹಮ್ಮುರಾಬಿಯು ಸ್ಥಾಪಿಸಿದ ಅದ್ಭುತ ಶಾಸನವು ಈ ಮಣ್ಣಿಗೆ ಸಶಕ್ತ ಸರಕಾರವನ್ನೂ ಸುದೃಢ ಬೆಂಬಲವನ್ನೂ ಇತ್ತಿದೆ...ನನ್ನ ಸದಾ-ದ್ವಿವೇಕದಿಂದ ನಾನು ಅವನ್ನು ಉಳಿಸಿಕೊಂಡು

ದುರ್ಬಲರನ್ನು ಪ್ರಬಲರು ತುಳಿಯಕೂಡದು, ವಿಧವೆಯರಿಗೆ ಅನಾಥರಿಗೆ ರಕ್ಷಣೆ ಇತ್ಯಾದಿಗಳಾಗಿ..." ಇತ್ಯಾದಿಯಾಗಿವೆ.

ಶ್ರಮಿಕವರ್ಗದ ಸಮಸ್ಯೆಗಳಿಂದ ಹಿಡಿದು ವ್ಯಾಪಾರ ಸಂಬಂಧಗಳು, ವೈಯಕ್ತಿಕ ಗಾಯಗಳು, ಸಾಲ ಮರುಪಾವತಿ, ವಾರಸುದಾರ ಹಕ್ಕುಗಳು, ಕುರಿ ತುಪ್ಪಳ ತೆಗೆಯುವಿಕೆ, ಕಲಬೆರಕೆ ಸಾಮಾನುಗಳ ಮಾರಾಟ, ಕಳ್ಳತನ, ವ್ಯಭಿಚಾರ, ಗುಲಾಮರ ಪಲಾಯನ, ಯುದ್ಧರಂಗದಲ್ಲಿ ಹೇಡಿತನ ಇತ್ಯಾದಿಯಾಗಿ ಎಲ್ಲ ಬಗೆಯ ಅಪರಾಧಗಳ ಪಟ್ಟಿಯೂ ಲಭ್ಯವಾಗಿದ್ದು ಈ ಶಾಸನ ಕುತೂಹಲಕರವಾಗಿದೆ. 'ಶಠಂ ಪ್ರತಿ ಶಾಠ್ಯಂ' ಎನ್ನುವ ಮಾತನ್ನು ನಾವೆಲ್ಲ ಹಮ್ಮುರಾಬಿಯ ಶಾಸನಕ್ಕೇ ಅನ್ವಯಿಸಿ ಹೇಳುವುದಾದರೂ ಅದು ಪೂರ್ಣ ಸರಿಯಲ್ಲ. 'ಕಣ್ಣಿಗೆ ಕಣ್ಣು' ಕೀಳುವುದಲ್ಲ. ನಿಜವಾಗಿಯೂ ವೈದ್ಯನೊಬ್ಬ ಅಸಡ್ಡೆಯಿಂದ ರೋಗಿಯ ಸಾವಿಗೆ ಕಾರಣನಾಗಿದ್ದಿದ್ದರೆ ಶಿಕ್ಷೆಯನ್ನು ತಪ್ಪಿಸುವಂತಿಲ್ಲ. ಇದು ಈ ಶಾಸನದ ನಿಖರತೆ ಮತ್ತು ನಿಷ್ಠುರತೆ. ಮೇಸ್ತ್ರಿಯು (ಕಂಟ್ರಾಕ್ಟರ್?) ಕಟ್ಟಡ ಕಟ್ಟುವಲ್ಲಿ ನಿಜಕ್ಕೂ ಅಸಡ್ಡೆ ತೋರಿದ್ದು ಅದು ಬಿದ್ದು ಹೋದಲ್ಲಿ ಆತನಿಗೆ ಮರಣ ದಂಡನೆ ತಪ್ಪಿದ್ದಲ್ಲ.

ಇನ್ನು ಕೆಲವು ಸಂದರ್ಭಗಳಲ್ಲಿ ಶಿಕ್ಷೆ ನಿಜಕ್ಕೂ ತುಸು ಅತಿಯೆ. ಹರಿಯುವ ನೀರು ಆತನ ಪಾಲಿಗೆ ನ್ಯಾಯದೇವತೆಯಂತೆ.

ಒಂದು ಕೇಸನ್ನು ರಾಜಾಸ್ಥಾನದಲ್ಲಿ ನಿರ್ಣಯಿಸಲು ಸಾಧ್ಯವಾಗದೇ ಹೋದಲ್ಲಿ ಆರೋಪಿಯನ್ನು ಹರಿಯುವ ನೀರಿಗೆಸೆದರೆ ಸರಿ. ಆತ ಈಜಿ ಬಂದರೆ ನಿರ್ದೋಷಿಯೆಂದು ಅರ್ಥ! ಮುಳುಗಿದರೆ ಆತ ತಪ್ಪಿತಸ್ಥನೇ ಆದ್ದರಿಂದ ಸಂದೇಹದ ಲಾಭ ಚೆನ್ನಾಗಿ ಈಜು ಬಲ್ಲಾತನಿಗೆ ಮಾತ್ರ ಸಿಕ್ಕೀತಷ್ಟೆ. ತಂದೆಗೆ ಹೊಡೆಯುವಾತ, ಅಥವಾ ಇತರರ ವಸ್ತುಗಳನ್ನು ಕದಿಯುವಾತ ತನ್ನ ಕೈಗಳನ್ನು ಕಳಕೊಳ್ಳುತ್ತಾನೆ. ವ್ಯಾಪಾರಿ ಮೋಸ ಮಾಡಿದರೆ ತನ್ನೆಲ್ಲ ಸಂಪತ್ತನ್ನೂ ರಾಜನ ಬೊಕ್ಕಸಕ್ಕೆ ಸಮರ್ಪಿಸಬೇಕು. ಮೋಸಗಾರನಿಗೆ ಬರೆ ಎಳೆದು ತಲೆ ಬೋಳಿಸಿ ಅವನನ್ನು ದೇಶಭ್ರಷ್ಟಗೊಳಿಸಲಾಗುವುದು. ಸರಾಯಿ ಅಂಗಡಿಯಲ್ಲಿ ಕಾಣಸಿಗಬಹುದಾದ ಸಂನ್ಯಾಸಿನಿಗೆ ಮರಣ ದಂಡನೆ ಕಾದಿದ್ದು.

ಹಮ್ಮುರಾಬಿಯು ಶಾಸನದ ಪ್ರಕಾರ ಕೆಲಸಗಾರನಿಗೆ ಕ್ರಮಬದ್ಧವಾದ ಕೂಲಿ ಇದೆ. ಕೆಲಸದಲ್ಲಿ ಪ್ರೌಢಿಮೆಯನ್ನು ತೋರಿಸಿದವನಿಗೆ ಭತ್ಯಗಳೂ ಇವೆ. ಸಾಲ ಮರು ಪಾವತಿ ಮಾಡಲಾರದಾತ ತನ್ನನ್ನೇ ಮಾರಿಕೊಂಡು ಮೂರು ವರ್ಷಗಳ ಗುಲಾಮಗಿರಿಯ ಅನಂತರ ಆತ ಸ್ವತಂತ್ರನಾಗಬಹುದು. ಆದರೆ ಸಾಲಗಾರ ಪ್ರಕೃತಿ ವಿಕೋಪಗಳಿಂದ ಮರುಪಾವತಿ ಮಾಡಲಾರನಾದರೆ ಅಲ್ಲಿ ರಿಯಾಯಿತಿ ಇದೆ. ಕಳ್ಳತನದಿಂದ, ದರೋಡೆಯಿಂದ ಕಷ್ಟಕ್ಕೊಳಗಾದ ಕುಟುಂಬಗಳಿಗೆ ಸೂಕ್ತ ಪರಿಹಾರವನ್ನು ಇತ್ತ ಈ ಶಾಸನ ತುಂಬ ಪ್ರಗತಿಪರವೂ ಆಗಿತ್ತು. ಹಮ್ಮುರಾಬಿಯು ಒಬ್ಬ ಚಿಂತನಶೀಲನಾಗಿ ಗೋಚರಿಸುವುದು ಈ ಶಾಸನಗಳ ಕರ್ತೃವೆಂಬುದಕ್ಕಲ್ಲ. ಹಾಗೆ ನೋಡಿದರೆ ಈ ಶಾಸನದ ಕರ್ತೃ ಆತನಲ್ಲ. ಕಾನೂನುಗಳ ಪೈಕಿ ಹೆಚ್ಚಿನವುಗಳು ಸುಮರ್ ಮತ್ತು ಅಕ್ಕಡ್ ಇವರ ಬಳುವಳಿಯಾದರೂ ಹಮ್ಮುರಾಬಿ ಅವುಗಳನ್ನು ತನ್ನ ಸಾಮ್ರಾಜ್ಯದ ಹಾಗೂ ಜನರ ಉನ್ನತಿಗಾಗಿ ಬಳಸಿದನು. ಎಲ್ಲ ನಿಯಮಗಳನ್ನೂ ಒಂದೆಡೆ ಒಟ್ಟೈಸಿ ಅದಕ್ಕೊಂದು ರೂಪ ಕೊಟ್ಟು 'ಶಾಸನ' ಎನ್ನುವಂತಾದದ್ದು ಹಮ್ಮುರಾಬಿಯಿಂದ. ಸೆಮಿಟಿಕ್ ರಾಜರುಗಳ ಬುದ್ಧಿಮತ್ತೆಯನ್ನು ಚೆನ್ನಾಗಿ ಜಗತ್ತಿಗೆ ಹೇಳುವ, ಗುರುತಿಸಿ ತೋರಿಸುವ ಗುರುತರ ಕೆಲಸವನ್ನು ಹಮ್ಮುರಾಬಿ ಮಾಡಿದುದೇ ಇತಿಹಾಸಕಾರರು ಆತನನ್ನು ಚಿಂತನಶೀಲನೆಂದು ಗುರುತಿಸಲು ಕಾರಣವಾಯಿತು.

"ರೋಮನ್ನರು ಆಡಳಿತ ಮತ್ತು ವ್ಯವಸ್ಥೆಗೆ ಇತ್ತ ಕೊಡುಗೆಗೆ ಸಮಾನವಾದುದು ಹಮ್ಮುರಾಬಿಯ ಈ ಶಾಸನವಾಗಿದೆ" ಎಂದು ಖ್ಯಾತ ಇತಿಹಾಸಜ್ಞ ವಿಲ್ ಡ್ಯುರಾಂಟ್ ಹೇಳಿದ್ದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ✡

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

**೧. ಕೋರಕ**
(ಅ) ಹೂವಿನ ಮೊಗ್ಗು (ಆ) ಭಯಂಕರ (ಇ) ಅಂತರಂಗ (ಈ) ಆಶಿಸುವವ

**೨. ಕಾಲಕ್ಷೇಪ**
(ಅ) ಯಮರಾಯ (ಆ) ಶಿವ (ಇ) ತಾಸು ಬಾರಿಸುವಿಕೆ (ಈ) ಹೊತ್ತು ಕಳೆಯುವುದು

**೩. ಕೋರಾ**
(ಅ) ನಿರ್ದಯ (ಆ) ಭಿಕ್ಷೆ (ಇ) ಡೊಂಕು (ಈ) ಹೊಚ್ಚ ಹೊಸ

**೪. ಹಂಸತೂಲಿಕಾತಲ್ಪ**
(ಅ) ಮಾನಸ ಸರೋವರ (ಆ) ಮೆತ್ತನ್ನ ಹಾಸಿಗೆ (ಇ) ಹತ್ತಿ ಬಟ್ಟೆ (ಈ) ಕೊಬ್ಬಿದ ಮನುಷ್ಯ

**೫. ಅಜಿಂಕ್ಯ**
(ಅ) ನಿರ್ಭಯ (ಆ) ಬ್ರಹ್ಮ (ಇ) ಸೋಲಿಸಲಸಾಧ್ಯ (ಈ) ಮೌನ

**೬. ಒನೆ**
(ಅ) ಕುಟ್ಟು (ಆ) (ಧಾನ್ಯಗಳನ್ನು) ಹಸನು ಮಾಡು (ಇ) ಸೌಂದರ್ಯ (ಈ) ಮೋಟು

**೭. ಅಲಂಪು**
(ಅ) ನಿಷೇಧ (ಆ) ಸಾಕೆನಿಸುವುದು (ಇ) ದುಃಖಿಸು (ಈ) ಸೊಗಸು

**೮. ಆರ್ತಿ**
(ಅ) ಸಂಕಟ (ಆ) ಬೆಳಕು (ಇ) ಮುಟ್ಟಾಗುವುದು (ಈ) ಪ್ರೀತಿ

**೯. ಬ್ರಹ್ಮಬಂಧು**
(ಅ) ಬ್ರಾಹ್ಮಣರ ರಕ್ಷಕ (ಆ) ಜ್ಞಾನಿ (ಇ) ವಿದ್ಯೆಯಿಲ್ಲದ ಬ್ರಾಹ್ಮಣ (ಈ) ಬ್ರಹ್ಮದೇವರ ಭಕ್ತ

**೧೦. ಕೋವು**
(ಅ) ಸಿಟ್ಟು (ಆ) ಹಳ್ಳ (ಇ) ಜ್ಞಾನ (ಈ) ಬಂದೂಕು

**೧೧. ಮೂಗು ಮುರಿ**
(ಅ) ತಿರಸ್ಕಾರ ತೋರಿಸು (ಆ) ಮೂಗಿಗೆ ಗುದ್ದು (ಇ) ಸುಮ್ಮನಿರು (ಈ) ಹೆಮ್ಮೆ ತೋರಿಸು

**೧೨. ಶ್ರೋತವ್ಯ**
(ಅ) ಒಸರುವುದು (ಆ) ಕಿವಿ (ಇ) ಕೇಳತಕ್ಕದ್ದು (ಈ) ವೇದ

## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಕೋರಕ** (ಅ) ಹೂವಿನ ಮೊಗ್ಗು, ನನೆ, ಅರಳತೊಡಗಿದ ಹೂ, ಮುಗುಳು, ಕಮಲದ ದೇಟು. ಉದಾ:- ಹೃದಯ ಕೋರಕ ಅರಳಿತು [ಸಂ.]

೨. **ಕಾಲಕ್ಷೇಪ** (ಈ) ಹೊತ್ತು ಕಳೆಯುವುದು; ಹೊತ್ತು ಕಳೆಯಲು ಏನಾದರೂ ಕಾರ್ಯ; ತಡ ಮಾಡುವುದು ಉದಾ:- ಹರಿಕಥಾ ಕಾಲಕ್ಷೇಪ. [ಸಂ. ಕಾಲ = ಹೊತ್ತು + ಕ್ಷೇಪ = ಚೆಲ್ಲುವುದು.]

೩. **ಕೋರಾ** (ಈ) ಹೊಚ್ಚ ಹೊಸ; ಮಡಿಗೆ ಹಾಕದ ಹೊಸ ಬಟ್ಟೆ; ಒರಟು; ಖಾಲಿ; ಉದಾ:- ಕೋರಾ ಉಟ್ಟುಕೊಂಡು [ಹಿಂದಿ]

೪. **ಹಂಸತೂಲಿಕಾತಲ್ಪ** (ಅ) ಹಂಸಪಕ್ಷಿಯ ತುಪ್ಪಳದಿಂದ ಮಾಡಿದ ಹಾಸಿಗೆ; (ಆದ್ದರಿಂದ) ಮೆತ್ತನ್ನ ಹಾಸಿಗೆ, ಸುಪ್ಪತ್ತಿಗೆ. ಉದಾ:- ಹಂಸತೂಲಿಕಾತಲ್ಪದಲ್ಲಿ ಮಲಗಿದವರಿಗೆ ಬಡವರ ದುಃಖ ತಿಳಿದೀತ? [ಸಂ. ಹಂಸ + ತೂಲಿಕಾ = ತುಪ್ಪಳ + ತಲ್ಪ = ಹಾಸಿಗೆ.]

೫. **ಅಂಜಿಕ್ಯ** (ಇ) ಸೋಲಿಸಲಸಾಧ್ಯವಾದ ಗೆಲ್ಲಲಾಗದ, ಅಜೇಯ. ಉದಾ:- ಅಜಿಂಕ್ಯನಾದ ವೀರ. [ಮರಾಠಿ]

೬. **ಒನೆ** (ಅ) (ಅಕ್ಷರಶಃ) ಅತ್ತಿತ್ತ ಅಲುಗಾಡಿಸು; (ಆದ್ದರಿಂದ) ಮೊರದಲ್ಲಿ ಧಾನ್ಯಗಳನ್ನು ತೊನೆದು ಹಸನು ಮಾಡು. [ದೇಶ್ಯ]

೭. **ಅಲಂಪು** (ಈ) ಸೊಗಸು; ಅತಿಶಯ; ಪ್ರೀತಿ, ಆಸಕ್ತಿ. ಉದಾ:- ಅವಳ ಅಲಂಪುಗಾರಿಕೆ ಮನೋಹರ. [ದೇಶ್ಯ]

೮. **ಆರ್ತಿ** (ಅ) ಸಂಕಟ, ವ್ಯಥೆ; ದೈನ್ಯ, ದುಃಖ. ಉದಾ:- ಪರಮಾತ್ಮ, ಸಜ್ಜನರ ಆರ್ತಿ ಪರಿಹಾರಕ. [ಸಂ.]

೯. **ಬ್ರಹ್ಮಬಂಧು** (ಇ) (ವ್ಯಂಗ್ಯದಲ್ಲಿ) ಪಾಮರ ಬ್ರಾಹ್ಮಣ, ಹೆಸರಿಗಷ್ಟೇ ಬ್ರಾಹ್ಮಣ, ಬ್ರಾಹ್ಮಣನಾದರೂ ವಿದ್ಯಾಹೀನ. ಉದಾ:- ಬ್ರಹ್ಮಬಂಧುಗಳಿಗಾಗಿ ಪುರಾಣಗಳು ಇವೆ. [ಸಂ.]

೧೦. **ಕೋವು** (ಅ) ಎರಡು ದಿನ್ನೆಗಳ ನಡುವಣ ತಗ್ಗು, ಎಡೆ, ಮೂಲೆ; ಕೋಪು. ಉದಾ:- ಪಲಾಯನ ಮಾಡಿ ಕೋವುಗಳಲ್ಲಿ ಅಡಗಿದರು. [ದೇಶ್ಯ]

೧೧. **ಮೂಗು ಮುರಿ** (ಅ) ತಿರಸ್ಕಾರ ತೋರಿಸು, ತುಚ್ಛೀಕಾರ ವ್ಯಕ್ತಪಡಿಸು. ಉದಾ:- ಅವಳನ್ನು ಕಂಡರೆ ಮೂಗು ಮುರಿಯುತ್ತಾನೆ. [ಮೂಗು + ಮುರಿ = ಸೊಟ್ಟಗೆ ಮಾಡು]

೧೨. **ಶ್ರೋತವ್ಯ** (ಇ) ಕೇಳಿಕೊಳ್ಳತಕ್ಕದ್ದು; ಕೇಳಿ ತಿಳಿದುಕೊಳ್ಳಬೇಕಾದ ಸಂಗತಿ ಶಾಸ್ತ್ರ. ಉದಾ:- ವಕ್ತವ್ಯಗಳಂತೆ ಶ್ರೋತವ್ಯಗಳೂ ಇವೆ. [ಸಂ. = ಕೇಳತಕ್ಕದ್ದು]

●

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬-೮ ಸರಿಯಿದ್ದರೆ | ... | ಸಾಧಾರಣ |
| ೮-೧೦ ,, | ... | ಉತ್ತಮ |
| ೧೧-೧೨ ,, | ... | ಅತ್ಯುತ್ತಮ |

●



# ದುಂಬಿ ಭಕ್ಷಕ ರಂಗ ಪಕ್ಷಿ

ವ್ಹಿ. ಜಿ. ವಂಶ

ನೋಡಲು ಚಿಕ್ಕದಾದರೂ ಸಪ್ತ ವರ್ಣಗಳಿಂದ ಕೂಡಿದ ಈ ಅಂದವಾದ ಪಕ್ಷಿ ಪ್ರಸಂಗ ಬಂದಾಗ ಒಂದುಗೂಡಿ ಮಾನವನನ್ನೇ ಬೇಟೆ ಮಾಡುತ್ತದೆ. ವಿಷವನ್ನು ಹೊತ್ತು ತಿರುಗುವ ಜೀವಿಗಳನ್ನು ಆಹಾರವನ್ನಾಗಿ ಮಾಡಿಕೊಂಡಿರುವ, ತೀವ್ರವಾಗಿ ಓಡುವ ಕಾಡುಕೋಳಿಯ ಬೆನ್ನೇರಿ ಬೇಟೆಯಾಡುವುದು ಈ ದುಂಬಿ ಭಕ್ಷಕ ರಂಗ ಪಕ್ಷಿ. ಇದು ಸುಮಾರು ೬ ರಿಂದ ೧೪ ಅಂಗುಲ ಉದ್ದವಿದ್ದು ವಿಶಿಷ್ಟವಾದ ಬಣ್ಣ ಬಣ್ಣದ ಪುಕ್ಕ ಇದಕ್ಕಿದೆ.

ಕೆಲ ರಂಗ ಪಕ್ಷಿಗಳಿಗೆ ತೇಜಃಪುಂಜವಾದ ಪುಕ್ಕವಿದ್ದು ಅದರಲ್ಲಿ ಹಸಿರು ವರ್ಣ ಮುಖ್ಯವಾಗಿಯೂ ಹಳದಿ ಮತ್ತು ನೀಲಿ ವರ್ಣಗಳು ಗೌಣವಾಗಿಯೂ ಕಂಡುಬರುತ್ತವೆ. ಯುರೋಪಿನಲ್ಲಿ ವಾಸಿಸುವ ಜಾತಿ ಪ್ರಭೇದ ಬೇಸಿಗೆ ಕಾಲದಲ್ಲಿ ಇಂಗ್ಲಂಡಿಗೆ ವಲಸೆ ಹೋಗುತ್ತದೆ. ಇವುಗಳ ಹಾರಾಟ ಚಮತ್ಕಾರಕವಾಗಿದ್ದು ಗುಂಪುಗಟ್ಟಿ ಸದಾ ವೃತ್ತಾಕಾರದಲ್ಲಿ ಚಲಿಸುತ್ತವೆ.

ಸಾವಿರಾರು ದುಂಬಿ ಭಕ್ಷಕಗಳು ಗುಂಪುಗೂಡಿ ತಮ್ಮ ತಮ್ಮ ಗೂಡಿನತ್ತ ಹಾರುವದನ್ನಾಗಲಿ, ಆಹಾರದ ಸಲುವಾಗಿ ಒಂದು ಜಾಗೆಯಿಂದ ಮತ್ತೊಂದಕ್ಕೆ ಚಲಿಸುವ ದಶ್ಯವಾಗಲೀ ನಯನ ಮನೋಹರವಾಗಿರುತ್ತದೆ. ಇವುಗಳ ಬಹುಪಾಲು ವಾಸ ಉಷ್ಣವಾಯು ದೇಶಗಳಲ್ಲಿ

ಕೆಲವು ಮಾತ್ರ ಸಮಶೀತೋಷ್ಣ ಪ್ರದೇಶಗಳಲ್ಲಿ ವಾಸಿಸುತ್ತವೆ. ಆಸ್ಟ್ರೇಲಿಯದ ದುಂಬಿ ಭಕ್ಷಕ ನ್ಯೂಗಿನಿಗೆ ವಲಸೆ ಹೋಗುತ್ತದೆ. ಚಳಿಗಾಲದಲ್ಲಿ ಸಿಟಿಬೇಸ ಮತ್ತು ಮಡಗಾಸ್ಕರ ಪ್ರದೇಶದ ಪಕ್ಷಿಗಳು ಆಫ್ರಿಕಕ್ಕೆ ವಲಸೆ ಬರುತ್ತವೆ. ನವ್ಹಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ನೈಜೀರಿಯದ ತುಂಬೆಲ್ಲ ಈ ದುಂಬಿ ಭಕ್ಷಕ ರಂಗ ಪಕ್ಷಿಗಳನ್ನು ಕಾಣಬಹುದು.

ಇವು ಸಾಮಾನ್ಯವಾಗಿ ನದಿಯ ದಂಡೆಯ ಉಸುಕಿನ ಕೊರಕಲಿನಲ್ಲಿ ಹೋರುಮಾಡಿ ಗೂಡನ್ನು ತಯಾರಿಸುತ್ತವೆ. ಆಫ್ರಿಕದಲ್ಲಿ ಈ ಪಕ್ಷಿಗಳು ಕಾಡು ಹಂದಿ ಮಾಡಿದ ಕೊರಕಲಿನಲ್ಲಿ ಗೂಡನ್ನು ಕಟ್ಟುತ್ತವೆ. ಗೂಡು ಸಾಮಾನ್ಯವಾಗಿ ೨ ರಿಂದ ೩ ಅಂಗುಲ ಅಗಲ ವಾಗಿದ್ದು ೨ ರಿಂದ ೫ ಅಡಿ ಆಳವಾಗಿರುತ್ತದೆ. ಭೂ ಭಾಗವು ಮೃದುವಾಗಿದ್ದಲ್ಲಿ ಸುಮಾರು ೮ ಅಡಿ ಆಳದವರೆಗೂ ಇರುತ್ತದೆ. ಗೂಡು ಕಟ್ಟು ವದಕ್ಕಿಂತ ಮುಂಚೆ ಸ್ಥಳವನ್ನು ಪರೀಕ್ಷಿಸಿ ಪುನಃ ಪುನಃ ಹಾರಿ ಕೊಕ್ಕಿನಿಂದ ತೋಡಿ ಕೂಡಲು

## ಪ್ರೀತಿಯುನ್ಮಾದ

ಪ್ರೀತಿ ಪವನ
ಬೀಸಿ ಬಂದು
ಗಂಡು ಹೆಣ್ಣ ಮಿಲನ;
ಅಧರ ಪಾನ
ಈಂಟಿ ಸವಿದು
ಹೃದಯದಾಲಿಂಗನ;
ಮೌನ ಗಾನ
ಬಂಧ ಸೆಳೆದು
ಉನ್ಮಾದ ಸ್ನಾನ!

—**ದೊಡ್ಡರಂಗೇಗೌಡ**

ಜಾಗೆ ಮಾಡುತ್ತದೆ. ನಂತರ ಅಲ್ಲಿ ಕುಳಿತು ಕೊಕ್ಕಿನಿಂದ ಗುದ್ದಿ ೧೦ ರಿಂದ ೧೫ ದಿನಗಳಲ್ಲಿ ಗೂಡನ್ನು ತಯಾರಿಸುವದು. ಈ ಗೂಡಿನಲ್ಲಿ ಯಾವುದೇ ತರದ ಹೊದಿಕೆ ಇರುವದಿಲ್ಲ, ಪಚನವಾಗದ ಆಹಾರವು ಮಲ ರೂಪದಲ್ಲಿ ಗೂಡಿನಲ್ಲಿ ಸಂಗ್ರಹವಾಗುತ್ತದೆ. ಅದರ ಮೇಲೆ ತತ್ತಿಯನ್ನು ಇಡುತ್ತದೆ. ಈ ಗೂಡುಗಳನ್ನು ವರ್ಷಂಪ್ರತಿ ಉಪಯೋಗಿಸುತ್ತಿದ್ದು, ಬೇರೆ ಹುಳು ಹುಪ್ಪಡಿಗಳಿಂದ ತುಂಬಿದಲ್ಲಿ ಸ್ವಚ್ಛ ಮಾಡುತ್ತವೆ. ಈ ಗೂಡುಗಳು ಸಾಮಾನ್ಯವಾಗಿ ದಕ್ಷಿಣಾಭಿಮುಖವಾಗಿದ್ದು ಚಳಿಗಾಳಿಯಿಂದ ರಕ್ಷಣೆ ಪಡೆದಿರುತ್ತವೆ. ತತ್ತಿಯಿಡುವುದಕ್ಕಿಂತ ಮುಂಚೆ ಜೋಡಿಗಳು ಉಳಿದ ದುಂಬಿ ಭಕ್ಷಕ ಪಕ್ಷಿಗಳಿಂದ ರಕ್ಷಣೆ ಪಡೆಯುವುದರ ಸಲುವಾಗಿ ಗಿಡದ ತುದಿಯಲ್ಲಿಯೇ ಹೆಚ್ಚಾಗಿ ಕಾಲಕಳೆಯುತ್ತವೆ. ಗಂಡು ಮೆಚ್ಚಿಗೆಯಾದಲ್ಲಿ ಹೆಣ್ಣು ಗಂಡಿನ ಜೊತೆ ಕೂಡಲು ಪ್ರಾರಂಭಿ-ಸುತ್ತದೆ. ಈ ಕೂಡುವಿಕೆಯು ತತ್ತಿಯಿರುವವರೆಗೆ ಏಕ ಪ್ರಕಾರವಾಗಿ ಹಾಗೇ ಮುಂದುವರೆಯುತ್ತದೆ.

ಸಾಮಾನ್ಯವಾಗಿ ಇವು ನಾಲ್ಕರಿಂದ ಹತ್ತರ ವರೆಗೆ ತತ್ತಿಗಳನ್ನು ಹಾಕುತ್ತವೆ. ಗೂಡು ಇಕ್ಕಟ್ಟಾಗಿಯೂ ಆಳವಾಗಿಯೂ ಇದ್ದುದರಿಂದ ಬೇರೆ ಪಕ್ಷಿಗಳು ಇವುಗಳ ತತ್ತಿಗಳನ್ನು ತೆಗೆದುಕೊಂಡು ಹೋಗುವ ಭಯವಿಲ್ಲ. ತತ್ತಿಗಳು ಬೆಳ್ಳ-ಗಾಗಿರುವುದರಿಂದ ಉತ್ತಮ ಪರಾವರ್ತಕದಂತೆ ವರ್ತಿಸಿ ಜೋಡಿಗಳಿಗೆ ಬೇಗನೆ ಗುರುತಿಸಲು ಸಹಾಯವಾಗುತ್ತವೆ. ಹೆಣ್ಣು ದುಂಬಿ ಭಕ್ಷಕವು ರಾತ್ರಿ ಎಲ್ಲ ತತ್ತಿಯ ಮೇಲೆ ಕುಳಿತು ಬಿಲ-ದಲ್ಲಿಯೇ ಇರುತ್ತದೆ. ಆಗ ಗಂಡು ಗೂಡಿನ ಬದಿಯಲ್ಲಿರುವ ಗಿಡದಲ್ಲಿ ವಿಶ್ರಮಿಸಿಕೊಳ್ಳು-ವದು. ಕಾವು ಕೊಡುವಾಗ ಗಂಡು ದುಂಬಿ ಭಕ್ಷಕವು ಹೆಣ್ಣಿಗೆ ಆಹಾರ ಒದಗಿಸುವದು. ಮೊಟ್ಟೆಯೊಡೆದು ಮರಿಗಳಾದ ಮೇಲೆ ಗಂಡು ಹೆಣ್ಣು ಜೊತೆಯಾಗಿ ಮರಿಗಳಿಗೆ ಆಹಾರ ಒದ

ಗಿಸುತ್ತವೆ. ಮೂರು ವಾರಗಳಲ್ಲಿ ಮರಿಗಳ ಪಕ್ಕ ಬಲಿಯುತ್ತವೆ. ಆಗ ಮರಿಗಳು ತಮ್ಮ ಬಿಲದಿಂದ ಸುಮಾರು ಕೆಲ ಮೈಲು ಹಾರಾಡಿ ಪುನಃ ರಾತ್ರಿ ವಿಶ್ರಮಿಸಿಕೊಳ್ಳಲು ಬಿಲಕ್ಕೆ ಬರುತ್ತವೆ.

ಕೀಟಗಳು ಹಾರಾಡುವಾಗ ದುಂಬಿ ಭಕ್ಷಕಗಳು ಅವುಗಳನ್ನು ವೃತ್ತಾಕಾರವಾಗಿ ಗುಂಪು ಗೂಡಿ ಹಿಡಿಯುತ್ತವೆ. ಅಥವಾ ಗಿಡದ ಕೊಂಬೆಯ ಮೇಲಾಗಲಿ ತಾರು ತಂತಿಯ ಮೇಲಾಗಲಿ ಕುಳಿತು ಹಾರುವ ಕೀಟಗಳನ್ನು ಹಿಡಿಯುತ್ತವೆ. ಇವುಗಳ ಮುಖ್ಯ ಆಹಾರವೆಂದರೆ ದೊಡ್ಡ ನೊಣ, ಜೀರುಂಡೆ, ಪತಂಗ, ಕಣಜಿಗ ಮತ್ತು ದುಂಬಿಗಳು. ಆಫ್ರಿಕದಲ್ಲಿ ಮಿಡತೆಗಳನ್ನು ನಾಶ ಮಾಡುವ ಸಾಧನೆಗಳಲ್ಲಿ ಇವು ಮುಖ್ಯ ವಾಗಿವೆ.

ಸುದಾನಿನ ದುಂಬಿ ಭಕ್ಷಕ ರಂಗ ಪಕ್ಷಿಗಳು ಓಡುವ ಕಾಡುಕೋಳಿಯ ಬೆನ್ನೇರಿ ಕೀಟಗಳನ್ನು ಬೇಟೆಯಾಡುವುದೊಂದು ಮೋಜು. ನದಿದಂಡೆ ಯಲ್ಲಿ ವಾಸಿಸುವ ಈ ಪಕ್ಷಿಗಳು ಜಲ ಕೀಟ-ಗಳನ್ನು ಹಿಡಿಯುವವು.

ದುಂಬಿ ಭಕ್ಷಕ ರಂಗ ಪಕ್ಷಿಗಳ ಮುಖ್ಯ ವೈರಿಗಳು ಹಾವು ಮತ್ತು ದೊಡ್ಡ ಓತಿಕಾಟಗಳು; ಇವು ಬಿಲದಲ್ಲಿ ನಿರಾಯಾಸವಾಗಿ ಹೊಕ್ಕು ತತ್ತಿ ಮತ್ತು ಮರಿಗಳನ್ನು ತಿನ್ನುತ್ತವೆ. ಕೆಲಸಲ ದೊಡ್ಡ ಹಕ್ಕಿಗಳನ್ನು ಬೇಟೆಯಾಡಬಲ್ಲವು; ಆಫ್ರಿಕನ್ನರು ಇವುಗಳನ್ನು ಕೊಂದು ಅಂದ ಚಂದ ವಾದ ಪಕ್ಕವನ್ನು ತಮ್ಮ ಉಡುಪಿನ ಸೌಂದರ್ಯ ಹೆಚ್ಚಿಸುವದರ ಸಲುವಾಗಿ ಬಳ-ಸುವರು. ಈ ಭಯದಿಂದ ತಪ್ಪಿಸಿಕೊಳ್ಳಲು ಈ ಪಕ್ಷಿಗಳು ಒಟ್ಟುಗೂಡಿ ಕೆಲಸಲ ವೈರಿಯ ಮೇಲೆರಗಿ ತಮ್ಮ ವಾಸ ಸ್ಥಾನದಿಂದ ಬಹುದೂರ ಬೆನ್ನಟ್ಟುತ್ತವೆ.

ಒಮ್ಮೆ ಈ ಪಕ್ಷಿಗೆ ದುಂಬಿಯನ್ನು ಕೊಡ-ಲಾಗಿ ತನ್ನ ಚುಂಚಿನಿಂದ ಅಪರ ಕಟಿ ಭಾಗವನ್ನು ಹಿಡಿದು ಕೀಟದ ತಲೆಯನ್ನು ಒಂದೆರಡು ಸಲ ಮೇಲಕ್ಕೆ ತಟ್ಟಿತು. ವಿಷ ಭಾಗ ಹೊರ ಹೋದ ಮೇಲೆ ಪುನಃ ಕಟಿ ಭಾಗವನ್ನು ತಿಂದಿತು. ಆದರೆ ಬೇರೆ ಕೀಟವನ್ನು ಕೊಡಲಾಗಿ ಹಿಡಿದು ಒಮ್ಮೆಲೇ ತಿಂದಿತು. ವಿಷ ಕೀಟಗಳನ್ನು ಗುರು ತಿಸುವುದು ದುಂಬಿ ಭಕ್ಷಕ ಪಕ್ಷಿಗೆ ಸ್ವಭಾವತಃ ಬಂದಿರುವದೋ ಅಥವಾ ದುಂಬಿಗಳ ಕಡಿತ-ವನ್ನು ಅನುಭವಿಸಿ ಕಲಿತಿರುವದೋ ಎಂಬುದನ್ನು ಇನ್ನೂ ತಿಳಿಯಬೇಕಾಗಿದೆ. ✡



ಒಂದು ನೂತನ ಜೋಡಿ ಮದುವೆಯಾಗಿ ಸುಮಾರು ಎರಡು ತಿಂಗಳು ಕಳೆದಿತ್ತು. ಗಂಡ ಬಹು ಆಲಸ್ಯ ಮನೋಭಾವದವನು. ಯಾವಾಗಲೂ ವಿರಾಮ ಇದ್ದಲ್ಲಿ ನಿದ್ದೆಯೇ ಆತನ ಮುಖ್ಯ ಕೆಲಸ, ಗಂಡನ ಈ ಅಭ್ಯಾಸವನ್ನು ಕಂಡು ರೋಷಗೊಂಡ ಆ ಹೆಣ್ಣು ಆತನಲ್ಲಿ "ನೀವು ಇದೇ ರೀತಿ ಮಗುವಿನ ಹಾಗೆ ಮಲಗಿಕೊಂಡಿದ್ದಲ್ಲಿ, ಒಂದು ಮಗು ಕೂಡಾ ನಿಮಗೆ ಆಗಲಾರದು," ಎಂದಳು ಆವೇಶದಿಂದ.

✡ ✡

ಆತ : ಇದೊಂದು ನೂತನ ನವ್ಯಕಲೆ.
ಈತ : ಅಲ್ಲಯ್ಯ; ಅದು ದರ್ಪಣ.

–ಸಂಗ್ರಹ : ಕಾಸರಗೋಡು ಮಂಜುನಾಥ



# ಪಕ್ಷಾಂತ

**ಕೇಶವ ಎಸ್. ವಟಿ**

ನಾಲ್ಕು ವರ್ಷಗಳಲ್ಲಿ ಊರು ಹೇಗೆ ಬದಲಾಗಿರಬಹುದು? ನಾಗರಿಕತೆ ಎಷ್ಟರಮಟ್ಟಿಗೆ ನನ್ನ ತವರನ್ನ ಹೊಕ್ಕಿರಬಹುದು? ಜನ ಯಾವ ರೀತಿ ಬದಲಾಗಿರಬಹುದು? ಸಾಧಾರಣ ವ್ಯಕ್ತಿಯಾಗಿ ಊರಿಂದ ಹೊರಬಿದ್ದು ಈಗ ದೊಡ್ಡದಾಗಿ ಬಂದ ನನ್ನನ್ನು ಜನ ಹೇಗೆ ನಡೆಸಿಕೊಳ್ಳಬಹುದು? ಆಗಿನ ಕಾಲಕ್ಕೆ ನನ್ನ ಪ್ರಿಯಾತಿಪ್ರಿಯರೆನಿಸಿದ್ದ, ನನ್ನ ಪ್ರಾಣವೆನಿಸಿದ್ದ ನನ್ನ ಸ್ನೇಹಿತರು ಈಗ ಹೇಗಿರಬಹುದು? ನನ್ನನ್ನಿಂದು ಹೇಗೆ ಸ್ವಾಗತಿಸಬಹುದು? ನನ್ನೊಡನೆ ಈಗ ಹೇಗೆ ಸ್ಪಂದಿಸಬಹುದು? ನನ್ನೊಡನೆ ಇಂದೂ ಸದರವನ್ನು ತೋರುವರೆ–ಅಥವಾ ನನಗೆ ಬೇಡದ ದೊಡ್ಡಸ್ತಿಕೆ ಕೊಟ್ಟು, ಅತಿ ಆದರ ಗೌರವದ ನಾಟಕವಾಡುವರೇ?... ಎಂದೆಲ್ಲಾ ಯೋಚಿಸುತ್ತಾ ಬಂದೆ...

ಊರು ಬಿಟ್ಟು ನಾಲ್ಕು ವರ್ಷಗಳೇ ಕಳೆದಿದ್ದವು. ಸಾಧಾರಣ ರೈತನ ಮಗನಾಗಿದ್ದ ನಾನು ಇದ್ದಕ್ಕಿದ್ದಂತೆ ಪಟ್ಟಣ ಸೇರಿಬಿಟ್ಟೆ. ಬ್ಯಾಂಕ್ ಧನ ಸಹಾಯದಿಂದ ಸ್ವಂತ ಉದ್ಯಮವನ್ನು ಪ್ರಾರಂಭಿಸಿ ಬಿಟ್ಟೆ. ಈ ನಾಲ್ಕು ವರ್ಷಗಳಲ್ಲಿ ಉದ್ಯಮ ಜೋರಾಗಿ ಬೆಳೆದು ನನಗೆ ಶ್ರೀಮಂತಿಕೆಯ ದರ್ಪವನ್ನೂ ವೈಭವದ ಜೀವನವನ್ನೂ ತಂದುಕೊಟ್ಟಿದ್ದವು. ನನ್ನವರನ್ನು ಬೆರೆಯಲು ಅದಮ್ಯ ಆಕಾಂಕ್ಷೆ ಇದ್ದರೂ ಬಿಡುವಿಲ್ಲದೆ ಊರಿಗೆ ಬರಲಾಗಿರಲಿಲ್ಲ. ಈಗ ತಂಗಿಯ ಮದುವೆಗೆಂದು ಬಂದಿದ್ದೆ.

*

ಮದುವೆ ಕಾರ್ಯಕ್ರಮಗಳೆಲ್ಲ ಮುಗಿದವು. ನನ್ನ ಹಳೆಯ ಸ್ನೇಹಿತರೆಲ್ಲರ ಭೇಟಿಯೂ ಆಯಿತು. ಊರಿಗೆ ಬರುವ ಮೊದಲು, ಬಂದಾಗಿನಿಂದ ನಾನು ನೋಡಬೇಕೆಂದುಕೊಂಡಿದ್ದವಳು 'ಅವಳು.' ಸರಳವಾಗಿ ಹೇಳಬೇಕೆಂದರೆ ನಾನು ಅವಳನ್ನು ಪ್ರೀತಿಸುತ್ತಿದ್ದೆ. ಯೌವನದ ಆರಂಭದ ದಿನಗಳವು. ನನ್ನ ವರ್ತುಲದೊಳಗೆ ಬಂದ ಮೊದಲ ಹುಡುಗಿ. ನನ್ನ ಬಿಟ್ಟು ಅವಳಿಲ್ಲ, ಅವಳ ಬಿಟ್ಟು ನಾನಿಲ್ಲ ಎಂಬಂತಾಗಿದ್ದೆವು. ಕಾಲಕ್ರಮದಲ್ಲಿ ನಾನು ಪಟ್ಟಣ ಸೇರಿದೆ. ಅವಳ ಸಂಪರ್ಕ ತಪ್ಪಿತು. ಯಾರೊಡನೆಯೋ ಅವಳ

ಮದುವೆಯೂ ಆಯಿತು... ತನ್ನನ್ನು ನನಗೆ ಸಂಪೂರ್ಣ ಅರ್ಪಿಸಿಕೊಂಡಿದ್ದ, ನನ್ನನ್ನು ಪೂರ್ಣ ಆವರಿಸಿಕೊಂಡಿದ್ದ, ನನಗೆ ತನ್ನ ಗುಂಗನ್ನು ಹಿಡಿಸಿದ್ದ ಗೃಹಿಣಿಯಾದ ಹೆಣ್ಣು ಈಗ ಹೇಗಿರ ಬಹುದು? ಈಗ ನನ್ನ ನೋಡಿ ಅವಳಲ್ಲಿ ಯಾವ ಭಾವನೆ ಸ್ಫುರಿಸಲು ಸಾಧ್ಯ? ಎಂದೆಲ್ಲಾ ಕುತೂ ಹಲ. ಎಲ್ಲಕ್ಕಿಂತ ಹೆಚ್ಚಾಗಿ ಅವಳನ್ನು ನೋಡ ಬೇಕು, ಮಾತಾಡಬೇಕು ಎಂಬ ಮೂಲಭೂತ ಹಂಬಲ.

ಸಂಜೆ ಆರತಕ್ಷತೆಯ ಸಂಭ್ರಮದ ನಡುವೆ ಬಿಡುವಿನಲ್ಲಿ ಹೊರಗೆ ಅನಿರೀಕ್ಷಿತವಾಗಿ ಏಕಾಂತ ದಲ್ಲಿ ಒಂದೆರಡು ನಿಮಿಷ ಮಾತ್ರ ಸಿಕ್ಕಳು ಸುಮಾ. ಸಂಭ್ರಾಂತನಾದ ನಾನು ಮಾತಿಗಾಗಿ ಪದಗಳಿಗಾಗಿ ತಡಕಾಡುತ್ತಿದ್ದ ಸಮಯದಲ್ಲಿ ಅವಳೆಂದಳು,

"ಶಶಿ... ನೀ ಬರ್‍ತೀಯಾ ಅಂತ ತುಂಬಾ ನಿರೀಕ್ಷಿಸಿದ್ದೆ. ನೀ ಬಂದದ್ದು ತುಂಬಾ ಸಂತೋಷ. ನಿನಗೆ ನಾನು ನನ್ನ ಕಥೆ ಹೇಳಬೇಕು. ಕೇಳಲು ಆಸೆ ಇದ್ದರೆ ತೋಪಿಗೆ ಬರ್‍ತೀಯಾ? ನಿನ್ನೊಡನೆ ತುಂಬಾ ಮಾತಾಡಬೇಕು; ಆ ಮರ...ನಮ್ಮ ಮಾವಿನ ಮರ...ನೆನಪಿದೆಯಲ್ಲ. ಅಲ್ಲಿ ಕಾದಿ ರ್‍ತೀನಿ. ತಪ್ಪದೆ ಬಾ ಶಶಿ..." ಎಂದು ಯಾವ ಭಾವೋದ್ರೇಕವೂ ಇಲ್ಲದೆ ಸರಳವಾಗಿ ಹೇಳಿ ಹೋದಳು. ಆ ಕ್ಷಣದಲ್ಲಿ ಉಂಟಾದ ಭಾವೋ ದ್ರೇಕದಿಂದ ಸುಧಾರಿಸಿಕೊಳ್ಳಲು ಒಂದರೆಗಳಿಗೆ ಬೇಕಾಯಿತು.

*

ಹೊಳೆಯ ಬಳಿಯ ತೋಪಿನ ಬಳಿಗೆ ಕಾರು ಹೋಗುವ ಹಾಗಿರಲಿಲ್ಲವಾಗಿ ನಡೆದೇ ಹೋದೆ. ಅಮ್ಮ ಕೇಳಿದ್ದಳು,

"ಎಲ್ಲಿಗೋ ಹೊರಟೆ?"

"ಹೀಗೇ ಅಮ್ಮ ತಿರುಗಾಡೋದಕ್ಕೆ, ಹಳೆಯ ನೆನಪುಗಳನ್ನು ಕೆದಕೋದಕ್ಕೆ" ಎಂದಿದ್ದೆ.

ಡ್ರೈವರ್ "ಸಾಬ್ ಕಾರು?" ಎಂದದ್ದಕ್ಕೆ "ರೆಸ್ಟ್" ಅಂದು ಹೊರಟೆ. ಕೊನೆಯ ಮಾತು ತನ್ನದೇ ಆಗಬೇಕೆಂದು ಅಪ್ಪನೊಡನೆ ಸಾಧಿಸುವ ಅಮ್ಮ, "ಬೇಗನೆ ಬಾ, ಕತ್ತಲಲ್ಲಿ ಬರಬೇಡ" ಅಂದಳು. ಇಂದು ನಾನು ಝಗಝಗಿಸುವ ಪಟ್ಟಣದಲ್ಲಿರಬಹುದು. ಆದರೆ ನಾನು ಹುಟ್ಟಿದ್ದು, ಬೆಳೆದದ್ದು, ಓಡಾಡಿ ನೆಗೆದಾಡಿ ಬಿದ್ದದ್ದು, ಬಿದ್ದು ಮೈ ಕೈಯನ್ನು ಮುರಿದುಕೊಳ್ಳುತ್ತಿದ್ದುದು ಇದೇ ಹಳ್ಳಿಯ ಕತ್ತಲೆಯಲ್ಲಿಯೇ ಅಲ್ಲವೆ?– ಹಾಗೆಂದುಕೊಂಡು ಹೊರಟಿದ್ದೆ ತೋಪಿನ ಕಡೆಗೆ.

ತೋಪಿನ ನಡುವಿನ ಮಾವಿನ ಮರ.

ನನ್ನ ಮನಸ್ಸಿನಲ್ಲಿ ಎಂದೆಂದೂ ಮಾಸದ ನೆನ ಪನ್ನುಳಿಸಿರುವ ಮಾವಿನ ಮರ. ಅಲ್ಲೆ ಅಲ್ಲವೆ– ನಾನು ಬಾಲ್ಯ ಕಳೆದು ಯೌವನದ ಪ್ರಥಮ ಮೆಟ್ಟಿಲೇರಿದ್ದು – ಬಾಳಿನಲ್ಲಿ ರಸವಿದೆ ಎಂದು ಅರಿತಿದ್ದು...

ಹಳೆಯ ನೆನಪುಗಳೆಲ್ಲ ಮೆಲ್ಲಮೆಲ್ಲನೆ ಮೈದಾಳಿ ಮೇಲೆ ಬರುತ್ತಿರಲು ನಾನು ಆ ಮರವನ್ನು ಸಮೀಪಿಸಿದೆ.

"ಬಾ ಶಶಿ, ಕೂತ್ಕೋ."

ಸುಮಳ ಮೆಲು ಧ್ವನಿ. ನಾಲ್ಕು ವರ್ಷಗಳ ಹಿಂದೆ ನನ್ನನ್ನು ಹುಚ್ಚನನ್ನಾಗಿ ಮಾಡುತ್ತಿದ್ದ ಧ್ವನಿ. ಈಗ ಅದು ಪರರ ಸೊತ್ತು. ನನ್ನದಾಗ ಬೇಕಾದ್ದು, ಆಗಲೇಬೇಕಾದ್ದು ಆಗಲಿಲ್ಲ...ನನ ಗೇನೂ ಮಾತಾಡಲು ತೋಚಲಿಲ್ಲ. ಸುಮ್ಮನೆ ಕುಳಿತೆ.

"ನಡೆದೇ ಬಂದೆಯಾ ಶಶಿ? ಕಾರು ತರಲಿಲ್ಲ ವೇಕೆ? ಹ್ಞಾಂ... ನಿನ್ನನ್ನು ಶಶಿ ಅನ್ನಬಹುದು ತಾನೆ? ಏಕ ವಚನದಲ್ಲಿ ಕರೆಯಬಹುದು ತಾನೆ?"

ಸುಮಳ ಮಾತುಗಳಲ್ಲಿ ನನ್ನನ್ನು ಕುರಿತಾದ ತಿರಸ್ಕಾರವಿದೆಯಾ? ಅವಹೇಳನ ಮಾಡುವ ಭಾವವಿದೆಯಾ? ಸುಮಾ ನನ್ನನ್ನು ತಾತ್ಸಾರ ಮಾಡುತ್ತಿದ್ದಾಳಾ? ತಿಳಿಯಲಿಲ್ಲ.

"ಹ್ಞಾಂ. ನೀನು ನನ್ನನ್ನು ಶಶಿ ಅನ್ನಲಾಗಲಿ, ಏಕವಚನದಲ್ಲಿ ಕರೆಯಲಾಗಲಿ, ಸ್ವತಂತ್ರಳು. ಹಾಗೆ ಕರೆದರೇನೇ ಬಿಚ್ಚು ಮನಸ್ಸಿನ ಮಾತುಕತೆ

ಸಾಧ್ಯ. ನಿನಗೆ ಮದುವೆಯಾಗಿರಬಹುದು, ನಾನು ಈಗ ನಿನ್ನಿಂದ ದೂರವಿರಬಹುದು. ಆದರೆ ನಮ್ಮ ಗೆಳೆತನ ಸರಳತೆಯನ್ನು ಕಳೆದು ಬಿಗುವಾಗುವ ಅವಶ್ಯಕತೆ ಇಲ್ಲ."

"ಹಾಗಾದರೆ ಬಹಳ ಬಹಳ ಸಂತೋಷ ಶಶಿ."

"ನನ್ನನ್ನು ಇಲ್ಲಿಗೆ ಕರೆದದ್ದೇಕೆ ಸುಮಾ?"

"ಯಾಕೆ?...ಗೊತ್ತಾಗಲಿಲ್ಲವಾ ಶಶಿ? ಈ ಮಾವಿನ ಮರ ನಮ್ಮ ಜೀವನದಲ್ಲಿ ಎಂತಹ ಮಹತ್ತರ ಪಾತ್ರ ವಹಿಸಿದೆ ಗೊತ್ತಿಲ್ಲವಾ? ಇಲ್ಲಿಗೆ ಕರೆದದ್ದರ ಕಾರಣ ಗೊತ್ತಾಯಿತಾ ಶಶಿ? ನಮ್ಮ ಹಳೆಯ ಭಾವನೆಗಳಲ್ಲಿ ಬಿಚ್ಚಿಕೊಳ್ಳಬೇಕು. ಹೊಸ ಭಾವನೆಗಳಲ್ಲಿ ಅನಾವರಣಗೊಳ್ಳಬೇಕು- ಆ ಸವಿಯ ಗುಂಗಿನಿಂದ ಹೊರಬಂದ ನಂತರ... ನಂತರ ನೀನು ನನ್ನ ಪ್ರಸಕ್ತ ಕಥೆಯನ್ನು ಕೇಳಬೇಕು..."

...ಹಳೆಯ ನೆನಪುಗಳು ಎಷ್ಟು ಮಧುರ!?

ನಾವು ವಿದ್ಯಾಭ್ಯಾಸಕ್ಕೆ ಪಕ್ಕದೂರಿಗೆ ಈ ತೋಪಿನ ಪಕ್ಕ ತಾನೆ ಹೋಗುತ್ತಿದ್ದುದು. ಪುಟ್ಟ ಹುಡುಗಿ ಸುಮಳ ಬೆಂಗಾವಲಾಗಿ ನನ್ನನ್ನು ನಂಬಿದ್ದರು. ಶಾಲೆಗೆ ಹೋಗುವಾಗ, ಹಿಂತಿರುಗುವಾಗ ತೋಪಿನ ತೊರೆಯ ಮರಳಲ್ಲಿ ನಮ್ಮ ಹುಡುಗುತನದ ಆಟಗಳು. ತೋಪಿನಲ್ಲಿದ್ದ ಏಕೈಕ ಮಾವಿನ ಮರದ ಕೆಳಗೆ ನಮ್ಮ ನಲಿದಾಟ. ಹಣ್ಣಿನ ಕಾಲದಲ್ಲಿ ನಾರು ಹಣ್ಣು ತಿಂದು, ಹಲ್ಲಿನ ಸಂದಿಯಲ್ಲಿ ನಾರು ಸಿಕ್ಕಿ ಗೋಳಾಡುತ್ತಿದ್ದಾಗ ನಾನು ನಕ್ಕದ್ದು, ನಂತರ ಅವಳ ಬಾಯಿಗೆ ಕೈಯಿಟ್ಟು ನಾರು ಹುಡುಕಿ ತೆಗೆದ ನಂತರ ಅವಳು 'ಶ್ಶಿ... ಎಂಜಲು... 'ಎಂದು ಹಳ್ಳಕ್ಕೆ ಕರೆದೊಯ್ದು ಕೈ ತೊಳೆಯುತ್ತಿದ್ದುದು ಎಲ್ಲಕ್ಕೂ ಈ ಮಾವಿನ



ಮರ ಸಾಕ್ಷಿ. ಬೆಳೆದು ದೊಡ್ಡವರಾದ ಮೇಲಿನ ಪ್ರೇಮ ಪ್ರಕರಣಗಳಿಗೂ ಈ ಮಾವಿನ ಮರವೇ ಸಾಕ್ಷಿ. ಇದೇ ಮಾವಿನ ಮರದ ಕೆಳಗೇನೆ ಅವಳು ನನ್ನನ್ನು ಬಳಸಿ ಮೆಲುವಾಗಿ 'ಶಶಿ!... ಶಶಿ!! ಶಶಿ!!!' ಎಂದುಸುರುತ್ತಿದ್ದುದು. ಇಲ್ಲೇ ಅವಳು ತನ್ನ ಗುಂಗು ಹಿಡಿಸಿದುದು...ಹಳೆಯ ನೆನಪಿನಿಂದ ಹೊರಬಂದು ಅಂದೆ.

"ಸುಮಾ."

"ಯಾಕೆ ಶಶಿ, ನಾನು ನಿನ್ನನ್ನು ಹಿಂದಿನಂತೆ 'ಶಶಿ' ಎಂದೆ ಕೂಗುವಾಗ ನೀನೇಕೆ ಸುಮಾ ಎನ್ನಬೇಕು? ನಿನ್ನ ಹಳೆಯ ಧಾಟಿಯಲ್ಲಿಯೇ 'ಸುಮಿ' ಎಂದು ಕೂಗಬಾರದೆ?"

"ಹಾಗೆ ಅನ್ನುವ ಹಕ್ಕು ನನಗೆ ಇಲ್ಲ ಸುಮಾ. ನೀನು ಮದುವೆಯಾಗಿ ಬಿಟ್ಟೆ ಆ ಹಕ್ಕು ನನ್ನಿಂದ ಕಳೆದುಹೋಯಿತು."

"ಮದುವೆ!? ಹೌದು ನನಗೆ ಮದುವೆಯಾಯಿತು!"

"ಸುಮಾ."

"ಶಶಿ ದಯವಿಟ್ಟು ಸುಮಿ ಎನ್ನು. ಹಾಗಿಲ್ಲದೆ ನೀನು ಬಿಗುಮಾನ ತೋರಿದರೆ ನಮ್ಮಿಬ್ಬರ ನಡುವಿನ ಬಾಂಧವ್ಯ ಎಲ್ಲಿ ಉಳಿಯುತ್ತದೆ. ಈಗ ನಾವಿಬ್ಬರೂ ಒಬ್ಬರೊಡನೊಬ್ಬರು, ಒಬ್ಬರೆದುರೊಬ್ಬರು ತೆರೆದುಕೊಳ್ಳುವುದು ಹೇಗೆ? ನಿನಗೆ ನನ್ನ ಮೇಲೆ ಮೊದಲಿನ ಭಾವನೆ ಇಲ್ಲವೆಂದು ಭಾವಿಸಲೆ?"

"ಸುಮಿ... ನೀನು ನನಗೆ ಎಂದೆಂದೂ ಸುಮಿಯೇ ಆಗಿರುವೆ. ನೀನು ನನ್ನಿಂದ ಕಸಿಯಲ್ಪಟ್ಟೆ. ಮದುವೆಯಾದ ನಿನ್ನ ಮೇಲೆ ನನಗೆ ಮೊದಲಿನದೇ ಭಾವನೆ ಇರಲು ಹೇಗೆ ಸಾಧ್ಯ? ನಾನು ನಿನ್ನ ವರ್ತುಲದಿಂದ ಬಿಡಿಸಿ ಕೊಂಡಿಲ್ಲ. ನೀನು ನನ್ನನ್ನು ಅಗಲಿ ಕೊಂಡಿರುವೆ. ಆದ್ದರಿಂದ ನಿನ್ನ ಸ್ಥಾನ? ನೀನೀಗ ಒಬ್ಬ ಗೃಹಿಣಿ. ನಮ್ಮ ಹಳೆಯ ಗೆಳೆತನ ಮುಗಿದು ಹೋದ ಕಥೆ. ಆಗ ಅಪ್ಪ ಮಧ್ಯಪ್ರವೇಶಿಸಿದ್ದರು. ಒಂದು ರೀತಿಯಲ್ಲಿ ಅವೆಲ್ಲ ದುರಂತ ಘಟನೆಗಳ ಪಾಲೇ. ಗೃಹಿಣಿಯ ಸ್ಥಾನದಲ್ಲಿರುವ ಒಬ್ಬಳನು ನಾನು ಸಹಜವಾಗಿ ಹೇಗೆ ಸಂಬೋಧಿಸುವುದು?"

"ಶಶಿ ನಾನು ಮದುವೆಯಾಗಿರಬಹುದು. ಆದರೆ ನಾನು ಎಂದೂ, ಎಂದೆಂದೂ ನಿನ್ನವಳೇ."

"ಮದುವೆಯಾದ ಹೆಣ್ಣೊಂದು ಹೀಗೆ ಹೇಳಬಾರದು."

"ಹೌದಾ ಶಶಿ? ... ಶಶಿ ನಿನಗೆ ಮದುವೆ ಆಗಿದೆಯಾ?"

"ಇನ್ನೂ ಇಲ್ಲ."

"ಯಾಕೆ?

"ಇನ್ನೂ ನನಗೆ ಬೇಕೆನಿಸಿದ ಜೊತೆ ಸಿಕ್ಕಿಲ್ಲ ಅದಕ್ಕೆ...ಸುಮಿ ನಿನ್ನ ಗಂಡ ಚೆನ್ನಾಗಿದಾರಾ? ನಿನ್ನ ಚೆನ್ನಾಗಿ ನೋಡ್ಕೋತಾ ಇದಾರಾ? ನಿನ್ನ ಮಕ್ಕಳು..."

"ಶಶಿ ಯಾಕೆ ಅವಸರವಸರವಾಗಿ ಎಲ್ಲ ಪ್ರಶ್ನೆ ಒಟ್ಟಿಗೆ ಕೇಳ್ತಾ ಇದೀಯಾ ಬೇಗ ಹೋಗಬೇಕೆಂಬ ಬಯಕೆಯೆ? ನನ್ನೊಡನೆ ಮಾತಾಡಬೇಕೆಂದು ಓಡಿ ಬರ್ತಾ ಇದ್ದೋನು ಈಗ ಬೇಸರಪಟ್ಟುಕೊಳ್ಳೋ ಸ್ಥಿತಿಗೆ ಬಂದೆಯಾ?"

"ಹಾಗಲ್ಲಾ ಸುಮಿ..."

"ಶಶಿ ನಾನು ನಿನ್ನ ಇಲ್ಲಿಗೆ ಕರೆದದ್ದೇ ನನ್ನ ಕಥೆ ಹೇಳಲಿಕ್ಕಲ್ಲವಾ...? ನನ್ನ ಮಕ್ಕಳ ಬಗ್ಗೆ ಕೇಳ್ತೀಯಾ...? ಶಶಿ... ಈ ಜನ್ಮದಲ್ಲಿ ನನಗೆ ಮಕ್ಕಳಾಗೋಲ್ಲ."

"ಯಾಕೆ? ಏನು ತೊಂದರೆ? ಡಾಕ್ಟರ್ ಹತ್ರ ಚೆಕಪ್ ಮಾಡಿಸಿಕೊಂಡೆಯಾ?"

"ಶಶಿ, ನನಗೆ ದೈಹಿಕ ತೊಂದರೆ ಇದ್ದರೆ ಚೆಕಪ್ ಮಾಡಿಸಿಕೊಳ್ಳಬೇಕು. ಆದರೆ ನನಗೆ ದೈಹಿಕ ತೊಂದರೆ ಏನೂ ಇಲ್ಲ. ನನಗೆ ಯಾಕೆ ಮಕ್ಕಳಾಗಲಿಲ್ಲ ಅಂದರೆ... ಇಲ್ಲಿ ಕೇಳು ಶಶಿ ನಾನು ನನ್ನ ಗಂಡನಿಗೆ ಹೆಂಡತಿಯಾಗಲಿಲ್ಲ ಅದಕ್ಕೆ!"

"ಸುಮಾ. ಯಾಕೆ ಹೀಗೆ ಮಾಡಿದೆ!?"

"ಉದ್ರೇಕಗೊಳ್ಳಬೇಡ ಶಶಿ. ನನಗೆ ಅದು ಸಾಧ್ಯವಾಗಲಿಲ್ಲ. ಯಾಕೆ ಗೊತ್ತಾ ಶಶಿ?

ನಾನು ನಿನ್ನ ಮನಸಾರ ಪ್ರೀತಿಸಿದೆ. ನಿನ್ನನ್ನ ಗಂಡ ಅಂತ ನಂಬಿದೆ. ನೀನೇ ನನ್ನ ದೇವರೆಂದು ಪೂಜಿಸಿದೆ. ನೀನು ಇದ್ದಕ್ಕಿದ್ದಂತೆ ಸ್ವಂತ ಫ್ಯಾಕ್ಟರಿ ಅಂತ ನಗರ ಸೇರಿಬಿಟ್ಟೆ. ಮತ್ತೆ ಬರಲೇ ಇಲ್ಲ. ಇಲ್ಲಿ, ಮನೆಯಲ್ಲಿ ಹಿರಿಯರ ಬಲವಂತ-ನನ್ನ ಮದುವೆ ನಡೆದು ಹೋಯಿತು. ನಾನೂ ಹೆಂಡತಿಯಾದೆ. ನೋಡುವವರಿಗೆ ಮಾತ್ರ. ಆದರೆ ಮನಸ್ಸಿನಲ್ಲಿ ನಿನ್ನನ್ನು ನೆನೆಯುತ್ತಾ ಇನ್ನೊಬ್ಬನ ಹೆಂಡತಿಯಂತೆ ಬದುಕಲು, ಹೆಂಡತಿಯ ಪಾತ್ರವಹಿಸಲು ನಾನು ಮಾನಸಿಕವಾಗಿ ಸಿದ್ಧಳಾಗಿರಲಿಲ್ಲ. ಆದರೂ ಹೆಂಡತಿ ಅಂತ ಗಂಡನೊಂದಿಗೆ ಹೋದೆ."

"ಹೀಗೇಕೆ ಮಾಡಿಕೊಂಡೆ ಸುಮಾ?"

"ಮೊದಲೆ ಹೇಳಿದೆ ನಾನು. ನಿನ್ನ ಪ್ರೀತಿಸಿದೆ, ನಿನ್ನ ಬಯಸಿದೆ. ನೀನು ನನ್ನಿಂದ ದೂರಾದೆ. ನಾನು ಬಯಸಿದ ನೀನೇ ಇಲ್ಲವಾದರೆ, ಯಾರಾದರೇನಾಗಬೇಕೆಂದು ಅಪ್ಪ ತೋರಿಸಿದವನನ್ನು ಮದುವೆಯಾದೆ. ಮನಸಾ ನಿನ್ನನ್ನು ಪ್ರೀತಿಸಿ, ಬೇರೊಬ್ಬನ ಹೆಂಡತಿಯಾಗಿ ತನ್ಮೂಲಕ ಸೂಳೆಯಾಗಲು ನಾನು ಸಿದ್ಧಳಿಲ್ಲ. ನಿನ್ನನ್ನೇ ಗಂಡನೆಂದು ನಂಬಿ ನಾನು ಬೇರೊಬ್ಬನಿಗೆ ಹೆಂಡತಿಯಾದರೆ ವ್ಯಭಿಚಾರ ಮಾಡಿದಂತಾಗಲಿಲ್ಲವಾ?"

"'ಸೆಂಟಿಮೆಂಟಲ್ ಫೂಲ್ಸ್' ಎನ್ನುವುದು ನಿನ್ನಂಥವರನ್ನೇ. ನಿನ್ನ ಬಾಳನ್ನು ನೀನೇ ಹಾಳು ಮಾಡಿಕೊಂಡೆ."

"ನಾನು ಸೆಂಟಿಮೆಂಟಲ್ ಫೂಲ್ ಇರಬಹುದು. ಶಶಿ ನೀನು ಬೇರೊಬ್ಬಳನ್ನು ಮದುವೆಯಾಗಬಹುದು. ಅವಳಿಗೆ ಗಂಡನಾಗಿಯೂ ನೀನು ಮನಸ್ಸಿನಲ್ಲಿ ನನ್ನನ್ನು ನೆನೆಯುತ್ತಿರಬಹುದು. ಏಕೆಂದರೆ ಕೈ ಹಿಡಿದವಳನ್ನು ಅಡಿಗೆ ಮನೆಯಲ್ಲಿ ಕೂರಿಸಿ ಹೊರಗೆ ನಾಲ್ಕಾರು ಇಡುಹೆಣ್ಣುಗಳನ್ನು ಭೋಗಿಸಿದ ಮಹಾಪುರುಷರ ಇತಿಹಾಸವಿರುವ ದೇಶ ಇದು. ಆದರೆ ಹೆಣ್ಣಿಗೆ ಎಂದೆಂದೂ ಒಂದೇ

ಗಂಡು. ಆ ಲೆಕ್ಕದಲ್ಲಿ ನಾನು ಮದುವೆಯಾದದ್ದೇ ಪಾಪದ ಕೆಲಸ. ಹಾಗಿರುವಾಗ ಬೇರೊಬ್ಬ ಗಂಡಿಗೆ ಮೈಯೊಡ್ಡುವ ಮಹಾಪಾತಕವನ್ನು ಮಾಡಲಾಗಲಿಲ್ಲ."

"ಎಂತಹ ಕೆಲಸ ಮಾಡಿಕೊಂಡುಬಿಟ್ಟೆ? ನಿನ್ನ ಬಾಳನ್ನು ನೀನೇ ಕೈಯಾರ ಹಾಳು ಮಾಡಿಕೊಂಡು ಬಿಟ್ಟೆ. ನಿನ್ನ ಬದುಕು ನನ್ನಿಂದಲೇ ಭಗ್ನ-ವಾಯಿತು!"

"ಇಲ್ಲ ಶಶಿ. ಬದುಕೆಂದರೇನು? ಸಂತೋಷ ವಾಗಿರುವುದನ್ನೇ ಬದುಕು ಅನ್ನುತ್ತಾರಲ್ಲವಾ? ಹಾಗನ್ನುವುದಾದರೆ ನಾನು ಸಂತೋಷವಾಗಿದ್ದೇನೆ. ನಾನು ಸೂಳೆಯಾಗಲಿಲ್ಲ, ಅದೊಂದು ಹೆಮ್ಮೆ ನನಗಿದೆ. ನನ್ನನ್ನು ಆವರಿಸಿಕೊಂಡಿದ್ದ ವ್ಯಕ್ತಿ, ನಾನು ನಂಬಿದ್ದ ವ್ಯಕ್ತಿ ನನ್ನನ್ನು ಮರೆತಿಲ್ಲ. ಇದೇನು ಕಡಿಮೆ ಸಂತೋಷವಾ?"

"ನಿನಗೆ ಆ ಮದುವೆ ಇಷ್ಟವಿಲ್ಲದಿದ್ದರೆ ಬೇಡ ಅನ್ನಬಹುದಿತ್ತಲ್ಲ?"

"ಅನ್ನಬಹುದಿತ್ತು. ಆಗ ಬೇರೊಂದು ಗಂಡನ್ನು ತೋರಿಸುತ್ತಿದ್ದರು. ನಮ್ಮ ವಿಷಯವನ್ನು ನನ್ನ ಫೈರ್‌ಬ್ರಾಂಡ್ ಅಪ್ಪನ ಬಳಿ ಹೇಳುವಂತಿರಲಿಲ್ಲ ಯಾಕೆಂದರೆ ಶಶಿ... ನೀನು ಬೇರೆ ಜಾತಿಯವ-ನಲ್ಲವಾ? ನಾನು ಬಯಸಿದ ನೀನು ಸಿಗುವುದಿಲ್ಲ ವೆಂದಾದ ಮೇಲೆ— ಅದಕ್ಕೆ ಒಪ್ಪಿಬಿಟ್ಟೆ-ಯಾರಾದರೇನೆಂದು?"

"ನನ್ನನ್ನು ನಂಬಿ ಕೂತ ನಿನ್ನನ್ನು ಬಿಟ್ಟು ನಾನು ದೂರ ಹೊರಟುಹೋದೆ. ಇಲ್ಲಿ ಪರಿಸ್ಥಿತಿಯ ಕೈಗೊಂಬೆಯಾಗಿ ಯಾರನ್ನೋ ಮದುವೆಯಾದೆ. ಈಗ ಇಷ್ಟವಿಲ್ಲದವನೊಡನೆ ಬಾಳನ್ನು ಸಾಗಿಸು-ತ್ತಿರುವೆ..."

"ಇಲ್ಲ ಶಶಿ ನಾನೀಗ ಇಷ್ಟವಿಲ್ಲದವನೊಡನೆ ಬಾಳುತ್ತಿಲ್ಲ."

"ಅಂದರೆ!!?"

"ಅಂದರೆ ನನ್ನ ಗಂಡ ನನ್ನಿಂದ ಡೈವೋರ್ಸ್ ಪಡೆದಾಯ್ತು."

—ಇದು ನಿಜಕ್ಕೂ ನನಗೆ ನೋವುಂಟು-ಮಾಡಿತು. ಮಾತು ಬಾರದಾಯಿತು. ಚೈತನ್ಯ ನಡುಗಿತು. ತೀರಾ ಕಷ್ಟದಿಂದ ಬಾಯಿಬಿಟ್ಟೆ.

"ಡೈವೋರ್ಸ್‌ಗೆ ಆತ ಕೊಟ್ಟ ಕಾರಣ?"

"ಅದೇ 'ಇವಳು ನನಗೆ ಹೆಂಡತಿಯಾಗಿಲ್ಲ' ಅಂತ. ನಾನು ನಿಜ ಎಂದು ಒಪ್ಪಿದೆ. ಮುಂದಿನ-ದೆಲ್ಲ ಬೇಗ ತೀರ್ಮಾನವಾಯಿತು. ಈಗ ಇಲ್ಲಿ ಅಪ್ಪನಿಗೆ ಬೇಸರವಾಗಿ, ಅಣ್ಣನಿಗೆ ಹೊರೆಯಾಗಿ ಇದ್ದೇನೆ. ಆತ್ಮಹತ್ಯೆ ತೀರಾ ಹೇಡಿತನ ಅನಿಸಿದ್ದ-ರಿಂದ ಅದಕ್ಕೆ ಪ್ರಯತ್ನಿಸಿಲ್ಲ."

"ಸುಮಾ ನಿನ್ನ ಜೀವನ ಹಾಳಾಗೋದಕ್ಕೆ ಕಾರಣನಾದ ನನ್ನನ್ನು ಕ್ಷಮಿಸ್ತೀಯಾ?"

ಸುಮಾ ನಕ್ಕಳು.

"ಶಶಿ ನೀನು ನಿನ್ನ ಭವಿಷ್ಯ ರೂಪಿಸಿಕೊಳ್ಳೋ ಕೆಂದು ದೂರ ಹೋದೆಯೇ ವಿನಾ ನನ್ನನ್ನು ತಿರಸ್ಕರಿಸಿ ಅಲ್ಲವಲ್ಲ. ಈಗಲೂ ನೀನು ನನ್ನ ಮರೆ ತಿಲ್ಲ ಅಲ್ಲವಾ? ಬಹುಶಃ ನೀನು ಮದುವೆಯಾ ಗದೆ ಉಳಿದಿರುವುದು ನನ್ನ ನೆನಪಲ್ಲೇ ಅಲ್ಲವಾ? ಹೃದಯಕ್ಕೆ ಹತ್ತಿರವಾದವರು ದೂರಾದರೆ ಆಗುವ ಸಂಕಟ ನಿನಗೂ ಅನುಭವವಾಗಿದೆ. ಆ ಸಂಕಟದಿಂದ ನೊಂದ ನನಗೆ ಈಗ ಹೃದಯಕ್ಕೆ ಬೇಕಾದವರ ಹತ್ತಿರ ನನ್ನೆಲ್ಲಾ ತುಮುಲವನ್ನೂ ದುಗುಡವನ್ನೂ ಹೇಳಿಕೊಂಡನಂತರ ಸಮಾಧಾನ ವಾಗಿದೆ. ನಾನೀಗ ತುಂಬಾ ಸುಖಿ ಶಶಿ... ನಾನೀಗ ತುಂಬಾ ಸುಖಿ."

—ನಾಲ್ಕು ವರ್ಷಗಳ ಹಿಂದೆಯೂ ಇದೇ ಮಾವಿನ ಮರದ ಕೆಳಗೆ ಇದೇ ಸುಮಾ 'ನಾನೀಗ ತುಂಬಾ ಸುಖಿ' ಎಂಬ ಇದೇ ಮಾತನ್ನು ನನಗೆ ಒರಗಿ ಹೇಳುತ್ತಿದ್ದಳು. ಆಗೆಲ್ಲಾ ಆ ಮಾತನ್ನು ಕೇಳಿ ನಾನು ಆನಂದಿಸುತ್ತಿದ್ದೆ, ಮುದಗೊಳ್ಳು ತ್ತಿದ್ದೆ. ಆದರೆ ಅದೇ ಮರದ ಕೆಳಗೆ ಅದೇ ಮಾತನ್ನು ಅದೇ ಸುಮಾ ಇಂದು ಹೇಳುತ್ತಿರು ವಾಗ ಕೇಳಿ ನನಗೆ ತುಂಬಾ ನೋವಾಗುತ್ತದೆ, ಆ ನೋವಿನಲ್ಲಿ ನನಗೆ ಮಾತನಾಡಲಾಗಲಿಲ್ಲ. ಮತ್ತೆ ಅವಳೇ ಮಾತನಾಡಿದಳು,

"ಶಶಿ ಆಗ ನಾನು ಆಕಸ್ಮಾತ್ ನಿನ್ನ ಭೆಟ್ಟಿ

ಯಾಗಿದ್ದರೆ, ಕಾಗದವನ್ನಾದರೂ ಬರೆದಿದ್ದರೆ, ಧೈರ್ಯವಾಗಿ ಅಪ್ಪನ ಹತ್ತಿರ ನಮ್ಮ ವಿಷಯ ಪ್ರಸ್ತಾಪಿಸಿದ್ದರೆ ಏನಾದರೊಂದು ಆಗ ಬಹು ದಿತ್ತು. ಆಗ ಧೈರ್ಯ ಇರಲಿಲ್ಲ. ಈಗ ಆ ಧೈರ್ಯ ಬಂದಿದೆ. ಈಗ ನಾನು ಕೇಳುತ್ತೇನೆ. ಶಶಿ... ಹೇಗೂ ನೀನು ಮದುವೆಯಾಗಿಲ್ಲ. ನಿನಗಾಗಿ ಕಾದಿರುವ ನನ್ನನ್ನು ಮದುವೆ ಆಗ್ತೀ-ಯಾ ಶಶಿ...?"

ಇಲ್ಲಿಗೆ ಬಂದಾಗಿನಿಂದ, ಸುಮಳಿಂದ ಅನಿರೀಕ್ಷಿತ ಮಾತುಗಳನ್ನೇ ಕೇಳಿಕೊಂಡು ಬಂದಿದ್ದರೂ ಇಷ್ಟೊಂದು ಅನಿರೀಕ್ಷಿತವನ್ನು ಊಹಿಸಲೂ ಸಾಧ್ಯವಿರಲಿಲ್ಲ. ಸುಮಳ ಮಾತು ಕೇಳಿ ಏನು ಹೇಳಬೇಕು ತೋಚದೆ ತಡವರಿಸಿದಾಗ ಅವಳೆ ಮಾತು ಮುಂದುವರಿಸಿದಳು.

"ಶಶಿ ನನ್ನ ಮದುವೆಯಾಗೋಕೆ ನಿನಗೆ ಸಾಧ್ಯವಿಲ್ಲ ಅಲ್ಲವಾ? ಗಂಡ ಬಿಟ್ಟವಳನ್ನು ಮದುವೆಯಾದರೆ ನೀನು ಇದುವರೆಗೆ ಗಳಿಸಿ-ರುವ ಪ್ರತಿಷ್ಠೆಯ ಪಾಡೇನು? ನಿನ್ನ ಜೊತೆ ಯವರ ನಡುವೆ ನಿನ್ನ ಗೌರವದ ಪಾಡೇನು ಅಲ್ಲವಾ?"

"ಹಾಗಲ್ಲ ಸುಮಾ ಹಾಗಲ್ಲ."

"ಹೆದರ್ಕೋಬೇಡ ಶಶಿ. ನಿನ್ನ ಮದುವೆ ಯಾಗಬೇಕೆಂಬ ವ್ಯಾಮೋಹ ನನಗಿನ್ನು ಉಳಿ ದಿಲ್ಲ. ಆಸೆಯೂ ಇಲ್ಲ. ಅಂದು ಮದುವೆ ಯಾದವನೊಡನೆ ಸಂಸಾರ ಮಾಡಲು ಯಾವ 'ಕಳಂಕ ಪ್ರಜ್ಞೆ' ನನ್ನನ್ನು ಬಾಧಿಸುತ್ತಿತ್ತೊ, ಇಂದೂ ನಿನ್ನ ಮದುವೆಯಾಗೆಂದು ಕೇಳಲು ಅದೇ ಕಳಂಕ ಪ್ರಜ್ಞೆ ಬಾಧಿಸುತ್ತಿದೆ. ನನಗೆ ಮದುವೆ, ಮಕ್ಕಳು ಯಾವ ಆಸೆಯೂ ಇಲ್ಲ. ನಿನ್ನೊಡನೆ ನನ್ನ ನೋವನ್ನು ಹೇಳಿಕೊಂಡು ಹಗುರಾಗಬೇಕಿತ್ತು. ಆಯಾಯಿತು. ಈಗ ನನ್ನಿಂದ ಬೇಸರವಾದುದಕ್ಕೆ ನನ್ನನ್ನು ಕ್ಷಮಿಸು ಶಶಿ."

"ಸುಮಾ ಈಗಿನ ದಿನಗಳಲ್ಲಿ ನಿನ್ನಂತಹ ಹೆಂಗ ಸನ್ನು ನೋಡಿ ನನಗೆ ತುಂಬಾ ಆಶ್ಚರ್ಯ ವಾಗುತ್ತಿದೆ."

"ಹೌದಾ ಶಶಿ!? ನನ್ನ ಸಂಸ್ಕಾರ ಹಾಗಾಗಿ ಬಿಟ್ಟಿದೆ. ನೀ ಮೊದಲು ಹೇಳಿದೆಯಲ್ಲ ಸೆಂಟಿ ಮೆಂಟಲ್ ಫೂಲ್ ಅಂತ ಹಾಗೇ ಇರಬಹುದು. ಒಂದೇ ಒಂದು ಬೇಸರವೆಂದರೆ ನೀನು ದೊಡ್ಡ ಮನುಷ್ಯನಾದೆ. ನನ್ನೊಡನೆಯ ಸರಳ ಗೆಳೆತನ ವನ್ನು ಮರೆತ. ಕೇಳಿಕೊಂಡರೂ ಕೇಳದೆ ನೀನು ಸುಮಾ ಎನ್ನುತ್ತಿರುವೆ...... ಶಶಿ ನಾನು ಹೇಳಬೇಕೆಂದದ್ದು ಆಯಿತು. ನನ್ನ ದುಗುಡ ಕಳೆದು ಹಾಯಾಗಿದೆ. ಬಹುಶಃ ಆ ಬೇಸರ ನಿನಗೆ ಬಂದಿರಬಹುದು. ಏಳು, ಮನೆಗೆ ಹೋಗೋಣ. ನಾಳೆ ನೀನು ಹೊರಟು ಹೋಗ ಬಹುದು. ದಯವಿಟ್ಟು ನೀನು ಮದುವೆ ಮಾಡಿಕೊಂಡು ಸುಖವಾಗಿರು. ಗಂಡಸು ನೀನು ಸನ್ಯಾಸಿಯಂತೆ ಜೀವನ ಸಾಗಿಸುವುದು ಸರಿಯಲ್ಲ ಅದು ನಿನ್ನ 'ಸುಮಿ'ಗೂ ಸಂತೋಷದ ವಿಷಯ ವಲ್ಲ."

ನನಗೆ ಮಾತಾಡುವುದು ಇನ್ನೇನೂ ಉಳಿ ದಿರಲಿಲ್ಲ. ಅತ್ಯಂತ ಅನಿರೀಕ್ಷಿತ ಮಾತುಗಳಿಗೆ ನನ್ನನ್ನೀಡುಮಾಡಿದ ಸುಮಳೆದುರು ಮೂಕ ನಾಗಿದ್ದೆ. ಅವಳ ಅಣತಿಯಂತೆ ಮೇಲೆದ್ದೆ. ಊರ ಕಡೆಗೆ ಹೊರಟೆವು. ಉಸಿರುಕಟ್ಟುತ್ತ ನೇನೋ ಎನಿಸುತ್ತಿದ್ದ ಮೌನವನ್ನು ಮುರಿದು ಬಹಳ ಮೃದುವಾಗಿ, ತನ್ನ ಹೆಣ್ತನಕ್ಕೆ ತಕ್ಕಂತೆ ನುಡಿಯೇ ನುಡಿದಳು,

"ಶಶಿ ನೋಡು, ಸೂರ್ಯ ಮುಳುಗಿ ಆಗಿದೆ. ಇನ್ನು ಸ್ವಲ್ಪ ಹೊತ್ತಿನಲ್ಲೆಲ್ಲಾ ಚಂದ್ರ ಹುಟ್ಟು ತ್ತಾನೆ... ನನ್ನ ಬದುಕಿನ ಸೂರ್ಯ ಮುಳುಗಿ ಯಾಯಿತು. ಇನ್ನು ನಿನ್ನ ಬದುಕಿನಲ್ಲಿ ಚಂದ್ರೋದಯವಾಗಬೇಕಾಗಿದೆ. ಅವಕ್ಕೆ ಅವ ಕಾಶ ಮಾಡಿಕೊಡು... ಶಶಿ...ತಿಳಿಯಿತಾ...?"

✫



# ಕ್ರಿಕೆಟ್ಟಿನ ಕೋಮಲ ಕಂಠ

–ನರಸಿಂಹ ಮೋಟೆನ್ನರ

ಪ್ರತಿ ಕ್ರಿಕೆಟ್ ಸರಣಿ ಪ್ರಾರಂಭವಾಗುತ್ತಲೇ ನಮ್ಮ ದೇಶದ ಮೂಲೆಮೂಲೆಗಳಲ್ಲಿ ಕಾಮೆಂಟರಿ ಕೇಳುಗರು ಈ ಧ್ವನಿಗಾಗಿ ಕಾತರಿಸುತ್ತಾರೆ. ಏರಿ ವಾಗ್ಚಾತುರ್ಯದಿಂದಲೇ ಕ್ರಿಕೆಟ್ ಕಣದಲ್ಲಿ ನಡೆಯುತ್ತಿರುವುದನ್ನೆಲ್ಲ ನಮ್ಮ ಕಣ್ಣೆದುರು ಕಟ್ಟುವಂತೆ ಮಾಡುವ ಕೌಶಲ ಈ ಆಧುನಿಕ 'ಸಂಜಯ'ರದು. ಆಟಗಾರನಷ್ಟೇ ಮುಖ್ಯ ಈ ವಿವರಣಕಾರ.

ಸುರೇಶ ಸರ್ರೈಯ್ಯಾ ಅಂಥ 'ಸಂಜಯ'ರಲ್ಲಿ ತಮ್ಮದೇ ವಿಶಿಷ್ಟ ಸ್ಥಾನ ಗಳಿಸಿಕೊಂಡವರು. ಸರ್ರೈಯಾ ಎಂದೊಡನೆ ಕೆಲವರಿಗೆ ಗಾಯಕಿ ಸುರೈಯಾಳ ನೆನಪಾಗಬಹುದು. ಆಕೆ ಒಂದು ಕಾಲದಲ್ಲಿ ತನ್ನ ಕೋಮಲ ಕಂಠದಿಂದ ಚಿತ್ರ-ಜಗತ್ತಿನಲ್ಲಿ ಖ್ಯಾತನಾಮಳಾಗಿದ್ದರೆ ಈ ಸರ್ರೈಯಾ ತನ್ನ ಕೋಮಲ ಕಂಠದಿಂದ ಕ್ರಿಕೆಟ್ ರಂಗದಲ್ಲಿ ಪ್ರಖ್ಯಾತ.

ಹದಿವಯದಲ್ಲೇ ಅಂದರೆ ಶಾಲಾಬಾಲಕನಾಗಿದ್ದಾಗಿನಿಂದಲೇ ಸುರೇಶ ಕಾಮೆಂಟ್ರಿಯ ಕನಸನ್ನು ಕಂಡವರು. ಹದಿನಾರನೆಯ ವಯಸ್ಸಿನಲ್ಲಿ ಔರಂಗಾಬಾದಿನಲ್ಲಿ ಎನ್. ಸಿ. ಸಿ. ಕ್ಯಾಂಪ್ ಒಂದರಲ್ಲಿ ಇಂಥದೇ ಒಂದು ವೀಕ್ಷಕ ವಿವರಣೆಗೆ ಸುರೇಶ ಚಿನ್ನದ ಪದಕವನ್ನು ಪಡೆದರು. ಆದರೆ ಆಕಾಶವಾಣಿಯಲ್ಲಿ ಕಾಮೆಂಟರಿ ಹೇಳುವ ಸದವಕಾಶಕ್ಕಾಗಿ ಸರ್ರೈಯಾ ಸರಿಯಾಗಿ ಹದಿಮೂರು ವರ್ಷ ಕಾಯಬೇಕಾಯಿತು.

ಈ ದಿಸೆಯಲ್ಲಿ ಸುರೇಶ ಸರ್ರೈಯಾರಿಗೆ ಸಹಕಾರಿಯಾದವರು ಅಂದಿನ ಕ್ರಿಕೆಟ್ ವೀಕ್ಷಕ ವಿವರಣಕಾರ ಡಿಕಿ ರತ್ನಾಕರ. ಯುವಕ ಸುರೇಶನ ಅಸೀಮ ಶ್ರದ್ಧೆ, ಆಸಕ್ತಿಯನ್ನು ಕಂಡ ಡಿಕಿ ಈತನಿಗೆ ಎರಡು ಅವಕಾಶಗಳನ್ನು ಒದಗಿಸಿದರು. ಆಗ ಇಂಗ್ಲೆಂಡಿನ ಶಾಲಾಬಾಲಕರ ತಂಡ ಭಾರತದ ಪ್ರವಾಸದಲ್ಲಿತ್ತು. ಆ ಪಂದ್ಯಗಳ ಹತ್ತು ನಿಮಿಷ ಅವಧಿಯ ಎರಡು ವಿವರಣೆಗಳಲ್ಲೇ ಸುರೇಶ ತೃಪ್ತರಾಗಬೇಕಾಯಿತು. ಈ ಅವಕಾಶ ಸುರೇಶರಿಗೆ ಹೇಗೆ ಪ್ರಥಮವೋ ಹಾಗೇ ಇಂದಿನ ಕ್ರಿಕೆಟ್ ಕಲಿಗಳಾದ ಸುನೀಲ ಗಾವಸ್ಕರ, ಅಮರನಾಥ ಸೋದರರಿಗೆ ಶಾಲಾಬಾಲಕರಾಗಿ ಭಾರತದ ಪರವಾಗಿ ಆಡುವ ಮೊದಲ ಅವಕಾಶವಾಗಿತ್ತು.

ಅದಾಗಿ ನಾಲ್ಕು ವರ್ಷಗಳ ನಂತರ ೧೯೭೯ರಲ್ಲಿ ಟೆಸ್ಟ್ ಪಂದ್ಯದ ವೀಕ್ಷಕ ವಿವರಣೆ ನೀಡುವ ಸಂದರ್ಭ. ಮುಂಬಯಿಯ ಬ್ರೆಬೋರ್ನ್ ಸ್ಟೇಡಿಯಮ್ಮಿನಲ್ಲಿ ಭಾರತ-ಆಸ್ಟ್ರೇಲಿಯಾಗಳ ನಡುವೆ ಈ ಪಂದ್ಯ. ವೆಂಕಟರಾಘವನ್ನರನ್ನು ಈ ಪಂದ್ಯದಲ್ಲಿ ಕೈಬಿಡಲಾಗಿತ್ತು. ನೆರೆದಿದ್ದ ಕ್ರಿಕೆಟ್ ಅಭಿಮಾನಿಗಳು ಗಲಾಟೆಯೆಬ್ಬಿಸಿ ಬೆಂಕಿಯಿಟ್ಟರು. ವೀಕ್ಷಕ ವಿವರಣಕಾರರೊಬ್ಬರು ಹೇಳಿದ ಮಾತೇ ಈ ಬೆಂಕಿಗೆ ಗಾಳಿಯಾಯಿತಂತೆ. ನಂತರ ಈ ಘಟನೆಗೆ ವಿವರಣಕಾರರೇ ಪ್ರಚೋದಕರೆಂಬ ಆರೋಪವೂ ಬಂತು. ವಿವರಣಕಾರರೆಲ್ಲ ಒಟ್ಟಾಗಿ ಇದನ್ನು ಪ್ರತಿಭಟಿಸಿದರು, ಪ್ರಕಟಣೆ ನೀಡಿದರು. ಕ್ರಿಕೆಟ್ ಮಂಡಳಿ ವೀಕ್ಷಕ ವಿವರಣೆಯನ್ನೇ ನಿರ್ಬಂಧಿಸಿಬಿಟ್ಟಿತು. ಸುರೇಶ ಸರ್ರೈಯಾರ ಕಾಮೆಂಟರಿ ಜೀವನದ ಆರಂಭದಲ್ಲೇ ಆಘಾತಗಳು. ಒಂದು ವೇಳೆ ಕ್ರಿಕೆಟ್ ಮಂಡಳಿ ಎರಡು ವರ್ಷಗಳ ನಂತರವೂ ನಿರ್ಬಂಧವನ್ನು ಮುಂದುವರಿಸಿದ್ದಿದ್ದರೆ ಬಹುಶಃ ಇಂದು ಸುರೇಶ ಸರ್ರೈಯಾ ನಮಗೆಲ್ಲ ಅಪರಿಚಿತರಾಗಿರುತ್ತಿದ್ದರೋ ಏನೊ.

ವಿವರಣಕಾರರ ಬಗ್ಗೆ ಸಾಕಷ್ಟು ರಂಜಿತ ಕಲ್ಪನೆಗಳುಂಟಾಗಿರುತ್ತವೆ ಕೇಳುಗರಲ್ಲಿ. ಆದರೆ ಕ್ರಿಕೆಟ್ ವಿವರಣಕಾರರ ಬಾಳು ಹೂವಿನ ಹಾಸಿಗೆಯೇನಲ್ಲ, ಎನ್ನುತ್ತಾರೆ ಸರ್ರೈಯಾ. ವಿವರಣಕಾರರನ್ನು ಕ್ರಿಕೆಟ್ ಮಂಡಳಿ ಆಯ್ಕೆ ಮಾಡದೇ ಆ ಅಧಿಕಾರವನ್ನು ಅ. ಭಾ. ಆಕಾಶ ವಾಣಿಯೇ ಇಟ್ಟುಕೊಂಡಿದೆ. ಕೆಲವು ಕಾಯಂ ವಿವರಣಕಾರರಿಗೆ ಕೂಡ ಸರಣಿ ಪ್ರಾರಂಭ ವಾಗುವ ದಿನದವರೆಗೂ ತಾವು ಅಲ್ಲಿ ಪಾಲ್ಗೊಳ್ಳುತ್ತೇವೆಂಬ ಸಂಗತಿ ಗೊತ್ತಿರುವುದಿಲ್ಲ. ಸಾಮಾನ್ಯ ವಾಗಿ ಎಂಟು ಹತ್ತು ದಿನ ಮೊದಲೇ ತಿಳಿಸುವುದುಂಟು. ಮುಂಬಯಿಯನ್ನು ಬಿಟ್ಟು ದೂರದ ಸ್ಥಳಗಳಲ್ಲಿ ಪಂದ್ಯ ನಡೆಯುತ್ತಿದ್ದರೆ ವಿವರಣಕಾರನಿಗೆ ದಿನವೊಂದಕ್ಕೆ ೧೫೦ ರೂಪಾಯಿ ಸಂಭಾವನೆ ಹಾಗೂ ೨೫ ರೂಪಾಯಿ ಆಂತರಿಕ ಸಾರಿಗೆಯ ಭತ್ಯ, ದಿನಭತ್ಯ, ಮೊದಲ ದರ್ಜೆಯ ರೇಲ್ವೆ ಪ್ರಯಾಣದ ದರ (೫೦೦ ಕಿಲೋಮೀಟರುಗಳ ವರೆಗೆ) ಇತ್ಯಾದಿ ದೊರೆಯುತ್ತದೆ. ೫೦೦ ಕಿಲೋಮೀಟರುಗಳ ಅಂತರ ಮೀರಿದರೆ ವಿಮಾನ ಪ್ರಯಾಣದ ಸೌಲಭ್ಯ. ಆದರೆ ವಿದೇಶ ಪ್ರಯಾಣದಲ್ಲಿದ್ದಾಗ ಈ ಹಣ ಯಾತಕ್ಕೂ ಸಾಲದು. ವಿಮಾನ ಪ್ರಯಾಣದ ಹಣ, ಪಂಚತಾರಾ ಹೊಟೆಲಿನ ವಾಸ್ತವ್ಯದ ವೆಚ್ಚ, ಮತ್ತು ೨೫ ಅಮೇರಿಕನ್ ಡಾಲರಿನ ದಿನಭತ್ಯಗಳ ಜತೆಗೆ ವಿವರಣೆ ನೀಡುವುದಕ್ಕಾಗಿ ದಿನವೊಂದಕ್ಕೆ ೧೦೦ ರೂಪಾಯಿಗಳ ಸಂಭಾವನೆಯನ್ನು ಗೊತ್ತುಪಡಿಸಲಾಗಿರುತ್ತದೆ. ಆದರೆ ಈ ಹಣ ಕೈಗೆ ಬರುವುದು ಭಾರತಕ್ಕೆ ಬಂದ ನಂತರವೆ.

ಕ್ರಿಕೆಟ್ಟಿನ ಹುಚ್ಚಿನಿಂದ ಹೆಚ್ಚು ಕಡಿಮೆ ವಿದೇಶ ಪ್ರಯಾಣ ಮಾಡಿದ್ದೆಲ್ಲಾ ಸ್ವಂತ ಖರ್ಚಿನಿಂದಲೇ ಎನ್ನುತ್ತಾರೆ ಸರ್ರೈಯಾ. "ಕೆಲವು ಸಲ ನಾನು ಇದಕ್ಕಾಗಿ ಹೆಂಡತಿಯ ಆಭರಣ ಮಾರುವ ಪ್ರಸಂಗವೂ ಒದಗಿದೆ" ಎನ್ನುತ್ತಾರೆ. ಸರ್ರೈಯಾರ ಪತ್ನಿ ಕೊಂಕಣಿ ಮಾತೃಭಾಷೆಯವರಾಗಿದ್ದು ಮುಂಬಯಿ ಆಕಾಶವಾಣಿಯಲ್ಲಿ ಮರಾಠಿ ಕಾರ್ಯಕ್ರಮಗಳ ನಿರ್ವಾಹಕಿಯಾಗಿದ್ದಾರೆ.

೧೯೭೬ರಲ್ಲಿ ನ್ಯೂಜೀಲೆಂಡಿಗೆ ಗೌರವ ವಿವರಣಕಾರರಾಗಿ ಹೋಗಿ ಬಂದರು ಸರ್ರೈಯಾ. ೧೯೮೧ರಲ್ಲಿ ಆಸ್ಟ್ರೇಲಿಯ ಮತ್ತು ನ್ಯೂಜೀಲೆಂಡುಗಳಿಗೆ ಯು. ಎನ್. ಐ. ಪರವಾಗಿ ವರದಿಗಾರನಾಗಿ ಹೋಗಿದ್ದರು. ಮುಂಬಯಿಯಿಂದ ಪ್ರಕಟವಾಗುವ 'ಜನ್ಮಭೂಮಿ' ಎಂಬ ಗುಜರಾತಿ ಪತ್ರಿಕೆ ಈ ಪ್ರವಾಸಕ್ಕಾಗಿ ೧೫೦೦೦ ರೂಪಾಯಿ ನೀಡಿತ್ತು. ಅಲ್ಲದೇ ಸ್ವಂತ ಖರ್ಚಿನಿಂದ ವೀಕ್ಷಕ ವಿವರಣೆ ನೀಡಲು ಬಂದವರೆಂದು ಸರ್ರೈಯಾ ಅವರಿಗೆ ಅನೇಕ ಕಡೆಗಳಿಂದ ಸಹಾಯ ಒದಗಿದಂತೆ. ಇನ್ನೊಬ್ಬ ವಿವರಣಕಾರ ರಾಜಸಿಂಗ್ ನೀಡಿದ ಸಹಕಾರವನ್ನಿಂದಿಗೂ ಸ್ಮರಿಸಿಕೊಳ್ಳುತ್ತಾರೆ ಸರ್ರೈಯಾ.

ಸುರೇಶ ಸರ್ರೈಯಾರಿಗೆ ಎರಡು ಮಹತ್ವಾ—

ಕಾಂಕ್ಷೆಗಳಿದ್ದುವಂತೆ. ಪ್ರಪಂಚ ಪ್ರಖ್ಯಾತ ಆಸ್ಟ್ರೇಲಿಯನ್ ವಿವರಣಕಾರ ಅಲೆನ್ ಮ್ಯಾಕ್‌ಗಿಲ್‌ವ್ರಿ ಜತೆ ಕುಳಿತು ವಿವರಣೆ ನೀಡುವುದು ಮತ್ತು ಕ್ರಿಕೆಟ್ ಭೀಷ್ಮ ಡಾನ್ ಬ್ರಾಡ್ಮನ್ನರನ್ನು ಭೆಟ್ಟಿಯಾಗಿ ಆಶೀರ್ವಾದ ಪಡೆಯುವುದು. ಅವರ ಆಸ್ಟ್ರೇಲಿಯಾದ ಪ್ರವಾಸದಲ್ಲಿ ಈ ಎರಡೂ ಆಶೆಗಳು ಕೈಗೂಡಿದವು.

ಆಸ್ಟ್ರೇಲಿಯಾದ ಪ್ರವಾಸಕ್ಕೆ ಮೊದಲೊಮ್ಮೆ ಸರ್ರೈಯಾ ತನ್ನ ಸ್ವಂತ ವೆಚ್ಚದಲ್ಲಿ ಆಸ್ಟ್ರೇಲಿಯಕ್ಕೆ ಬಂದು ಬ್ರಾಡ್‌ಮನ್ನರನ್ನು ಸಂದರ್ಶಿಸುವ ಉದ್ದೇಶವನ್ನು ವಿವರಿಸಿ ಪತ್ರ ಬರೆದರಂತೆ. ಅದರೊಡನೆ ಬ್ರಾಡ್ಮನ್ನರ ನಿಕಟ ಸ್ನೇಹಿತ ರೂಸಿ ಮೋದಿಯವರ ಶಿಫಾರಸು ಪತ್ರವನ್ನೂ ಇಟ್ಟಿದ್ದರಂತೆ. ಆದರೆ ಆಸ್ಟ್ರೇಲಿಯದಲ್ಲಿದ್ದಾಗಲೇ ಬ್ರಾಡ್ಮನ್ನರು ಈ ಭೆಟ್ಟಿಯನ್ನು ಒಪ್ಪಿ ಸುರೇಶರಿಗೆ ಬರಲು ಪತ್ರ ಬರೆದರಂತೆ. ಈ ಪತ್ರ ಸರ್ರೈಯಾರ ಕೈ ಸೇರಿದ್ದು ಭೆಟ್ಟಿಯ ಸಮಯಕ್ಕೆ ಒಂದು ತಾಸು ಮೊದಲು. ಬ್ರಾಡ್‌ಮನ್ ಇದ್ದದ್ದು ೪೫ ಕಿಲೋಮೀಟರ್ ದೂರದಲ್ಲಿ. ಒಂದು ತಾಸಿನ ಅವಧಿಯಲ್ಲಿ ಅವರನ್ನು ಸರ್ರೈಯಾ ಭೇಟಿ ಮಾಡಬೇಕು! ಈ ಅವಕಾಶವನ್ನು ತಪ್ಪಿಸಿಕೊಳ್ಳುವ ಹಾಗಿಲ್ಲ. ಆಗ ತನ್ನ ಆತಿಥೇಯಳಾಗಿದ್ದ ವೈದ್ಯಳೊಡನೆ ಒಂದು ಕರಾರು ಮಾಡಿಕೊಂಡರಂತೆ. ನಿಗದಿತ ವೇಳೆಗೆ ಸರಿಯಾಗಿ ಆಕೆ ತನ್ನನ್ನು ಬ್ರಾಡ್‌ಮನ್ ಇರುವ ಹೊಟೆಲ್ಲಿಗೆ ಕಾರಿನಲ್ಲಿ ಕರೆದೊಯ್ದು ಮುಟ್ಟಿಸಿದ್ದೇ ಆದರೆ ತನ್ನ ನಿವೃತ್ತಿಯ ನಂತರ ಬರುವ ಪ್ರಾವಿಡೆಂಟ್ ಫಂಡಿನ ಹಣವನ್ನೆಲ್ಲಾ ಆಕೆಗೆ ನೀಡುತ್ತೇನೆ ಎಂದು. ಕ್ರಿಕೆಟ್ ಬಗ್ಗೆ ಸರ್ರೈಯಾರದು ಎಂಥ ಅಭಿಮಾನ!

ಸರ್ ಡಾನ್ ಬ್ರಾಡ್‌ಮನ್ ರೋಟರಿ ಮೀಟಿಂಗಿನಿಂದ ಹೊರಬರುತ್ತಿದ್ದಂತೆ "ಸುರೇಶ ಸರ್ರೈಯಾ ನೀವೇ ತಾನೆ?" ಎಂದು ಕೇಳಿದರಂತೆ. ಸುರೇಶ ಭಾರತದಿಂದ ಹೋಗುವಾಗ ನೆನಪಿನ ಕಾಣಿಕೆಗಳೆಂದು ಶ್ರೀಗಂಧದ ಪೇಪರ್ ಕಟ್ಟರ್, ಹ್ಯಾಂಡಲೂಂ ಬಟ್ಟೆಗಳು, ತಾವು ಕೆಲಸ ಮಾಡುವ ಸೆಂಟ್ರಲ್ ಬ್ಯಾಂಕಿನಿಂದ ಒಯ್ದ ವಸ್ತುಗಳನ್ನು ಜತೆಯಲ್ಲಿ ತೆಗೆದುಕೊಂಡು ಹೋಗಿದ್ದರಂತೆ. ಮೊದಲು ಒಪ್ಪಿಗೆ ಪತ್ರದಲ್ಲಿ ಕ್ರಿಕೆಟ್ ಕುರಿತು ಚರ್ಚಿಸಬಾರದು ಎಂದು ಕರಾರು ಹಾಕಿದ್ದ ಸರ್ ಡಾನ್, ಸುರೇಶರೊಡನೆ ಮಾತು ಪ್ರಾರಂಭಿಸಿದ್ದೇ ಕ್ರಿಕೆಟ್ಟಿನಿಂದಂತೆ.

ವಿದೇಶೀ ವಿವರಣಕಾರರಲ್ಲಿ ಜಾನ್ ಅರ್ಲಾಟ್, ಟೋನಿ ಕೋರ್ಶಿಯರ್, ಅಲೆನ್ ರಿಚರ್ಡ್ಸ್ ಹಾಗೂ ಭಾರತೀಯ ವೀಕ್ಷಕ ವಿವರಣಕಾರರಲ್ಲಿ ಅನಂತ ಸೆಟಲ್‌ವಾಡ್ ಸುರೇಶರಿಗೆ ತುಂಬ ಅಚ್ಚು ಮೆಚ್ಚು.

ಡಿಕಿ ರತ್ನಾಕರ್ ಎಂದರೆ ಸುರೇಶರಿಗೆ ತುಂಬ ಗೌರವ. ನಮ್ಮ ದೇಶದಲ್ಲಿ ಎ. ಎಫ್. ಎಸ್. ತಲ್ಯಾರಖಾನ್, ವಿಜಯ ಮರ್ಚಂಟ್ ಮತ್ತು ಅನಂತ ಸೆಟಲ್‌ವಾಡ್ ಇವರು ಮೂವರೂ ಅತ್ಯುತ್ತಮ ವೀಕ್ಷಕ ವಿವರಣಕಾರರೆಂದು ಅವರ ಅಭಿಮತ. ಪಿಯರ್‌ಸನ್ ಸುರಿತಾ ಮತ್ತು



"ನಿನ್ನ ಬಣ್ಣ ಅಲ್ಲಾ, ಕುಣಿತ ನೋಡಿ ರಾಕ್ಷಸನ ಪಾತ್ರ ಕೊಟ್ಟಿದ್ದು."

ರಾಜು ಭರತನ್ನರ ಹಾಸ್ಯಭರಿತ ವೀಕ್ಷಕ ವಿವರಣೆಯನ್ನು ಅವರು ನೆನಪಿಸುತ್ತಾರೆ.

ಸೆಂಟ್ರಲ್ ಬ್ಯಾಂಕಿನಲ್ಲಿ ಸಾರ್ವಜನಿಕ ಸಂಪರ್ಕಾಧಿಕಾರಿಯಾದ ಸುರೇಶ ಸರೈಯಾರ ಆತ್ಮ, ಉಸಿರುಗಳಲ್ಲೆಲ್ಲ ಕ್ರಿಕೆಟ್ ತುಂಬಿದೆ.

ಕ್ರಿಕೆಟ್ ನಡೆಯುವಲ್ಲಿಗೆ ಅನಿವಾರ್ಯವಾಗಿ ಹೋಗಲು ಆಗದೇ ಇದ್ದ ಪಕ್ಷದಲ್ಲಿ ಸರೈಯಾ ಟ್ರಾನ್ಸಿಸ್ಟರ್ ಕಿವಿಗಂಟಿಸಿಕೊಂಡೇ ಕುಳಿತಿರುತ್ತಾರೆ. ಒಮ್ಮೆ ಭಾರತ ತಂಡ ಆಸ್ಟ್ರೇಲಿಯಕ್ಕೆ ಹೋದಾಗ ಸುರೇಶ ಹೋಗಿರಲಿಲ್ಲ. ಆಗ ಬೆಳಗಿನ ಜಾವ ೫-೩೦ ಕ್ಕೆ ಎದ್ದು ಎರಡು ಟ್ರಾನ್ಸಿಸ್ಟರ್‌ಗಳನ್ನು ಒಮ್ಮೆಲೇ ಆನ್ ಮಾಡಿಕೊಂಡು ಕುಳಿತುಕೊಳ್ಳುತ್ತಿದ್ದರು; ಒಂದು ಆಸ್ಟ್ರೇಲಿಯನ್ ವೀಕ್ಷಕ ವಿವರಣೆ ಕೇಳಲು, ಇನ್ನೊಂದು ಭಾರತದ ವಿವರಣೆ ಕೇಳಲು.

ಸರಣಿ ಪಂದ್ಯ ಪ್ರಾರಂಭವಾಗುವಾಗ ಸುರೇಶ ಕಣ್ಣು ಪರೀಕ್ಷಿಸಿಕೊಳ್ಳುತ್ತಾರೆ. ದಂತವೈದ್ಯನ ಬಳಿ ಹಲ್ಲು ಪರೀಕ್ಷಿಸಿಕೊಳ್ಳುತ್ತಾರೆ. ಯಾಕೆಂದರೆ, ಹಲ್ಲಿನ ತೊಂದರೆಯೇನಾದರೂ ಇದ್ದರೆ ಅದು ಗಂಟಲಿನ ಮೇಲೆ ಪರಿಣಾಮ ಮಾಡಿ ಧ್ವನಿ ಕೆಡಬಹುದು. ಪ್ರತಿ ಪಂದ್ಯ ಪ್ರಾರಂಭವಾಗುವ ಮುನ್ನ ಸರೈಯಾ ಬ್ರಾಡ್ಮನ್ ಬರೆದ 'ಕ್ರಿಕೆಟ್ ಕಲೆ', ಜಾನ್ ಅರ್ಲಾಟರ 'ಕ್ರಿಕೆಟ್ ವೀಕ್ಷಿಸುವ ಕಲೆ' ಮತ್ತು ಕ್ರಿಕೆಟ್ ನಿಯಮಾವಳಿಗಳನ್ನು ಓದುತ್ತಾರೆ. ಪತ್ರಿಕೆಗಳಲ್ಲಿ ಬಂದ ಕ್ರಿಕೆಟ್ ಕುರಿತ ಲೇಖನಗಳು, ವಿಮರ್ಶೆ ಮತ್ತು ಉಭಯ ತಂಡಗಳ ಕ್ರಿಕೆಟ್ ಪಟುಗಳ ಕುರಿತು ಆಳವಾಗಿ ತಿಳಿದುಕೊಳ್ಳುತ್ತಾರೆ.

ಒಮ್ಮೆ ಪಾಕಿಸ್ತಾನ ತಂಡ ಭಾರತದಲ್ಲಿ ಪ್ರವಾಸ ಮಾಡುತ್ತಿದ್ದಾಗ ಅವರು ಓದಿ ನೆನಪಿಟ್ಟಿದ್ದ ಸ್ವಾರಸ್ಯಕರ ಸಂಗತಿಯೊಂದನ್ನು ಕಾಮೆಂಟರಿಯಲ್ಲಿ ಅಳವಡಿಸಿಕೊಂಡರು. ಸಿಕಂದರ್ ಬಕ್ತ್ ತನ್ನ ಅಡಿಗೆಯನ್ನು ತಾನೇ ಬೇಯಿಸಿಕೊಳ್ಳುತ್ತಾನೆ ಎಂಬುದೇ ಆ ಸಂಗತಿ. "ಸಿಕಂದರ್ ಬಕ್ತ್ ತನ್ನ ಅಡಿಗೆ ಬೇಯಿಸಿಕೊಳ್ಳುವಲ್ಲಿ ಸಿದ್ಧಹಸ್ತನಾದರೂ ಈಗ ಹುದ್ದರಿಗಳನ್ನು ಕೆಡುವುದರಲ್ಲಿ ತನ್ನ ಬೇಳೆ ಬೇಯುತ್ತಿಲ್ಲವಲ್ಲ ಅಂತ ಬೇಜಾರುಪಟ್ಟುಕೊಂಡಿದ್ದಾರೆ" ಅಂದರು ಸುರೇಶ. ಇದನ್ನು ಕೇಳಿದ ಶ್ರೋತೃಗಳು ಕುಣಿದಾಡಿದರು.

ಮುಂಬಯಿಯ ಓವಲ್ ಮೈದಾನದ ಎದುರಿನ ಸಣ್ಣ ಫ್ಲ್ಯಾಟಿನಲ್ಲಿ ವಾಸಿಸುವ ಸುರೇಶರ ಸೇವಕ ಹೆನ್ರಿ, ಸರೈಯಾರ ಎಲ್ಲ ವೀಕ್ಷಕ ವಿವರಣೆಗಳನ್ನೂ ಟೇಪ್ ಮಾಡಿಟ್ಟುಕೊಳ್ಳುತ್ತಾನೆ. ಅವನಿಗೆ ಈ ಕುರಿತು ಕೆಲವು ಸೂಚನೆಗಳನ್ನು ಸುರೇಶ್ ಕೊಟ್ಟಿರುತ್ತಾರೆ. ಪ್ರತಿ ಬಾರಿಯೂ ಚೆಂಡೆಸೆತದ ಸಮಯದ ತನ್ನ ವಿವರಣೆಯನ್ನು ಅದು ಎಲ್ಲಿಂದಲೇ ಇದ್ದರೂ ಹೆನ್ರಿ ಟೇಪ್ ಮಾಡಿಟ್ಟುಕೊಳ್ಳಬೇಕೆಂದು ಸುರೈಯಾ ಆತನಿಗೆ ಹೇಳಿಬಿಟ್ಟಿದ್ದಾರೆ. ತನ್ನದಲ್ಲದೇ ಇತರ ಕೆಲ ಪ್ರಸಿದ್ಧ ಕಾಮೆಂಟೇಟರರ ವಿವರಣೆಗಳನ್ನೂ ಧ್ವನಿಮುದ್ರಿಸಿಟ್ಟುಕೊಂಡಿದ್ದಾರೆ ಸರೈಯಾ. ಇದರಿಂದ ತಪ್ಪೇನೆಂಬುದು ಗೊತ್ತಾಗುತ್ತದಷ್ಟೇ ಅಲ್ಲ, ಮುಂದಿನ ವಿವರಣೆಗಳಲ್ಲಿ ಎಚ್ಚರದಿಂದಿರಲು ಸಹಾಯವಾಗುತ್ತದೆ.

ಸದಾ ಕಾಮೆಂಟರಿಯ ರಿಹರ್ಸಲ್ ಮಾಡುವ ಸರೈಯಾ ಒಮ್ಮೆ ಮನೆಯ ಬಾಲ್ಕನಿಯಲ್ಲಿ ನಿಂತುಕೊಂಡಿದ್ದಾಗ ಜೋರಾಗಿ ಮಳೆ ಸುರಿಯಲಾರಂಭಿಸಿತಂತೆ. ಅದರಿಂದ ಪಿಚ್ಚು ಯಾವ ರೀತಿಯ ಹಾನಿಗೀಡಾಯಿತೆಂಬುದನ್ನು ಕಲ್ಪಿಸಿ ಸುದೀರ್ಘ ಕಾಮೆಂಟರಿ ನೀಡಿಬಿಟ್ಟರಂತೆ.

ಕ್ರಿಕೆಟ್ ಪಂದ್ಯ ಆರಂಭವಾಗುತ್ತಲೇ ಕೇಳಿಬರತೊಡಗುತ್ತದೆ ಈ ಕೋಮಲ ಕಂಠ.

# ಪುತ್ರಂಜೀವ: ಬಂಜೆಯರಿಗೆ ಆಶಾಕಿರಣ

ಬಂಜೆಯರಿಗೆ ಆಶಾಕಿರಣವಾದ, ಬರೀ ಹೆಣ್ಣುಮಕ್ಕಳನ್ನೇ ಹಡೆದವರಿಗೆ ಪುತ್ರ ಸಂತಾನ ನೀಡುವ ಪುತ್ರಂಜೀವ ಮರವು ಇನ್ನೂ ಅನೇಕ ಔಷಧ ಗುಣಗಳನ್ನು ಪಡೆದಿದೆ. ಪುತ್ರಂಜೀವ, ಜಿಯಾಪೋತ, ಕುವರಜೀವಿ, ಜೀವನ ಪುತ್ರ, ಇರೂಕೊಲ್ಲಿ, ಪುತ್ರಜಿಬ್ಬೇಮಣಿ ಈ ಮೊದಲಾದ ಹೆಸರುಗಳಿಂದ ಈ ಮರವನ್ನು ಕರೆಯುವರು. ಇದಕ್ಕೆ 'ಪುತ್ರಂಜೀವ ರೊಕ್ಸ ಬರ್ಗಿಲ್ ಎಂಬ ಹೆಸರಿದೆ. ಹಿಂದೆ ಭಾರತ ಮತ್ತು ಮಲೇಶಿಯಾದ ಅರಣ್ಯಗಳಲ್ಲಿ ಇದು ವಿಪುಲವಾಗಿ ಬೆಳೆಯುತ್ತಿದ್ದರೂ ಈಗ ಅಪರೂಪವಾಗುತ್ತಿದೆ.

ಈ ಸಸ್ಯವು ಹೆಚ್ಚಾಗಿ ಮೆಕ್ಕಲು ಮಣ್ಣಿನಲ್ಲಿ, ನದಿಗಳ ದಂಡೆಗುಂಟ, ಜವಳು ಪ್ರದೇಶಗಳಲ್ಲಿ ಮತ್ತು ಅಚ್ಚ-ಹಸರು ಅರಣ್ಯಗಳಲ್ಲಿ ಬೆಳೆಯುವದು. ವರ್ಷವೆಲ್ಲಾ ಹಸಿರಾಗಿರುವ ಈ ಮರವು ದೊಡ್ಡದಾಗಿ ಬೆಳೆಯುತ್ತಿದ್ದು ಸುತ್ತಲೂ ತೂಗುತ್ತಿರುವ ಟೊಂಗೆಗಳನ್ನು ಬಿಡುವದು. ಫಾಲ್ಗುಣ, ಚೈತ್ರಗಳಲ್ಲಿ ಅಚ್ಚ ಹಸುರಾದ ಹೊಳಪುಳ್ಳ ಚಿಕ್ಕ ಹೂಗಳನ್ನು ಬಿಡುವದು. ಬೀಜಗಳು ಹಣ್ಣಾಗಿ ಉದುರುವದರಿಂದ ನೈಸರ್ಗಿಕವಾಗಿಯೇ ಸಸ್ಯಗಳ ಪುನರುತ್ಪತ್ತಿಯಾಗುವದು. ಹಣ್ಣಾದ ಬೀಜಗಳನ್ನು ಶೇಖರಿಸಿ ಮಳೆ ಬಿದ್ದ ಕೂಡಲೇ ನಮಗೆ ಬೇಕಾದಲ್ಲಿ ಹಾಕಿದರೆ ಸಸ್ಯಗಳು ಹುಟ್ಟುವವು.

ಇದು ಅಲಂಕಾರದ ಮರವಷ್ಟೆ

← ಪುತ್ರಂಜೀವ ಸಸ್ಯ

ಇದರ ಕಟ್ಟಿಗೆಯೂ ಒಳ್ಳೇ ಕೆಲಸಕ್ಕೆ ಬರುವದು ಕಟ್ಟಿಗೆಯು ಬೂದಿ ಬಣ್ಣದ್ದಿದ್ದು, ಗಟ್ಟಿಯಾಗಿಯೂ, ಬಾಳಿಕೆ ಬರುವಂಥದೂ ಆಗಿದ್ದು ತುಂಬ ಹೊಳಪುಳ್ಳದ್ದಾಗಿರುವದು. ಮನೆ ಕಟ್ಟಡದ ಸಲುವಾಗಿ ಮತ್ತು ಕೃಷಿ ಸಲಕರಣೆಗಳನ್ನು ತಯಾರಿಸಲು ಇದರ ಕಟ್ಟಿಗೆಯನ್ನು ಉಪಯೋಗಿಸುವರು. ಎಲೆಗಳು ದನಗಳಿಗೆ ಉತ್ತಮ ಆಹಾರ. ಬೀಜಗಳಿಂದ ಹಳದೀ ಬಣ್ಣದ ಆಲಿವ್ ಎಣ್ಣೆಯಂಥ ಕಲಕಾದ ಎಣ್ಣೆ ದೊರೆಯುವದು. ಅದನ್ನು ದೀಪ ಉರಿಸಲು ಉಪಯೋಗಿಸುವರು. ಬೀಜದ ತಿರುಳಿನಿಂದ ಹಳದೀ ಬಣ್ಣದ ಸ್ವಚ್ಛ ಎಣ್ಣೆ ಪಡೆಯುವರು. ಇದರಲ್ಲಿ ಗ್ಲಿಸರಾಯ್ಡ (Glyceride) ರಾಸಾಯನಿಕವಿರುವದು. ಅದರ ಜೊತೆಗೆ ಸಿತೊಸ್ಟ್ರಾಲ್ (Sitostryarol) ಇರುವದು. ಇದರ ಬೀಜ ಮತ್ತು ಎಲೆಗಳ ಕಷಾಯವನ್ನು ನೆಗಡಿ ಮತ್ತು ಜ್ವರ ಕಡಿಮೆ ಮಾಡಲು ಕೊಡುವರು. ಮಕ್ಕಳನ್ನು ಆರೋಗ್ಯವಂತರನ್ನಾಗಿ ಇಡಲು ಮತ್ತು ಅವರನ್ನು ಭೂತ ದೆವ್ವದ ಕಾಟದಿಂದ ತಪ್ಪಿಸಲು ಪುತ್ರಂಜೀವ ಬೀಜಗಳ ಮಾಲೆ ಮಾಡಿ ಮಕ್ಕಳಿಗೆ ಹಾಕುವರು.

**ಸುಮಿತ್ರಾ ಶಾನಭಾಗ**

ಬೀಜದ ತಿರುಳಿಗೆ 'ಪುತ್ರಂಜೀವಿ ಮಣಿ ತಿರುಳು' ಎಂದು ಅನ್ನುವರು. ಇದರ ಸೇವನೆಯಿಂದ ಪಿತ್ತ ಶಮನ, ಕಣ್ಣುರಿ, ತಲೆತಿರುಗುವಿಕೆ ಗುಣ. ಇದು ಮೂತ್ರ ಪ್ರವರ್ತಕವೂ, ಕಾಮೋದ್ದೀಪಕವೂ, ಕಫ, ದಾಹ ವಮನಗಳ ನಿವಾರಕವೂ ಆಗಿದೆ. ಅರ್ಧಾಂಗ ವಾತದಲ್ಲಿ ಈ ತಿರುಳನ್ನು ಸೇವಿಸುವರು. ಇದು ವೀರ್ಯವರ್ಧಕ. ಬಂಜೆಯರಿಗೆ ಗರ್ಭಧರಿಸುವ ಚೈತನ್ಯ ನೀಡುವದು. ಬೀಜದ ತಿರುಳನ್ನು ದಿನಕ್ಕೆ ಒಂದು ಸಾರೆಯಂತೆ ಸೇವಿಸಿದರೆ ಗರ್ಭ ನಿಲ್ಲಲು ಸಹಾಯವಾಗುವದು. ಗರ್ಭ ನಿಂತ ಎರಡು ತಿಂಗಳ ಮೇಲೆಯೂ ಸತತವಾಗಿ ಹಡೆಯುವವರೆಗೆ ದಿನಕ್ಕೆ ಒಂದಾವರ್ತಿ ತೆಗೆದುಕೊಂಡರೆ ಪುತ್ರಸಂತಾನವಾಗುವದೆಂದು ಬಲ್ಲವರ ಹೇಳಿಕೆ. ✡

# ನೆನಪಿನ ಶೋಧನೆ

ಸಂಗ್ರಹ: ಶ್ರೀಮತಿ ಕಲಾವತಿ ಜಿ. ಕುಲಕರ್ಣಿ

ಎಂಬತ್ತರಲ್ಲಿ ಅಡಿಯಿರಿಸಿರುವ ಡಾ. ರಂ. ಶ್ರೀ. ಮುಗಳಿಯವರನ್ನು 'ಕಸ್ತೂರಿ'ಯ ವಾಚಕರಿಗೆ ಹೊಸತಾಗಿ ಪರಿಚಯ ಮಾಡಿಕೊಡುವ ಅಗತ್ಯವಿಲ್ಲ. ಕನ್ನಡದ ಉತ್ತರ ಗಡಿಯಲ್ಲಿ ಮೂರು ದಶಕಗಳ ಕಾಲ ಇದ್ದು ಕನ್ನಡದ ಅಧ್ಯಯನಕ್ಕೆ ಗೌರವವನ್ನು, ಕನ್ನಡತನಕ್ಕೊಂದು ಬೆಲೆಯನ್ನು ತಂದುಕೊಟ್ಟ ಮಹನೀಯರವರು. ಮುಗಳಿಯವರು ಕೈಯಾಡಿಸದ ಸಾಹಿತ್ಯ ಪ್ರಕಾರವಿಲ್ಲ. ಅವರ ಬರವಣಿಗೆಯ ಪ್ರತಿ ಸಾಲಿನ ಮೇಲೂ ಅವರ ಘನ ವಿದ್ವತ್ತಿನ ಛಾಯೆಯನ್ನು ಕಾಣಬಹುದು.



ಮುಗಳಿಯವರ ಲೇಖನ, ಜೀವನಗಳೆರಡರಲ್ಲೂ ಗುರುತಿಸಬಹುದಾದ ಅಂಶವೆಂದರೆ ಸಹೃದಯತೆ. ಅವರ ಸಹೃದಯತೆಯೇ ಅವರಿಗೆ ನಾಡಿನ ತುಂಬೆಲ್ಲ ಬಹು ದೊಡ್ಡ ಶಿಷ್ಯಗಣವನ್ನೂ ಅಭಿಮಾನಿಗಳನ್ನೂ ಗೆದ್ದಿದೆ.

ಶಿಕ್ಷಕರಾಗಿ ಮುಗಳಿಯವರು ಕನ್ನಡವನ್ನಲ್ಲದೆ ಸಂಸ್ಕೃತ ಇಂಗ್ಲೀಷುಗಳನ್ನೂ ಕಾಲೇಜು ಮಟ್ಟದಲ್ಲಿ ಹೇಳಿಕೊಡಬೇಕಾಯಿತು. ಸಾಹಿತಿಯಾಗಿ ಅವರು ಪ್ರಾಯಶಃ ಮೊದಲಡಿ ಇರಿಸಿದ್ದು ಕವಿಯ ರೂಪದಲ್ಲಿ. ಆದರೆ, ಅವರು ಆ ಬಂಧನವನ್ನು ಬಲು ಬೇಗ ಕಳಚಿ ಕಾದಂಬರಿಕಾರರಾಗಿ, ಕತೆಗಾರರಾಗಿ, ನಾಟಕಕಾರರಾಗಿ, ಪ್ರಬಂಧಕಾರರಾಗಿ ತಮ್ಮ ಪ್ರತಿಭೆಯನ್ನು ಹಲವು ಹತ್ತು ಕಡೆಗಳಲ್ಲಿ ಹರಿಯಬಿಟ್ಟರು. ಆದರೆ ಅವರ ಸೃಜನಶೀಲ ಸಾಹಿತ್ಯಕ್ಕಿಂತ ಹೆಚ್ಚಾಗಿ ಅವರ ಹೆಸರು ಅಜರಾಮರವಾಗಿ ಉಳಿಯುವುದು ಅವರ 'ಕನ್ನಡ ಸಾಹಿತ್ಯ ಚರಿತ್ರೆ'ಗಾಗಿ. 'ಅಮೃಹಾನ'

ಗ್ರಂಥ ಅವರಿಗೆ ಅಪಾರ ಕೀರ್ತಿಯನ್ನು ತಂದಿತ್ತಿತಲ್ಲದೆ ನಾಡಿನ ವಿಶ್ವವಿದ್ಯಾಲಯಗಳು 'ಅಧಿಕೃತ' ಸಾಹಿತ್ಯ ಚರಿತ್ರೆಯನ್ನು ರಚಿಸಲು ಸಂಶೋಧಕರ ತಂಡಗಳನ್ನೇ ತೊಡಗಿಸಿವೆಯಾದರೂ ಮುಗಳಿಯವರ ಕೃತಿಯ ಮಹತಿಗೆ ಕುಂದಿಲ್ಲ. ಇಂದಿಗೂ ಕನ್ನಡದ ಅಧ್ಯಯನಕಾರರಿಗದು ಕೈಗನ್ನಡಿ.

ಮುಗಳಿಯವರು ತಮ್ಮ ಸುದೀರ್ಘ ಸಾಹಿತ್ಯ ಜೀವನದಲ್ಲಿ 'ಬಾಳುರಿ' 'ಕಾರಣಪುರುಷ' 'ಅನ್ನ'ಗಳೆಂಬ ಮೂರು ಕಾದಂಬರಿಗಳನ್ನು ಹೊರತಂದಿದ್ದಾರೆ. ಆದರೆ ಅವೆಲ್ಲವನ್ನೂ ಮೀರಿ ನಿಲ್ಲಬಲ್ಲ ಯೋಗ್ಯತೆಯ ನಾಲ್ಕನೆಯ ಕಾದಂಬರಿ 'ಅಗ್ನಿವರ್ಣ' ತೀರ ಇತ್ತೀಚೆಗಷ್ಟೇ ಹೊರಬಂದಿದೆ. ಇಕ್ಷ್ವಾಕು ವಂಶದ ೧೪ನೆಯ ಅರಸು ಅಗ್ನಿವರ್ಣ ಅರಸನಲ್ಲಿರಬೇಕಾದ ಸಕಲ ಸದ್ಗುಣಗಳಿದ್ದೂ ಮೋಹದ ಬೆಂಬತ್ತಿ ಅದೆಂತು ಇಡೀ ಕುಲನಾಶಕ್ಕೇ ಕಾರಣನಾಗಿ ಪರಿಣಮಿಸಿದ ನೆಂಬುದು ಕಾಳಿದಾಸನ 'ರಘುವಂಶ'ದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಆ ಘಟನೆಗೆ ಬೇರೊಂದು ತಿರುವು ಕೊಟ್ಟು ಮುಗಳಿಯವರು ಈ ಸುದೀರ್ಘ ಕಾದಂಬರಿಯನ್ನು ಬರೆದಿದ್ದಾರೆ. ಈ ಅರ್ಥವತ್ತಾದ ಕೃತಿಯನ್ನು ಸಂಗ್ರಹ ರೂಪದಲ್ಲಿ ಇಲ್ಲಿ ನೀಡಲಾಗಿದೆ. ಜನೆವರಿ, ಫೆಬ್ರುವರಿ ಎರಡೂ ಸಂಚಿಕೆಗಳಲ್ಲಿ ಇದು ಬರಲಿದೆ.

ಅಗ್ನಿವರ್ಣ ಮಹಾರಾಜನ ಅರಮನೆಯ ವಿಹಾರ ಮಂದಿರದಲ್ಲಿ ವೀಣೆ, ವೇಣು, ಮೃದಂಗ ಮುಂತಾದ ವಾದ್ಯಗಳ ಹಿಮ್ಮೇಳದಲ್ಲಿ ರಾಜನರ್ತಕಿಯಾದ ಮೋಹನಾಂಗಿಯ ನೃತ್ಯ ನಡೆದಿದೆ; ಗೆಜ್ಜೆಗಳ ಘಿಲ್ ಘಿಲ್ ನಾದವು ಎಲ್ಲರ ಎದೆಯನ್ನು ಜುಮ್ಮೆನಿಸಿ ಘಲ್ಲಿಸುವಂತೆ ಕೇಳಿಬರುತ್ತಿದೆ. ತೂಗುಬಿಟ್ಟಿರುವ ತೂಗುಮಂಚದಲ್ಲಿ ಮಹಾರಾಜನು ಮೆತ್ತಗಿನ ದಿಂಬಿಗೆ ಆತುಕೊಂಡು ಕುಳಿತು ಕುಣಿತದ ನಾನಾ ನಿಲವುಗಳನ್ನು ಎವೆಯಿಕ್ಕದೆ ನೋಡುತ್ತ ತಲೆದೂಗುತ್ತಿರುವನು. ಅವನ ಬದಿಯಲ್ಲಿಯೆ ಹಿರಿ ರಾಣಿ ಕಾಮಿನೀದೇವಿ ಕುಳಿತುಕೊಂಡು ಬೆಳ್ಳಿಯ ಕರಂಡಕದಲ್ಲಿ ಅಣಿಯಾಗಿದ್ದ ತಾಂಬೂಲವನ್ನು ಆಗಾಗ ಅವನ ಬಾಯಿಗಿಟ್ಟು ಮುಗುಳ್ನಗುತ್ತ ತಾನೂ ಒಂದನ್ನು ನವುರಾಗಿ ತನ್ನ ಬಾಯಿಗೆ ಹಾಕಿಕೊಳ್ಳುತ್ತಾಳೆ. ವಾದ್ಯಗಳ ಹಿಮ್ಮೇಳವು ಅದಕ್ಕೆ ಅನುವಾಗಿ ನಾದವನ್ನು ನುಡಿಸುತ್ತ ಲಯವನ್ನು ಒದಗಿಸುತ್ತದೆ.

ಹೀಗೆ ಬಿಟ್ಟೂ ಬಿಡದೆ ಅಖಂಡವಾಗಿ ಒಂದಿಲ್ಲೊಂದು ಬಗೆಯ ನಾದೋಪಾಸನೆ ನಡೆಯುತ್ತಿರಬೇಕೆಂಬುದು ಅಗ್ನಿವರ್ಣನ ಅಪೇಕ್ಷೆಯಾಗಿತ್ತು. ಬಹಿರಂಗದಲ್ಲಿ ಅಗ್ನಿಯಂತೆ ಕೆಂಪಾದ ಬಣ್ಣ ಹೊತ್ತು ಸುಂದರ ರೂಪವುಳ್ಳ ಅವನ ಅಂತರಂಗ ಪಕ್ಷಿ ಆರದ ಅಗ್ನಿಯಾಗಿತ್ತು. ನಿರಂತರವಾಗಿ ಸಕಲೇಂದ್ರಿಯ ಸುಖದೊಡನೆ ಸಂಗೀತ ಸುಖವನ್ನೂ ಪಡೆಯಬೇಕೆಂಬ ಆಸೆ.

ರಾತ್ರಿ ಸರಿಯಿತು. ಬೆಳಗು ಮೂಬರಿಯಿತು... ಅಂತಃಪುರದ ದೀಪಗಳು ಆರಿದವು. ಆದರೆ ಸಂಗೀತ–ಸಂಭ್ರಮ ಎಳ್ಳಷ್ಟೂ ಕುಂದಲಿಲ್ಲ. ನೃತ್ಯವಾಯಿತು, ಗಾಯನವಾಯಿತು, 'ಹಾಗೇ ಸಾಗಲಿ' ಎಂದು ವಿಧಿಸಿ, ರಾಜ ರಾಣಿಯರು ತಂತಮ್ಮ ಮಂದಿರಗಳಿಗೆ ಹೋಗಿ ಮುಖ ತೊಳೆದು ಸಿಂಗರಿಸಿಕೊಂಡು ಉಪಾಹಾರ ಸೇವಿಸಿ ಬಂದರು. ನಾದಬ್ರಹ್ಮನ ಸೇವೆ ಮಾತ್ರ ತಡೆಯಿಲ್ಲದೆ ನಡೆಯಿತು. ಕೆಲ ಸಮಯವಾದ ಮೇಲೆ ತೂಗುಮಂಚದಿಂದ ಕೆಳಗಿಳಿದು ಬಂದು ಅಗ್ನಿವರ್ಣನು ತಾನೇ ವಿಶಾಲವಾದ ಒಂದು ಪೀಠದ ಮೇಲೆ ಕುಳಿತು, ತನ್ನ ವೀಣೆಯನ್ನು ಮುಂದಿರಿಸಿಕೊಂಡು ಅದರ ತಂತಿಗಳನ್ನು ಸರಿಪಡಿಸಿ ನುಡಿಸಹತ್ತಿದನು. ಅವನ ಪಳಗಿದ ಬೆರಳುಗಳ ಮಿಡಿತವನ್ನು ಹೊಂದಿ ತಂತಿಗಳು ತಮ್ಮೊಳಗೆ ಅವಿತುಕೊಂಡಿರುವ ಸ್ವರ-ಸುಂದರಿಯನ್ನು ಹೊರತಂದು ಗಾಳಿಯ ಅಲೆಯ ಮೇಲೆ ಅದರ ರಿಂಗಣಗುಣಿತವನ್ನು ಮಾಡಿ ತಣಿಸಿದವು. ಅಂದಂದಿನ ರಸಾನುಭವಗಳಿಗೆ ಆಕಾರ ಕೊಡುವ ಹೊಸ ಹೊಸ ಸ್ವರ ಸಮೂಹಗಳನ್ನು ರಾಗ–ಲಯಗಳನ್ನು ತನ್ನ ಕಂಠದಿಂದ ಹೊರಬರುವ ಇಂಚರಗಳೊಂದಿಗೆ ಅನುಗೊಳಿಸಿ ತಂತಿಗಳ

ಮೇಲೆ ತರಂಗಿಸುವಂತೆ ಮಾಡುವುದು ಅವನ ಗುಣ ವಿಶೇಷವಾಗಿತ್ತು. ಇಷ್ಟರಲ್ಲಿ ಪಟ್ಟ ಮಹಿಷಿಯಾದ ಧಾರಿಣೀದೇವಿ ತನ್ನ ಸ್ನಾನ ಪೂಜಾದಿಗಳನ್ನು ಪೂರೈಸಿ ಅಲ್ಲಿಗೆ ಬಂದಳು. "ದೊರೆಗಳಿಗೆ ಬೆಳಗಾಯಿತು ಎಂಬುದರ ಅರಿವಿದೆ ಯಷ್ಟೆ?"

"ಕಲಾಸೃಷ್ಟಿ ಕಾಲದಿರವನ್ನು ಮೀರಿರುತ್ತದೆ ತಾನೆ," ವೀಣೆಯನ್ನು ಮೀಟುತ್ತಲೆ ರಾಜನು ಆರ್ದ್ರತೆಯಿಂದ ನುಡಿದನು.

"ಆದರೆ ರಾಜರಾದವರು ಕರ್ತವ್ಯದ ಅರಿವನ್ನು ಮೀರಬೇಕೆ?" ಧಾರಿಣಿ ಎಂದಳು.

"ಕರ್ತವ್ಯ ಪರಿಪಾಲನೆಗಾಗಿಯೇ ವಿಶ್ರಾಂತಿ, ವಿನೋದ ಎಂಬುದು ಬೇಕಲ್ಲವೇ ದೊರೆಗಳಿಗೆ," ಕಾಮಿನೀದೇವಿ ರಾಜನ ಪರವಾಗಿ ನುಡಿದಳು.

"ಎಲ್ಲ ಅರಿವಾಗಿದೆ ದೇವಿ, ಆದರೆ ಕಲಾ ಪ್ರತಿಭೆ ಯಾವ ನಿಯಮ ನಿರ್ಬಂಧಗಳನ್ನೂ ಸಹಿಸದು. ಗಾಯನ-ವಾದನದ ನಾದಸುಧೆ ಕಿವಿ ಮನಗಳನ್ನು ತುಂಬಿರುವಾಗ ರಸಭಂಗ ಮಾಡಬಾರದೆಂಬ ಅರಿವು ತಮಗೆ ಇರಬೇಕು," ಎಂದು ರಾಜನು ಉತ್ತರಿಸಿದ.

ದೊರೆ ತನ್ನ ವೀಣೆಯನ್ನು ಬದಿಗಿರಿಸಿ ಮತ್ತೆ ತೂಗುಮಂಚದಲ್ಲಿ ಕಾಮಿನಿಯೊಡನೆ ಕುಳಿತು ಕೊಂಡು ದೂರದಲ್ಲಿ ನಿಂತಿರುವ ನಾಟ್ಯಾಚಾರ್ಯ ರನ್ನು ಕರೆದು, "ಬೇಗ ಬನ್ನಿ, ನಿಮ್ಮ ಆ ಅಚ್ಚರಸಿ ಯರ ಮಹಾಮೇಳದೊಂದಿಗೆ ಇನ್ನೊಂದು ಸಮೂಹ ನೃತ್ಯವಾಗಲಿ" ಎಂದು ಆಜ್ಞಾಪಿಸಿ ದನು. ಮಹೇಂದ್ರ ಸಭೆಯ ವೈಭವವನ್ನು ನಾಚಿಸುವಂಥ ನೃತ್ಯವು ಲಯ ವೈವಿಧ್ಯದಲ್ಲಿ ಮೊದಲಾಯಿತು. ಬರ ಬರುತ್ತ ರಂಗೇರಿತು. ಅಗ್ನಿವರ್ಣನೂ ಕಾಮಿನಿಯೂ ಅದನ್ನು ತಲ್ಲೀನ ರಾಗಿ ನೋಡುತ್ತ ವಾಸ್ತವ ಪ್ರಪಂಚವನ್ನು ಮರೆತು ಸಂತಸದ ಹಾಲುಗಡಲಲ್ಲಿ ಕರಗಿಹೋದ ಸಕ್ಕರೆಯ ಗೊಂಬೆಯಾದರು. ಈ ಸನ್ನಿವೇಶದಲ್ಲಿ ಕಂಚುಕಿ ಅಂಜುತ್ತ ಅಳುಕುತ್ತ ಮಹಾರಾಜರ ಸನ್ನಿಧಿಗೆ ಬಂದು ನಿಂತು ಕೈ ಮುಗಿದು ಅಂದನು. "ಮಹಾಸ್ವಾಮಿ, ಮಹಾಮಾತ್ಯರು ಯಾವುದೋ ಅಗತ್ಯದ ಕಾರ್ಯಕ್ಕೋಸುಗ ಸನ್ನಿಧಿಯ ದರ್ಶನ ಪಡೆಯಲು ಕಾದಿದ್ದಾರೆ." ಅಗ್ನಿವರ್ಣನ ಸಮಾಧಿಯಿಂದ ಪ್ರಯತ್ನ ಪೂರ್ವಕವಾಗಿ ಹೊರಬಂದ ತಪಸ್ವಿಯಂತೆ ಮುಖವನ್ನು ಹೊರ-ಳಿಸಿ "ಸರಿ. ಬರಹೇಳು" ಎಂದನು.

"ಏನು ಮಹಾಮಾತ್ಯರೇ, ಅಂಥ ಯಾವ ರಾಜಕಾರ್ಯವು ಇಲ್ಲಿಗೆ ನಿಮ್ಮನ್ನು ಬರ-ಮಾಡಿತು?"

"ಮನ್ನಿಸಬೇಕು ಮಹಾಸ್ವಾಮಿ. ಪ್ರಭುಗಳ ಅಖಂಡವಾದ ಸಂಗೀತ—ಸಮಾಧಿಗೆ ಅಡೆತಡೆ-ಯುಂಟುಮಾಡುವ ಅನಿವಾರ್ಯ ಸಂದರ್ಭವು ಒದಗಿ ಬಂದ ಕಾರಣ."

"ಚತುರಾನನರೆಂಬ ತಕ್ಕ ಹೆಸರುಳ್ಳ ತಮ್ಮಂಥ ರಾಜಕಾರ್ಯ ದುರಂಧರರಿರುವಾಗ ನಮಗೆ ಈಗ ಯಾವ ಚಿಂತೆಯೂ ಇಲ್ಲವಲ್ಲ."

"ಪ್ರಭುಗಳ ಮೆಚ್ಚಿಗೆಯಿಂದ ನಾನು ಧನ್ಯ-ನಾದೆ. ಆದರೆ ಛತ್ರಧಾರಿಯಾದವನು ಛತ್ರ ಪತಿಯ ಸ್ಥಾನವನ್ನು ಹೊಂದಬಲ್ಲನೆ? ಹಲವಾರು ದಿನಗಳಿಂದ ರಾಜ್ಯದ ಪ್ರಜೆಗಳು ಪ್ರಭುಗಳ ದರ್ಶನ ಪಡೆಯಲು ಅತ್ಯಂತ ಉತ್ಸುಕ-ರಾಗಿದ್ದಾರೆ. ತಮ್ಮ ಕಷ್ಟ ಸುಖಗಳನ್ನು ತೋಡಿಕೊಳ್ಳಲು ಬಯಸುತ್ತಿದ್ದಾರೆ."

"ಈಗ ಅದಕ್ಕೆಲ್ಲ ವಯೋವೃದ್ಧರೂ ಜ್ಞಾನ ವೃದ್ಧರೂ ಆದ ನೀವಿದ್ದೀರಿ. ಇತರ ಅಮಾತ್ಯ ರಿದ್ದಾರೆ, ಅಧಿಕಾರಿಗಳಿದ್ದಾರೆ."

"ಅದೆಲ್ಲ ಸರಿ ದೊರೆಗಳೆ, ನಾವೆಲ್ಲ ಇದ್ದೇವೆ, ನಮ್ಮ ಕರ್ತವ್ಯ ಮಾಡುತ್ತಿದ್ದೇವೆ. ಆದರೂ ಮಹಾಸ್ವಾಮಿಗಳ ಪ್ರತ್ಯಕ್ಷ ದರ್ಶನವನ್ನು ಪಡೆಯಬೇಕೆಂದು ಪ್ರಜೆಗಳು ಹಾತೊರೆಯು-ತ್ತಿದ್ದಾರೆ. ಪ್ರಜೆಗಳ ದರ್ಶನಾಕಾಂಕ್ಷೆ ನೈಜ-ವಾದುದು, ಯೋಗ್ಯವಾದುದು. ಇಕ್ಷ್ವಾಕು ವಂಶದ ಉಜ್ವಲ ಪರಂಪರೆಯಲ್ಲಿ ಬೆಳಗಿಹೋದ ರಾಜರೆಲ್ಲ ಪ್ರಜೆಗಳ ರಂಜನೆಯಿಂದಲೇ ರಾಜನೆಂಬ ಹೆಸರು ಸಾರ್ಥಕವಾಗುತ್ತದೆಂದು ಭಾವಿಸಿ ಪ್ರತಿ ನಿತ್ಯವೂ ತಮ್ಮ ಕುಲಧರ್ಮದ ಮೇರೆಗೆ ಅವರ ಸುಖದುಃಖಗಳನ್ನು ವಿಚಾರಿಸುತ್ತಿದ್ದರು. ಸಮಸ್ಯೆಗಳನ್ನು ನಿವಾರಿಸುತ್ತಿದ್ದರು. ಅದೇ ಪರಂಪರೆಯಲ್ಲಿ ತಾವು ಜನಿಸಿ ಬಂದಿರುವಿರಿ. ಅದನ್ನೇ ಮುಂದುವರಿಸಿಕೊಂಡು ಹೋಗುವುದು ತಮ್ಮ ಕರ್ತವ್ಯ."

"ಅದೇ ಪರಂಪರೆ! ಅದೇಕೆ ಅದೇ ಪರಂಪರೆಯ ತೊಡರು ನನಗೆ? ಹೊಸ ಪರಂಪರೆಯನ್ನು ಮೊದಲುಗೊಳಿಸುವ ಹಕ್ಕಿಲ್ಲವೇ ನನಗೆ?"

"ಇದೆ ಮಹಾ ಪ್ರಭು, ಹಳೆಯುದರಲ್ಲಿ ಗ್ರಾಹ್ಯ ವಾದವನ್ನು ಸ್ವೀಕರಿಸಿ ಆಮೇಲೆ ತಮ್ಮ ಹೊಸ ಪರಂಪರೆಯನ್ನು......"

"ಸಾಕು ಈ ನೀರ ಕ್ಷೀರ ನ್ಯಾಯಬೋಧನೆ ಬೇಕಿಲ್ಲ. ನನ್ನದೇ ಆದ ಹೊಸ ಪರಂಪರೆಯನ್ನು ಪ್ರಾರಂಭಿಸಿ ಮುಂದಿನವರಿಗೆ ಮಾದರಿಯಾಗಬಾರದೇಕೆ ?" ನಾನು ಈ ಭೂಮಿಯ ಮೇಲೆ ದೊರೆಯುವ ಎಲ್ಲ ಸುಖವನ್ನು ಎಲ್ಲ ಸಾಧನಗಳಿಂದ ಮನದಣಿ ಅನುಭವಿಸಲು ಹೊರಟಿದ್ದೇನೆ. ಹೊಸ ಒಂದು ಬದುಕಿನ ಕಾಣ್ಕೆಯನ್ನು ಕಂಡು ಅದರ ನಾಂದಿಯನ್ನು ಹಾಡಬಯಸಿದ್ದೇನೆ. ಅಂತೇ ಸಕಲೇಂದ್ರಿಯ ಸುಖ, ಅದರಲ್ಲಿಯೂ ನೃತ್ಯ—ಸಂಗೀತ ಇದೇ ಸರ್ವಸ್ವ ನನಗೆ. ಇದರ ಸವಿಯನ್ನು ಸವಿಯುತ್ತಿರುವಾಗ ಯಾರೂ ನನ್ನ ತಡೆಯಲಾರದು."

"ಪ್ರಭುಗಳ ಇಚ್ಛೆ."

"ಚತುರಾನನರೆ, ಸ್ವಲ್ಪ ಇತ್ತ ಬನ್ನಿ. ನನ್ನ ಮಾತಿನಿಂದ ನಿಮಗೆ ನೋವಾಯಿತೇನೊ. ನೀವು ಒಳ್ಳೆಯದನ್ನೇ ಹೇಳಿದಿರಿ. ನಾನು ಹಾಡಿನ ಗುಂಗಿನಲ್ಲಿ ಅದನ್ನು ಕಡೆಗಣಿಸಿದೆ. ಈಗ ನನಗೆ ಒಂದು ಕಲ್ಪನೆ ಬಂದಿದೆ. ಮಹಾದ್ವಾರದ ಬಲ ಬದಿಯ ವಿಶಾಲ ಮಂದಿರವಿದೆಯಲ್ಲ, ಅದರ ಕೆಳ ನೆಲೆಯ ಗವಾಕ್ಷದಲ್ಲಿ ನನ್ನ ಪಾದವಿಟ್ಟು ಹೊರಗಡೆ ನಡೆಯುವ ಜನಕ್ಕೆ ದರ್ಶನ ಕೊಡುತ್ತಲೇ ನನ್ನ ಸಂಗೀತವನ್ನು ಒಳಗಡೆ ಕುಳಿತು ಸವಿಯ ಬಯಸುತ್ತೇನೆ."

ಸಂಗೀತದ ಸಕಲ ಪರಿಕರಗಳೊಡನೆ ನರ್ತಕಿಯರನ್ನು ಮುಂದೆ ಮಾಡಿಕೊಂಡು ಆ ವಿಶಾಲ ಮಂದಿರಕ್ಕೆ ಚಿಜಯಂಗೈಯುತ್ತ, ಗವಾಕ್ಷದ ಸನಿಹದಲ್ಲಿಯ ಮಂಚದಲ್ಲಿ ದಿಂಬಿಗೆ ಒರಗಿಕೊಂಡು ಬಲಗಾಲನ್ನು ಹೊರಚಾಚಿ ಸುಖಾಸೀನನಾದನು. ಪ್ರಭುವಿನ ಅಪ್ಪಣೆಯಾಯಿತು. ಮಹಾಮೇಳದ ನೃತ್ಯವು ಮೊದಲಾಯಿತು. ವಾದ್ಯಗಳು ವಿವಿಧ ನಾದ ಲಯಗಳಿಂದ ಮೊಳಗತೊಡಗಿದವು. ದೊರೆ



ಗಳನ್ನು ಕಾಣಬೇಕು ಎಂಬ ಸಂತೆ ಕೂಗು ಸಂದಣಿಯಿಂದ ಎಕ್ಕೆಕ್ಕೆಯಾಗಿ ಬರತೊಡಗಿತು. ಮಹಾಮಾತ್ಯನು ಜನ ಜಂಗುಳಿಗೆ "ಶಾಂತವಾಗಿರಿ" ಎಂದು ಸನ್ನೆ ಮಾಡಿ ಗವಾಕ್ಷದ ಮೂಲಕ ದೊರೆಗಳ ಪಾದದರ್ಶನ ಮಾತ್ರ ಪಡೆಯಬೇಕೆಂದು ಸಾರಿ ಹೇಳಿದನು. "ಓಹೋ ಈವತ್ತು ಬರಿ ಪಾದದರ್ಶನ! ಪಾದಕ್ಕೇನು ನಮ್ಮ ಮೊರೆ ಕೇಳುವ ಕಿವಿಯಿರುವುದೆ?" ಎಂದೊಬ್ಬ ಕೊರಚಾಡಿದ. "ಯಾವುದೋ ರಾಜಕಾರ್ಯದಲ್ಲಿ ತೊಡಗಿರುವುದರಿಂದ ಪ್ರಭುಗಳು ನಮಗೋಸ್ಕರ ಇಂದು ಪಾದದರ್ಶನವನ್ನು ಮಾತ್ರ ಅನುಗ್ರಹಿಸಿದ್ದಾರೆ," ಎಂದ ವೃದ್ಧ ರಾಜಭಕ್ತ. "ಎಲ್ಲಿಯ ರಾಜಕಾರ್ಯ? ಕೇಳಿಸುವದಿಲ್ಲವೇ ನಿಮಗೆ? ಗಾಯನ, ವಾದನ, ನರ್ತನ ಈ ಸಂಗೀತ ಸಮಾರಾಧನೆ. ಇದೇ ನಮ್ಮ ಮಹಾರಾಜರು ಇತ್ತೀಚೆ ಮಾಡುತ್ತಿರುವ ಮಹತ್ತಾದ ರಾಜಕಾರ್ಯ. ಆ ರಾಮನ ಕಾಲ ಮುಗಿದುಹೋಗಿದೆ. ಅವನೀಗ ದಂತಕಥೆಯ ಅದ್ಭುತರಮ್ಯ ನಾಯಕ. ಈಗ ಇರುವುದು ಬರೀ ಕಾಮನ ಕಾಲ" ಎಂದು ತರುಣ ತಂಡವೊಂದು ಕೂಗಾಡುತ್ತ, ಚೀರಿತು.

ಅಗ್ನಿವರ್ಣನು ಅರಮನೆಯ ವಿಶಾಲವಾದ ಮಂದಿರದಲ್ಲಿ ವಾದ್ಯಗೋಷ್ಠಿಯ ನಡುವೆ ತಾನೇ ಮೃದಂಗವನ್ನು ನುಡಿಸುತ್ತ ತಲ್ಲೀನನಾಗಿದ್ದನು. ಶಿಷ್ಟಾಚಾರದಂತೆ ಅನುಮತಿಯನ್ನು ಪಡೆದು

ಮಹಾಮಾತ್ಯನು ಒಳಗೆ ಬಂದು ಬಾಗಿ ನಮಸ್ಕರಿಸಿ, ಹತ್ತಿರದ ಆಸನದಲ್ಲಿ ಕುಳಿತುಕೊಂಡನು. ಅಗ್ನಿವರ್ಣನು ಅದೆಷ್ಟೋ ಹೊತ್ತು ನಾದಸಮಾಧಿಯಿಂದ ಹೊರ ಬರಲಿಲ್ಲ. ವೈಣಿಕನ ವೀಣೆಯ ತಂತಿಗಳು ಶ್ರುತಿಯನ್ನು ಕಳೆದುಕೊಂಡಂತೆ ಅನಿಸಿ, ಕೂಡಲೇ ಮೃದಂಗ ನಾದವನ್ನು ನಿಲ್ಲಿಸಿ, "ಅದನ್ನು ಮೊದಲು ಸರಿಪಡಿಸು" ಎಂದು ವೈಣಿಕನಿಗೆ ಹೇಳಿ ಅಗ್ನಿವರ್ಣನು ಚತುರಾನನನ ಕಡೆಗೆ ಮೊಗದಿರುವಿದನು.

"ಒಂದರ ಶ್ರುತಿ ತಪ್ಪಿದಾಗ ಇನ್ನೊಂದರ ಶ್ರುತಿಗೆ ಅವಕಾಶ ದೊರಕಿತಲ್ಲ" ಎಂದು ಚತುರಾನನು ಅಂದನು.

"ಅದೇನು ಬೇಗ ಹೇಳಿ."

"ಪ್ರಭುಗಳಿಗೆ ಪ್ರಿಯವಾದ ಸಂಗೀತಕ್ಕೆ ಸಂಬಂಧಪಟ್ಟ ವಿಷಯವೇ ಅದು. ನಮ್ಮ ರಾಜಧಾನಿಗೆ ಪ್ರಖ್ಯಾತರಾದ ಸಂಗೀತಗಾರರೊಬ್ಬರು ಬಂದಿದ್ದಾರೆ. ಸಂವಿಧಾನವು ಒಪ್ಪಿದರೆ ಅವರ ಸಂಗೀತವನ್ನು ಏರ್ಪಡಿಸಬೇಕು, ಅದಕ್ಕೆ ಅಮಾತ್ಯರನ್ನು ಆಮಂತ್ರಿಸಬೇಕು ಎಂದು ಅಭಿಲಾಷೆಯಾಗಿದೆ."

"ನಾಳೆಯೇ ಏರ್ಪಾಡು ಮಾಡಿ. ಆ ಸಂಗೀತಗಾರರಿಗೆ ಸೂಕ್ತ ಸನ್ಮಾನ ಮಾಡುವ ಸಿದ್ಧತೆಯೂ ಆಗಲಿ."

"ದೊರೆಗಳ ಆಜ್ಞೆ ಶಿರಸಾವಾನ್ಯ."

ವಾದ್ಯಗೋಷ್ಠಿ ಮುಂದುವರಿಯಿತು. ಅರಮನೆಯ ಕಂಬ ಕಂಬಗಳಲ್ಲಿ ಮೂಲೆ ಮೂಲೆಗಳಲ್ಲಿ ಅದು ತುಂಬಿ ಹೊರಸೂಸುವಂತಿತ್ತು. ಅಗ್ನಿವರ್ಣನ ಮೃದಂಗ ನಾದವಂತೂ ಮೈ ಮರೆಸುವಂಥದು. ಅದರ ಅನುರಣನವು ಕಿರಿಕಿರಿದಾಗಿ ಎಲ್ಲೆಡೆಗೆ ಹರಡುತ್ತಿತ್ತು. 'ಗೊತ್ತಾದ ದಿನದಂದು ಅರಮನೆಯ ಸಭಾಗೃಹದಲ್ಲಿ ಗಾಂಧರ್ವ ವಿಶಾರದ ರೆಂಬ ಬಿರುದು ಹೊತ್ತ ಆ ಸಂಗೀತಗಾರರ ಧ್ವನಿಯಲ್ಲಿ ಸ್ವರ ಸಂಗೀತವು ಮೂರು ಸಪ್ತಕಗಳಲ್ಲಿಯೂ ಮೂರು ಕಾಲ ಪ್ರಮಾಣಗಳಲ್ಲಿಯೂ ಅಗ್ನಿವರ್ಣನ ಮತ್ತು ಅಮಾತ್ಯರ ಕಿವಿಗೆ ಇಂಪಾಗಿ ತಟ್ಟಿತು. ಒಂದು ರತ್ನಹಾರ ಮತ್ತು ಕಾಷಾಯ ವಸ್ತ್ರದಿಂದ ಸಂಗೀತಗಾರರನ್ನು ಸನ್ಮಾನಿಸಿ ಕಳಿಸಲಾಯಿತು.

ಎಂದಿನಂತೆ ಅಗ್ನಿವರ್ಣನು ಅವರೋಧ ಗೃಹದಲ್ಲಿ ಶ್ರೀದೇವಿ-ಭೂದೇವಿಯರಂತೆ ತನ್ನ ರಾಣಿಯರಾದ ಧಾರಿಣಿ-ಕಾಮಿನಿ ಇಬ್ಬರೂ ಎಡಬಲದಲ್ಲಿರಲು ವೀಣೆಯನ್ನು ನುಡಿಸುತ್ತ ಕುಳಿತಿದ್ದನು. ಬಿಸಿಲುರಿಯನ್ನು ತಗ್ಗಿಸಲು ತಣ್ಣೀರು ತಳಿದ ಬಾಳದ ಬೇರಿನ ಬೀಸಣಿಕೆಗಳನ್ನು ದಾಸಿಯರು ಅಕ್ಕಪಕ್ಕದಲ್ಲಿ ನಿಂತುಕೊಂಡು ಬೀಸುತ್ತಿದ್ದರು. 'ಅರಸ'ನೆಂಬುವ ಕಲಂಕವನ್ನು ತೊಡೆದಂತೆ ಸರಸನಾಗಿ ದೊರೆ ತನ್ನ ಎಡಗೈ ಬೆರಳುಗಳನ್ನು ಸೂಕ್ತ ಸ್ವರಸ್ಥಾನಗಳಲ್ಲಿ ಸರಸರನೆ ಸರಿಸುತ್ತ ಬಲಗೈಯಲ್ಲಿರುವ ಕೋಣದಿಂದ ತಂತಿಗಳನ್ನು ಮೀಟುತ್ತ ಒಂದು ಹೊಸ ಸ್ವರಸೃಷ್ಟಿಯನ್ನು ನಿರ್ಮಾಣ ಮಾಡುತ್ತಿದ್ದನು. ಇಬ್ಬರೂ ದೇವಿಯರು ಸಮಾನ ಸ್ಪಂದನದಿಂದ ತಲೆ ತೂಗುತ್ತಿದ್ದರು. ನಡುನಡುವೆ ಮೆಚ್ಚುಗೆಯ ಉದ್ಗಾರಗಳು ಅವರಿಂದ ಹೊರಬರುತ್ತಿದ್ದವು.

ಅರಮನೆಯ ಹರವಾದ ಆವರಣದಲ್ಲಿಯ ಹಿರಿದೋಟದ ನಡುವೆ ಜಲವಿಹಾರಕ್ಕೆಂದು ಚೌಕಾಕಾರವಾಗಿ ರಚಿಸಲಾದ ಕೊಳವಿತ್ತು. ಅದರ ಸುತ್ತೆಲ್ಲ ರೆಂಬೆ ಕೊಂಬೆಗಳಲ್ಲಿ ತರತರದ ಆಕಾರದ ಎಲೆಗಳನ್ನು ಬಣ್ಣ ಬಣ್ಣದ ಹೂಗಳನ್ನು ಪಡೆದು ಎತ್ತರವಾಗಿ ಬೆಳೆದ ಹೆಮ್ಮರಗಳಿದ್ದವು. ಅವು ಬಾಗಿ ಬಳುಕಿ ಕೊಳದ ನೀರಲ್ಲಿ ತಮ್ಮ ಮುಖ ನೋಡುತ್ತ, ತಮ್ಮ ಎಲೆ ಹೂಗಳನ್ನು ಆಗಾಗ ಜಲದೇವಿಗೆ ಅರ್ಪಿಸುತ್ತ, ಜಲವಿಹಾರಕ್ಕೆ ಬರುವ ರಾಜರಾಣಿಯರಿಗೆ ನೆಳಲನ್ನು ನೀಡುತ್ತ ನಿಂತಿದ್ದವು. ದಿನವೆಲ್ಲ ಗಾಸಿಪಡಿಸಿದ ಉರಿಬಿಸಿಲು ತಗ್ಗಿದ್ದರೂ ಅದರ ಶಾಖವು ಅಳಿದಿರಲಿಲ್ಲ— ಸಿರಿಯನ್ನು ಕಳೆದುಕೊಂಡರೂ ಸಿರಿವಂತ ಸಿರಿವಂತನ ಹಮ್ಮು ಬಿಮ್ಮು ಕಳೆಯು ದಿರುವಂತೆ! ನೀರಾಟಕ್ಕೆ ಅಂತೆ ಕರೆಯುತ್ತಿತ್ತು ಕಾಲದ ಸನ್ನಿವೇಶ. ಕೊಳದ ಮೇಲ್ಮೈಲೆಯಲ್ಲಿರುವ ಆಸರೆ ಮನೆಯಲ್ಲಿ ರಾಜವೇಷವನ್ನು ಕಳೆದ ಅಗ್ನಿವರ್ಣನು ಚಲ್ಲಣವೊಂದನ್ನು ತೊಟ್ಟು ಜಲವಿಹಾರಕ್ಕೆ ಅಣಿಯಾದನು. ಹೊಂಬಿಸಿಲು ಅವನ ಮೈ ಮುಸುಕಿ ಹೊಂಬಣ್ಣದ ಮೈಗೆ ಇನ್ನಷ್ಟು ಮೆರಗು ಕೊಟ್ಟ ಕಾದ ಬಂಗಾರದಂತಾಗಿಸಿ ಅಗ್ನಿ

ವರ್ಣನೆಂಬ ಹೆಸರನ್ನು ದಿಟಗೊಳಿಸಿತು. ಕಾಮಿನಿ
ಎದೆಗುಪ್ಪಸವನ್ನು ತೊಟ್ಟು ನಡುವಿಗೆ ಚಲ್ಲಣ
ವಂಥ ಬಿಗಿ ಬಟ್ಟೆಯನ್ನು ಸುತ್ತಿ ಅವನ ಹತ್ತಿರ
ಬಂದು ನಿಂತು ತನ್ನ ಗೋದಿಗೆಂಪಿನ ಮೈ
ಹೊಂಬಿಸಿಲಲ್ಲಿ ಮಿಂದಿರಲು ಅವನಿಗೆ ಮೋಹದ
ಅವತಾರವಾಗಿ ಕಂಡಳು. ಇಬ್ಬರೂ ತಡೆಯ
ಲಾರದ ಆವೇಶಕ್ಕೆ ಒಳಗಾಗಿ ಬರಸೆಳೆದು ಅಪ್ಪಿ
ಕೊಳ್ಳಲು. ಅವರ ಮೈ ನವಿರೆದ್ದಿತು.



ಕೊಳದಲ್ಲಿ ಇಬ್ಬರೂ ನೀರಿಗಿಳಿದರು. ಅವರ
ಹಿಂದೆಯೇ ಮೋಹನಾಂಗಿ ಮುಂತಾಗಿ ಕಾಮಿ
ನಿಯ ಸುತ್ತ ಸುಳಿಯುವ ಹಲವಾರು ಚಲುವೆ
ಯರು ಜಲವಿಹಾರದ ವೇಷದಲ್ಲಿ ಒಬ್ಬೊಬ್ಬ
ರಾಗಿ ಬಂದು ಬೇರೆ ಬೇರೆ ಮೆಟ್ಟಿಲುಗಳಿಂದ ಕೆಳ
ಬಂದು ನೀರಲ್ಲಿ ತೇಲಿದರು. ಕೊಳದ ನೀರು
ಎಲ್ಲೆಡೆಗೆ ಒಂದು ಆಳಕ್ಕಿಂತ ಕಡಿಮೆಯಾಗಿತ್ತು,
ಅದು ಈಜುಗೊಳವಲ್ಲ. ಬರಿ ನೀರಾಟದ ಕೊಳ.
ಮೊದಲು ಎಲ್ಲರೂ ಮೀನುಗಳಂತೆ ಬೆಡಗಿನಿಂದ
ಮುಳುಗುತ್ತ ತೇಲುತ್ತ ದುಂಡು ಸುತ್ತುತ್ತಿದ್ದರು.
ಆಮೇಲೆ ಅಗ್ನಿವರ್ಣನು ಕೊಳದ ನಟ್ಟನಡುವೆ
ನಿಂತು ಒಬ್ಬೊಬ್ಬರ ಮೇಲೆ ಬೊಗಸೆ ಗೈಯಿಂದ
ನೀರು ಚಿಮ್ಮಿಸುತ್ತ ಚೆಲ್ಲಾಟದಲ್ಲಿ ತೊಡಗಿದನು.
ಆ ನೀರಿನ ಸಿಂಪಡಿಕೆಯನ್ನು ಒಯ್ಯಾರದಿಂದ
ತಪ್ಪಿಸಿಕೊಳ್ಳುತ್ತ ಆದರೂ ಅವರ ತುಂತುರುಗಳ
ಸಿಡಿತದಿಂದ ಸುಖಪಡುತ್ತ ದೊರೆಯ ಮೇಲೆ
ತಾವೂ ನೀರಿನ ಮರುದಾಳಿ ನಡೆಸುತ್ತ ಕಾಮಿ
ನಿಯೂ ಆ ಚೆಲುವೆಯರಾದ ಕೆಳದಿಯರೂ
ನಲಿಯುತ್ತಿದ್ದರು. ಕೊಳದೊಳಗಿನ ಕಮಲಗಳು
ನೀರೆಯರ ಮೈ ಸೋಂಕಿನಿಂದಲೂ ಸ್ತನ ಸ್ಪರ್ಶ
ದಿಂದಲೂ ಸಂತಸಪೊಂದಿ ತಲೆದೂಗುತ್ತಿದ್ದವು,
ಅಗ್ನಿವರ್ಣನಂತೂ ಬಿಚ್ಚಿದ ಕೂದಲ ರಾಶಿಯಿಂದ
ಮತ್ತು ಮುಖದಿಂದ ಇಳಿಯುತ್ತಿರುವ ನೀರ
ಹನಿಗಳ ತೊಡವು ತೊಟ್ಟು ಇನ್ನಿಷ್ಟು ಚೆಲುವಾದ
ಅವರ ಮೈಗಳನ್ನು ತಟ್ಟಿ ತಬ್ಬಿ ಹಿಗ್ಗುವ ಭರ
ದಲ್ಲಿ ಎಲ್ಲ ಬಗೆಯ ಸಂಕೋಚವನ್ನೂ ಸಂಕೋಲೆ
ಯನ್ನೂ ಗಾಳಿಗೆ ತೂರಿದನು.

ಸಂಜೆ ಸರಿಯಿತು, ಕತ್ತಲೆ ಕವಿಯಿತು.
ದೀಪದ ಕಲ್ಲು ಕಂಬಗಳಲ್ಲಿ ದೀವಿಗೆಗಳನ್ನು
ಅಂಟಿಸಲಾಯಿತು. ನೀರಾಟ ನಿಲ್ಲಲಿಲ್ಲ. ಜೀರ್ಕೊ
ಳವೆಗಳನ್ನು ತರಿಸಿ ರಂಗುರಂಗಾದ ನೀರು
ತುಂಬಿ ಒಬ್ಬರೊಬ್ಬರ ಮೇಲೆ ಜೀಕಳಿ ಹೊಡೆ
ಯುವ ಮತ್ತು ಜಾರಿಕೊಂಡು ಮೂಡಿ ಮುಳ
ಗುವ ವಿನೋದ ನಡೆಯಿತು. ಕೆಲ ಹೊತ್ತು
ಹೀಗೆ ಜಲವಿಹಾರ ಮಾಡಿ ಎಲ್ಲರೂ ಮೇಲೆ
ಬಂದರು. ತೊಯ್ದ ಮೈಗಳನ್ನು ಒರೆಸಿ
ಕೊಂಡರು. ತೆಳ್ಳನೆಯ ಬಟ್ಟೆ ತೊಟ್ಟುಕೊಂಡರು.
ಮೊದಲೇ ಯೋಚಿಸಿದಂತೆ ಗೂಢವಾದ ಮೋಹನ
ಗೃಹಗಳನ್ನು ಹೊಕ್ಕರು. ಇವು ಕೊಳದ ಪಕ್ಕ
ದಲ್ಲಿಯೇ ಕಟ್ಟಲಾದ ವಿಶಾಲವಾದ ನೆಲಮನೆಗಳು.
ನೆಲದೊಡಲಲ್ಲಿಯೇ ಸಕಲ ಶಿಲ್ಪ ಸೌಂದರ್ಯ-
ದಿಂದ ರಚಿತವಾದ ಅರಮನೆಗಳು. ಇಲ್ಲಿ
ದೀಪಗಳು ಝಗಝಗಿಸುತ್ತಿದ್ದವು. ಗೂಢವಾದ
ಒಂದೆಡೆಯಿಂದ ಲಯಬದ್ಧವಾದ ಮಾದಕವಾದ
ವಾದ್ಯ ಮೇಳದ ಇಂಚರಗಳು ಅಲೆಗಳ ಸವಾರಿ-
ಯಾಗಿ ಬರುತ್ತಿದ್ದವು. ಅಗ್ನಿವರ್ಣನು ಕಾಮಿನಿ
ಮತ್ತು ಉಳಿದ ನೀರೆಯರೊಂದಿಗೆ ಆಸನಸ್ಥನಾಗಿ
ಕ್ಷತ್ರಿಯೋಚಿತ ಆಹಾರವನ್ನು ಸೇವಿಸಿ ಬೆಳ್ಳಿಯ
ಬಟ್ಟಲುಗಳಲ್ಲಿ ಇಟ್ಟಿರುವ ಮಧುಮೈರೇಯವೆಂಬ
ರುಚಿಕಟ್ಟಾದ ಮದ್ಯವನ್ನು ಕುಡಿದನು.
ತೃಪ್ತಿ ಎಲ್ಲರ ಮೊಗದಲ್ಲಿ ಲಾಸ್ಯವಾಡಿತು, ಅವರೆ
ಅಮಲೇರಲಿಲ್ಲ. ಆಗ ವಾರುಣಿಯೆಂಬ ಕಡಕಾದ
ಮದ್ಯವನ್ನು ಮಿತಿಯ ಮಾತೇ ಇಲ್ಲದೆ ಎಲ್ಲರೂ
ಹೀರಿದರು. ಮದಾತಿರೇಕವು ಕಣ್ಣ ಕೆಂಪಿನಲ್ಲಿ

ತನ್ನ ಅರುಣೋದಯವನ್ನು ಕಾಣಿಸಿತು. ಇರುಳೆಂಬ ಅರಿವು ಅದಕ್ಕೆ ಅಡಗಿ ಹೋಯಿತು. ಅರಸನ ಬಾಯಿಂದ ಅವರು, ಅವರ ಬಾಯಿಂದ ಅರಸನು ಹೀಗೆ ಮುಖಾಸವವನ್ನು ಸವಿದರು. ಸಂಯಮದ ನಾಡನ್ನು ದಾಟಿ ಕಲ್ಪನೆಯ ವೈಹಾಳಿಗೆ ಎಲ್ಲರೂ ಎದ್ದು ನಿಂತರು, ತೂಗಾಡಿದರು, ಕೂಗಾಡಿದರು, ಹುಚ್ಚುಹುಚ್ಚಾಗಿ ಕುಣಿದಾಡಿದರು. ಅಗ್ನಿವರ್ಣನಂತೂ ಅವರೊಂದಿಗೆ ಯಾವ ಕಟ್ಟುಪಾಡಿಲ್ಲದೆ ಮೈ ಮೈ ಹೆಣೆದುಕೊಂಡು ಚಕ್ಕಂದವಾಡಿದನು, ಆದರೆ ಅಂಥ ಅಮಲಿನಲ್ಲಿಯೂ ಅವರ ಮೆಯ್ಸೊಗವನ್ನು ಬಯಸಲಿಲ್ಲ. ಪರಮಾವಧಿಯಾದ ಇಂದ್ರಿಯ ಸುಖವೇ ಅವನ ಗುರಿಯಾಗಿತ್ತು. ಮಧ್ಯರಾತ್ರಿ ಮೀರಿದ ಮೇಲೆ ಮದವಿಳಿಯಲು ಎಲ್ಲರೂ ಅಲ್ಲಿಂದ ತೆರಳಿ ತಂತಮ್ಮ ನಿವಾಸಗಳನ್ನು ಸೇರಿದರು. ಅಗ್ನಿವರ್ಣನು ಕೂಡ ಅತಃಪುರಕ್ಕೆ ಹೋಗಿ ಅವಳ ಶಯ್ಯಾಗಾರದಲ್ಲಿ ಜೊತೆಗೂಡಿ ಮೈಮರೆತು ಬೆರೆತು ಅಲ್ಲಿಯೆ ನಿದ್ದೆ ಹೋದನು.

*

ಚೈತ್ರ ಪೂರ್ಣಿಮೆಯ ದಿನ ಬೆಳಿಗ್ಗೆ ರಾಜಪುರೋಹಿತರು, ಸ್ನಾನಾದಿಯಿಂದ ಶುಚಿರ್ಭೂತನಾದ ಅಗ್ನಿವರ್ಣನ ಸನ್ನಿಧಿಗೆ ಬಂದು ಜನ್ಮದಿನದ ಆಶೀರ್ವಚನವನ್ನು ಹೇಳುತ್ತ "ನೂರು ವರ್ಷಬಾಳು, ಸುಪುತ್ರನನ್ನು ಪಡೆ," ಎಂದು ಹರಿಸಿದರು. ತಕ್ಷಣ ಅವನಿಗೆ ತಾಯಿಯ ನೆನಪಾಯಿತು. ಅವಳಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಆಶೀರ್ವಾದ ಪಡೆಯಬೇಕೆಂದು ಅವಳ ಕುಟೀರಕ್ಕೆ ಅವನು ಧಾವಿಸಿಹೋದನು. ನಂದಿನಿ ಬೆಳಗಿನ ವಿಧಿ ವಿಧಾನಗಳನ್ನು ಮುಗಿಸಿ ಜಪಮಾಲೆಯನ್ನು ಹಿಡಿದುಕೊಂಡು ಕೂತಿದ್ದಳು. ಅಗ್ನಿವರ್ಣನು ಅನೀರಿಕ್ಷಿತವಾಗಿ ಅವಳಲ್ಲಿಗೆ ಬಂದು ಪ್ರಣಿಪಾತದಿಂದ ಭಕ್ತಿಪೂರ್ವಕವಾಗಿ ವಂದಿಸಿದನು. ಜನ್ಮದಿನದ ಹರಕೆಯನ್ನು ಕೋರಿದನು. ಅವಳು ಅವನನ್ನು ಆಲಂಗಿಸಿ, ತಲೆಯನ್ನು ಮೂಸಿ ನೋಡಿ "ಆಯುಷ್ಮಂತನಾಗು ಅಗ್ನಿಯಂತೆ ತೇಜಸ್ವಿಯಾಗು, ಚಾರಿತ್ರ್ಯವಂತನಾಗು. ನಿನ್ನ ಪೂರ್ವಜರ ಉದಾತ್ತ ಪರಂಪರೆಯನ್ನು ಮುನ್ನಡೆಸು" ಎಂದು ತುಂಬಿದೆದೆಯಿಂದ ಆಶೀರ್ವದಿಸಿದಳು. ಅವನಿಗೆ ಪುಷ್ಪಫಲ ಪ್ರಸಾದವನ್ನು ಕೊಟ್ಟಳು.

"ಅದೆಷ್ಟೋ ದಿನವಾಯಿತು, ತಾಯಿ, ನಿನ್ನ ಹತ್ತಿರ ಬರದೆ, ಅದಕ್ಕಾಗಿ ಮನ್ನಿಸು." "ಈ ಉಪಚಾರವೇಕೆ ಮಗು? ನಿನಗೆಷ್ಟು ಕೆಲಸವೋ ಏನೋ. ಅದರಲ್ಲಿ ಸಂಗೀತದ ಸಂಗತಿ ಬೇರೆ ನಿನಗೆ. ಹೊತ್ತು ಹೆತ್ತು ಸಾಕಿ ಸಲುಹಿದ ನನ್ನ ಕಣ್ಣ ಮುಂದೆ ಯಾವಾಗಲೂ ನೀನು ಇರುವಿ. ನೀನು ಹತ್ತಿರ ಬರಲೇಬೇಕೆಂದಿಲ್ಲವಲ್ಲ."

ಅದು ತಾಯ್ಕರುಳಿನ ಹಿರಿಮೆ.

"ಅಲ್ಲ, ಇಂದಿಗೆ ನಿನಗೆಷ್ಟು ವರ್ಷವಾಯಿತು ಹೇಳು? ಗುರುಕುಲದಿಂದ ನೀನು ಮರಳಿದೊಡನೆ ಇಪ್ಪತ್ತು ವರ್ಷದವನಿರುವಾಗಲೇ ಪ್ರಜೆಗಳ ಸಮ್ಮತಿ ಪಡೆದು ನಿನಗೆ ಪಟ್ಟಾಭಿಷೇಕ ಮಾಡಿ ಧಾರಿಣಿಯನ್ನು ನಿನ್ನ ಮಹಾರಾಣಿಯನ್ನಾಗಿಸಿ ರಾಜಸೂತ್ರಗಳನ್ನು ವಹಿಸಿಕೊಟ್ಟು ನಾವು ತಪೋವನಕ್ಕೆ ಹೋದೆವು. ಆ ಮೇಲೆ ನಿನ್ನ ತಂದೆ ಕಾಲವಾದರು. ಹತ್ತು ವರ್ಷದ ತರುವಾಯ ನಾನು ಮತ್ತೆ ಇಲ್ಲಿಗೆ ಬಂದೆ. ಬಂದು ೫ ವರ್ಷವಾಗಿರಬೇಕು. ಅಂದರೆ ನಿನಗೀಗ ೩೫ ವಯಸ್ಸು. ಎಷ್ಟು ಬೇಗ ದೊಡ್ಡವನಾದೆಯಪ್ಪ" "ತಾಯಿ, ಎಷ್ಟು ದೊಡ್ಡವನಾದರೂ ನಿನ್ನ ಮುಂದೆ ನಾನಿನ್ನೂ ಹಸಗೂಸು.'

"ಹೌದು, ನೀನು ನನ್ನ ಮುಂದೆ ಹಸಗೂಸು. ಆದರೆ ರಾಜನಾದವನು ಯಾವಾಗಲೂ ಹಸುಗೂಸಿನಂತಿರಬಾರದು ನೋಡು."

"ನೀನಿದನ್ನು ಎಷ್ಟು ಸಲ ಹೇಳಿದ್ದಿಯೋ."

"ನಾನೀಗ ಹಸುಗೂಸಿನಂತಿಲ್ಲವಲ್ಲ."

"ಹೇಗೋ? ಇದು ಸಂತೋಷದ ವಿಷಯ. ಆದರೆ ಯಾವಾಗಲೂ ಮನುಷ್ಯ ಹೇಗಿರಬೇಕೆಂದರೆ ಯಾರೇ ಒಂದು ಮಾತನ್ನು ಹೇಳಲಿ, ಅದು ಸರಿಯಿದ್ದರೆ ಅದನ್ನು ಅರ್ಥಮಾಡಿಕೊಂಡು ಅದರಂತೆ ನಡೆಯುವ ಪ್ರಯತ್ನ ಮಾಡಬೇಕು. ಸರಿಯೆಂದು ಅನಿಸದಿದ್ದರೆ ಹೇಳಿದ್ದಕ್ಕೆ ಸಿಟ್ಟಾಗಬಾರದು. ನೀನಂತೂ ಮಹಾರಾಜ. ನಿನಗೆ ಎರಡು ಕಣ್ಣು ಸಾಲವು. ನಿನ್ನ ಅಮಾತ್ಯರು.

ನಿನ್ನ ರಾಣಿವಾಸದವರು, ಪ್ರಜಾಪ್ರತಿನಿಧಿಗಳು, ಗುಪ್ತಚಾರರು ಎಲ್ಲರೂ ನಿನಗೆ ನೂರು ಕಣ್ಣಾಗಿರುತ್ತಾರೆ. ಅವರ ಮಾತನ್ನು ಕಿವಿಯಿಟ್ಟು ಕೇಳಿ ಜನಕ್ಕೆ ಯಾವುದು ಒಳ್ಳೆಯದೋ ಅದನ್ನು ಮಾಡಬೇಕು, ಮಾಡಿಸಬೇಕು. ಹನ್ನೆರಡು ವರ್ಷ ಗುರುಗಳ ಆಶ್ರಯದಲ್ಲಿದ್ದು ರಾಜಪದವಿಗೆ ತಕ್ಕ ಹಾಗೆ ನೀನು ಶಸ್ತ್ರ, ಶಾಸ್ತ್ರ ಎರಡರಲ್ಲಿಯೂ ಶಿಕ್ಷಣ ಪಡೆದಿರುವಿಯಲ್ಲವೆ?"

"ತಾಯಿ, ನೀನು ಹೇಳಿದ್ದೆಲ್ಲ ನಾನು ಒಪ್ಪುತ್ತೇನೆ. ನಾನೆಲ್ಲಿಯಾದರೂ ತಪ್ಪಿರುವೆನೇ? ನೇರವಾಗಿ ಹೇಳು."

ತನ್ನ ರೀತಿಯಲ್ಲಿ ಹೇಳತಕ್ಕ ಮಾತಿಗೆ ಇದು ಸರಿಯಾದ ಸಮಯವೆಂದು ಭಾವಿಸಿ ಸಂದಿಸಿ ಆರಂಭಿಸಿದಳು:

"ನೋಡು ಅಗ್ನಿ, ನೀನು ಕಲಾಭಿಮಾನಿ, ಸಂಗೀತಪ್ರಿಯ, ಬಾಲ್ಯದಿಂದಲೂ ಈ ಪ್ರತಿಭೆಯನ್ನು ತೋರಿರುವಿ. ಅರಮನೆಯನ್ನೆಲ್ಲ ನೀನು ನಾದಮಯವಾಗಿ ಮಾಡಿರುವಿ. ಈ ಸೂರ್ಯವಂಶದಲ್ಲಿ ಅದೆಷ್ಟೋ ಅರಸರು ಆಗಿ ಹೋದರು. ಯಾರೂ ಇಷ್ಟರ ಮಟ್ಟಿಗೆ ನಾದಬ್ರಹ್ಮನ ಉಪಾಸನೆಯನ್ನು ಮಾಡಿರಲಿಲ್ಲ. ನನಗೆ ಇದು ಹೆಮ್ಮೆಯ ವಿಷಯ. ಆದರೆ ಯಾರೇ ಆಗಲಿ ಸಮಾಜದಲ್ಲಿ ಅವನ ಸ್ಥಾನ ಚಿಕ್ಕದಾಗಿರಬಹುದು ದೊಡ್ಡದಾಗಿರಬಹುದು, ತಾನು ವಹಿಸಿಕೊಂಡ ಕರ್ತವ್ಯ ಮತ್ತು ಹೊಣೆಗಳಿಗೆ ಅಗ್ರಸ್ಥಾನ ಕೊಡಬೇಕಲ್ಲವೆ?"

"ಒಪ್ಪಿದೆ ತಾಯಿ, ನನ್ನ ಕರ್ತವ್ಯದಲ್ಲಿ ನಾನು ತೊಡಗಿಯೇ ಇರುತ್ತೇನೆ."

"ಇದು ಮೆಚ್ಚಬೇಕಾದ ಆತ್ಮವಿಶ್ವಾಸ ಮಗು. ಆದರೆ ಆತ್ಮಶೋಧನೆಯೂ ನಮ್ಮಲ್ಲಿ ಇರಬೇಕು. ಪ್ರಜೆಗಳಿಗೆ ಪ್ರತಿದಿನ ದರ್ಶನ ಕೊಟ್ಟು ಅವರ ಸುಖದುಃಖವನ್ನು ವಿಚಾರಿಸಬೇಕಾದ ದೊರೆ ಅವರಿಗೆ ಅಪರೂಪವಾದರೆ ಹೇಗೆ? ನೀನು ವಾರಕ್ಕೊಂದು ಬಾರಿ ಪಾದದರ್ಶನ ಕೊಡುವಿಯಂತೆ. ಪಾದಕ್ಕೇನು ಕಿವಿಯಿದೆಯೇ, ಬಾಯಿ ಇದೆಯೇ? ಆ ಮೇಲೆ ತಿಂಗಳಿಗೊಂದು ಸಲ ಓಲಗಕ್ಕೆ ಬಂದು ಎಲ್ಲರನ್ನು ಕಂಡು ಅವರ ದೂರುಗಳನ್ನು ಕೇಳುವುದಾಗಿ ಹೇಳಿದಿಯಂತೆ. ಮೊದಲನೇ ಸಲ ನಿದ್ದೆಗಣ್ಣಿನಲ್ಲಿ ಹೋಗಿ ದೂರುಗಳಿಗೆ ಏನೂ ಪರಿಹಾರ ಹೇಳದೆ ಎದ್ದು ಬಂದೆಯಂತೆ."

"ಓಹೋ! ಇದೆಲ್ಲ ನಿನ್ನ ಕಿವಿಯವರೆಗೆ ಬಂದಿರುವುದೇ? ಯಾರು ಹೇಳಿದರು."

"ಯಾರೋ ಹೇಳಿದರು, ಅದು ಮುಖ್ಯವಲ್ಲ. ಕೋಪಿಸಿಕೊಳ್ಳಬೇಡ. ನೀನು ನನ್ನ ಮಗನಾದರೂ ನಿನ್ನ ಕರ್ತವ್ಯ ಸರಿಯಾಗಿ ಮಾಡುತ್ತಿಲ್ಲ ಎಂದು, ನಾನಲ್ಲದೇ ಯಾರು ಹೇಳಬೇಕು ನಿನಗೆ?"

"ಹೇಳು ತಾಯಿ ಹೇಳು. ನಿನಗೆ ಹೇಳುವ ಅಧಿಕಾರವಿದೆ. ಆದರೆ ನಾನು ಅಮಾತ್ಯರನ್ನೂ ಅಧಿಕಾರಿಗಳನ್ನೂ ನೇಮಿಸಿದ್ದೇಕೆ?"

"ಅವರು ತಮ್ಮ ಕರ್ತವ್ಯ ಮಾಡದಿದ್ದರೆ ನೀನು ಅವರಿಂದ ಮಾಡಿಸಬೇಕು ಅದಕ್ಕೂ ಅವರು ಮಣಿಯದಿದ್ದರೆ ಬೇರೆಯವರನ್ನು ನೇಮಿಸಬೇಕು. ಕೈಲಾಗದ ರಾಜನನ್ನು ಎಷ್ಟು ದಿನ ಸಹಿಸಿಕೊಳ್ಳುತ್ತಾರೆ? ನಮ್ಮ ರಾಜ್ಯದಲ್ಲಿ ಕ್ಷಾಮ ತಲೆದೋರಿರುವುದಂತೆ. ಕಳ್ಳಕಾಕರ ಮತ್ತು ಅನ್ಯರಾಜ್ಯಗಳ ಭಯ ಹೆಚ್ಚಿರುವುದಂತೆ. ಅಗ್ನಿ, ನೀನು ಮೊದಲಿನ ದೇದಿಪ್ಯಮಾನ ಅಗ್ನಿಯಾಗು, ಕರ್ತವ್ಯದ ನಿರಂತರ ಜ್ವಾಲೆಯಾಗು, ಕೇವಲ ಸಂಗೀತ ಸಮಾಧಿಯಲ್ಲಿ ನೀನು ಮುಳುಗಿದ್ದರೆ ದೇಶಕ್ಕೆ ದೇಶವೇ ಸಮಾಧಿ ಹೊಂದಬೇಕಾದೀತು!"

"ತಾಯಿ, ಹಾಗಾದರೆ ನಾನು ಸಂಗೀತ ಸರಸ್ವತಿಯ ಆರಾಧನೆಯನ್ನು ಬಿಟ್ಟು ಬಿಡಬೇಕೆ?"

"ಹಾಗಲ್ಲ ಮಗು, ಆ ಸರಸ್ವತಿಯ ಆರಾಧನೆಯನ್ನು ಬಿಡಬೇಕೆಂದು ಯಾರು ಹೇಳಿದರು? ಕರ್ತವ್ಯ ದೇವತೆಯ ಆರಾಧನೆಗೆ ಅಡ್ಡಿಯಾಗದಂತೆ ಅದಿರಬೇಕು?"

"ಅದು ನನಗೆ ಸಾಧ್ಯವಿಲ್ಲ. ಬೇಕಾದರೆ ನಾನು ಈ ರಾಜ ಪದವಿಯನ್ನೇ ಬಿಟ್ಟು ಕೊಡುತ್ತೇನೆ."

"ಹಾಗೆನ್ನಬೇಡ. ಇದು ವಂಶಪರಂಪರೆಯಿಂದ ನಿನಗೆ ಬಂದ ಪವಿತ್ರಕಾರ್ಯ. ನಿನ್ನ ತಂದೆ, ತಾತ ಅವರ ಹಿಂದಿನವರು ಎಲ್ಲರೂ ಇದನ್ನು ನಿಷ್ಠೆಯಿಂದ ಮಾಡುತ್ತ ಬಂದರು."

"ಅದೇನೋ ನನಗೆ ತಿಳಿಯದು. ನಾನೇಕೆ ಅವರಂತೆ ಇರಬೇಕು? ಯಾರ ಹೆದರಿಕೆಯಿಲ್ಲದೆ ನಾನು ನನಗೆ ತೋರಿದಂತೆ ಇರಬಯಸುವೆ.

ನನ್ನದೇ ಒಂದು ಹೊಸ ಅಸ್ತಿತ್ವದ ಬಗೆಯನ್ನು ರೂಪಿಸುವೆ."

"ರೂಪಿಸು, ರೂಪಿಸು. ನಿನ್ನಂತೆ ನೀನು ಇರು. ಅದು ಒಳ್ಳೆಯದು. ಆದರೆ ನೀನು ಯಾರು ಎಂಬುದನ್ನು ಮೊದಲು ಸರಿಯಾಗಿ ತಿಳಿದುಕೋ. ನಿನ್ನ ರಕ್ತದ ಕಣಗಳಲ್ಲಿ ಕೇವಲ ಇಂದ್ರಿಯ ಸುಖದ ಝರಿಗಳು ಹರಿಯುತ್ತಿಲ್ಲ, ಬರೀ ಸಂಗೀತ-ಲಹರಿಗಳು ಸುಳಿಯುತ್ತಿಲ್ಲ. ಅದರಲ್ಲಿ ರಾಜಪಿಂಡದ ಮತ್ತು ಪೂರ್ವ ಪರಂಪರೆಯ ಹೆದ್ದೊರೆಗಳಿವೆ. ಅವನ್ನು ನೀನು ಮೊದಲು ಅರಿತುಕೋ."

"ತಾಯಿ ನಿನ್ನ ಉಪದೇಶವನ್ನು ಆಜ್ಞೆಯೆಂದು ಭಾವಿಸಿ ನಡೆಯಿಸಿ ತೋರಿಸುವೆ, ಆಯಿತೆ?"

ತಾಯಿ ನಂದಿನಿಯ ಕುಟೀರಕ್ಕೆ ಹೋಗಿ ಹರಕೆ ಪಡೆದು, ತನ್ನ ಜನ್ಮದಾತನ ಮತ್ತು ಪೂರ್ವಜರಲ್ಲಿಯ ಒಬ್ಬ ದೊರೆಯ ಉಜ್ವಲ ಚರಿತ್ರೆಯನ್ನು ಅವಳಿಂದ ಕೇಳಿಸಿಕೊಂಡು ಹಳೆಯ ನಂಬಿಕೆಗಳ ಬಗ್ಗೆ ಸಂದೇಹಗ್ರಸ್ತನಾದರೂ ಅವರ ಉಜ್ವಲ ಚಾರಿತ್ರ್ಯದಿಂದ ಸ್ಫೂರ್ತಿ ಹೊಂದಿ ಅಗ್ನಿವರ್ಣನು ರಾಜನಾಗಿ, ಹೊಸ ಹೆಜ್ಜೆಯನ್ನು ಇಡಲು ಮನಸ್ಸು ಮಾಡಿದನು. ಅದರ ಪರಿಣಾಮವು ಅವನ ಪ್ರಸನ್ನವಾದ ಮುಖಚರ್ಯೆಯಲ್ಲಿ ಕಾಣಹತ್ತಿತು.

ಒಂದು ದಿನ ಸಂಜೆ ಅಂತಃಪುರದ ವಿನೋದ ಗೃಹದಲ್ಲಿ ಅವನು ನಟ್ಟನಡುವಿನ ಹರವಾದ ಆಸನದಲ್ಲಿ ಬೆನ್ನಾಸರೆಯಾದ ರೇಶಿಮೆಯ ದಿಂಬಿಗೆ ಆತುಕೊಂಡು ಆರಾಮವಾಗಿ ಕುಳಿತುಕೊಂಡು ಅಕ್ಕ ಪಕ್ಕದಲ್ಲಿ ಧಾರಿಣಿ-ಕಾಮಿನಿಯರೊಡನೆ ಸರಸ ಸಲ್ಲಾಪವನ್ನು ಮಾಡುತ್ತಿದ್ದನು. ಇಬ್ಬರೂ ತನಗೆ ಅಷ್ಟೇ ಪ್ರಿಯರೆಂಬುದನ್ನು ಮಾತು ಮಾತಿನಲ್ಲಿ ತೋರುತ್ತಿದ್ದನು. ಅವರೂ ಹರ್ಷಚಿತ್ತರಾಗಿ ಮುಕ್ತಮನಸ್ಸಿನಿಂದ ಅವನೊಡನೆ ಆತ್ಮೀಯ ಭಾವ ಮಾತುಕತೆಯಲ್ಲಿ ತಲ್ಲೀನರಾಗಿದ್ದರು.

"ಇದೇ ತರಹ ನಾವು ಯಾವಾಗಲೂ ಇರಬೇಕು ಅಲ್ಲವೆ?" ಎಂದು ಧಾರಿಣಿ ತನ್ನ ಬೆಳದಿಂಗಳಂತೆ ಬಿಳಿದಾದ ಮುಖದಿಂದ ಬೆಳದಿಂಗಳಲ್ಲಿ ಅರಳಿದ ಮಲ್ಲಿಗೆಯಂತೆ ಮುಗುಳ್ನಗೆ ಬೀರಿ ಅಂದಳು.

"ಹೌದು ಹೌದು, ನಮ್ಮನ್ನು ನೋಡಿ ಜನವೆಲ್ಲ

ಕರಬುವಂತಾಗಬೇಕು" ಕಾಮಿನಿ ದನಿಗೂಡಿಸಿದಳು.

"ಅದೆಲ್ಲ ಸರಿ ರಾಣಿದ್ವಯರೆ. ಆದರೆ ನಮಗೆಲ್ಲ ಕರ್ತವ್ಯಗಳಿರುತ್ತವೆ ಎನ್ನುವುದನ್ನು ಮರೆಯಬೇಡಿರಿ. ನಾವೇನು ಬೆಳದಿಂಗಳನ್ನು ಉಂಡು ಯಾವಾಗಲೂ ಬಾನಿನಲ್ಲಿ ಹಾರಾಡುವ ಜೊನ್ನವಕ್ಕಿಗಳಲ್ಲ!"

"ಎಲ್ಲ ಗೊತ್ತು. ಈಗೇಕೆ ಅದರ ನೆನಪು?" ಕಾಮಿನಿ ಕೊರಳನ್ನು ಕೊಂಕಿಸಿದಳು.

"ಹಾಗಂದರೆ ಹೇಗೆ? ದೊರೆ ಹೇಳಿದ್ದು ನಿಜ ತಾನೆ. ಈವೊತ್ತು ಅದೆಷ್ಟು ಹೊತ್ತು ಇವರು ರಾಜಕಾರ್ಯದಲ್ಲಿ ಮಗ್ನರಾಗಿದ್ದರು. ಅದೇನು ವಿಷಯ ನಡೆದಿತ್ತು ಕೇಳಬಹುದೆ?" ಅಗ್ನಿವರ್ಣನತ್ತ ಧಾರಿಣಿ ಆಸಕ್ತಿಯಿಂದ ಮುಖ ತಿರುವಿದಳು. ಈವೊತ್ತು ನಾನು ಓಲಗಕ್ಕೆ ಹೋಗಿ ಪ್ರಜಾಪ್ರತಿನಿಧಿಗಳ ಸಂಕಷ್ಟಗಳನ್ನು ಕೇಳಿಕೊಂಡೆ. ಕೂಡಲೇ ಸಚಿವ ಮಂಡಳಿಯ ಸಭೆ ಕರೆದು ಸಂಕಷ್ಟಗಳ ಪರಿಹಾರಕ್ಕೆ ಎಚ್ಚರದಿಂದ ಕೈಕೊಳ್ಳಬೇಕಾದ ಕಾರ್ಯಗಳನ್ನು ಕುರಿತು ಸಮಾಲೋಚನೆ ಮಾಡಿದೆ. ನಮ್ಮ ಕೋಸಲರಾಜ್ಯದ ಕ್ಷಾಮ ಪೀಡಿತ ಪ್ರದೇಶಗಳಿಗೆ ತಕ್ಷಣ ಅಧಿಕಾರಿಗಳನ್ನೂ ಕಳುಹಿಸಿಕೊಟ್ಟು ಆಹಾರವನ್ನೊದಗಿಸುವ ಏರ್ಪಾಡು ಮಾಡಲು ಹೇಳಿದೆ. ಕಳ್ಳಕಾಕರು ಮತ್ತು ಕುಡುಕರು ರಾಜಧಾನಿಯಲ್ಲಿ ಹಾಗೂ ಬೇರೆಡೆಗೆ ನಡೆಸಿದ ಹಾವಳಿಯನ್ನು ತಡೆಗಟ್ಟಲು ರಕ್ಷಕದಳಗಳನ್ನು ಏರ್ಪಡಿಸಲು ಆಜ್ಞೆ ಮಾಡಿದೆ. ಗಡಿನಾಡಿನಲ್ಲಿ ಕಾವಲು ಪಡೆಗಳನ್ನು ಇರಿಸಿ ತುರುಗಳ್ಳರು ಹಾಗೂ ಹೊರನಾಡಿಗರು ಕಾಲಿಡದಂತೆ ಎಚ್ಚರ ವಹಿಸಲು ವಿಧಿಸಿದೆ."

"ಇದು ಸರಿಯಾದ ಕ್ರಮ ಪ್ರಭುಗಳೇ. ತಮ್ಮ ಆಜ್ಞೆಯಂತೆ ಎಲ್ಲ ಬೇಗ ನಡೆಯಬೇಕು ಮಾತ್ರ." ಧಾರಿಣಿ ಅಂದಳು.

"ನಡೆದೇ ನಡೆಯುತ್ತದೆ. ಪ್ರಭುಗಳ ಆಜ್ಞೆಯೆಂದರೇನು ಸಾಮಾನ್ಯವೆ?" ಕಾಮಿನಿ ಅಗ್ನಿವರ್ಣನ ಎದೆಯುಬ್ಬುವಂತೆ ಆಡಿ, ತನ್ನ ಬೊಗಸೆ ಕಣ್ಣುಗಳಲ್ಲಿ ಅವನನ್ನು ಸೆರೆ ಹಿಡಿದು ಕಟ್ಟಿಹಾಕುವಂತೆ ನೋಡಿ ನಕ್ಕಳು.

"ನೋಡು ಧಾರಿಣಿ. ನನ್ನ ಬಗ್ಗೆ ಇವಳಿಗೆ ಎಷ್ಟು ನೆಚ್ಚಿಕೆಯಿದೆ! ನೀನೋ ಯಾವಾಗಲೂ ಅರೆಭರವಸೆಯುಳ್ಳವಳು." ಅಗ್ನಿವರ್ಣನು ಮುಗುಳ್ನಗೆಯಿಂದ ಆಡಿದ ಮಾತಿಗೆ ಧಾರಿಣಿ ನೊಂದುಕೊಂಡರೂ ತೋರಗೊಡದೆ "ಅವಳಿಗಾದರೂ ಇದೆಯಲ್ಲ!" ಎಂದು ಕಡೆಗಣ್ಣನೋಟದಿಂದ ನೋಡಿದಳು.

ಇನ್ನು ಈ ವಿಷಯವನ್ನು ಬದಲಿಸಿ ಬೇರೊಂದು ನಲಿವು-ನಾಡಿಗೆ ಅವರೊಂದಿಗೆ ತೆರಳಬೇಕೆಂದು ಅತ್ತಿತ್ತ, ನೋಡುತ್ತ "ಯಾರಲ್ಲಿ?" ಎಂದನು. ದಾಸಿಯೊಬ್ಬಳು ಬಂದು ಬಾಗಿ ಕೈ ಮುಗಿದು ನಿಲ್ಲಲು, "ನನ್ನ ವಿಪಂಚಿ ವೀಣೆಯನ್ನು ತಗೊಂಡು ಬಾ" ಎಂದನು. ಅವಳು ಅದನ್ನು ತಂದು ಗವಸಣಿಗೆಯನ್ನು ತೆಗೆದು ಮುಂದಿರಿಸಿ ಹೋದಳು. ಅವನು ಅದನ್ನು ಎತ್ತಿ ತನ್ನ ತೆಕ್ಕೆಯಲ್ಲಿ ತೆಗೆದುಕೊಂಡು ಅದರ ಕಿವಿಗಳನ್ನು ತಿರುವುತ್ತ, ವಿಶಿಷ್ಟವಾದ ಅದರ ಏಳು ತಂತಿಗಳನ್ನು ನೇವರಿಸುತ್ತ ಶ್ರುತಿಯನ್ನು ಸರಿಪಡಿಸಿಕೊಂಡನು. ಇಬ್ಬರೂ ರಾಣಿಯರನ್ನು ನೋಡುತ್ತ "ನಿಮ್ಮನ್ನು ನಾದಸಾಮ್ರಾಜ್ಯಕ್ಕೆ ಕರೆದುಕೊಂಡು ಹೋಗುತ್ತೇನೆ. ನಮ್ಮ ರಾಜ್ಯದ ವಿಷಯವನ್ನು ಮರೆತುಬಿಡಿ, ಸ್ವಲ್ಪ ಹೊತ್ತು" ಎಂದು ತಾನು ನುಡಿಸುವ ಸ್ವರ ಸಂಚಯದ ಝಳಕು ತೋರುವಂತೆ ಬಲಗೈಯ ಕೋಣದಿಂದ ತಂತಿ ಮೀಟುತ್ತ ಎಡಗೈ ಬೆರಳುಗಳನ್ನು ಮಿಂಚು ವೇಗದಿಂದ ಆಯಾ ಸ್ವರ ಸ್ಥಾನಗಳಲ್ಲಿ ಆಡಿಸುತ್ತ ಒಂದು ಝೇಂಕಾರ ಮಾಡಿದನು. ಕೂಡಲೆ ಅದರ ಅಲೆಗಳು ಎಲ್ಲೆಡೆಗೆ ಹರಡಿ ಮನೆ ತುಂಬಿ ಮನ ತುಂಬಿ ಆವರಣವನ್ನು ಪ್ರಸನ್ನಗೊಳಿಸಿದವು. ಧಾರಿಣಿ – ಕಾಮಿನಿಯರಿಬ್ಬರೂ ಈ ನಾದಸಾಮ್ರಾಜ್ಯದ ನಿಡು ಪಯಣಕ್ಕೆ ಅಣಿಯಾದವರಂತೆ ಕಣ್ಣರಳಿಸಿ ಯಾವ ಕಲ್ಪನೆಯ ವಿಮಾನದಲ್ಲಿ ದೊರೆ ತಮ್ಮನ್ನು ಕರೆದುಕೊಂಡು ಹೋಗುವನೋ ನೋಡೋಣ ಎನ್ನುವಂತೆ ಮೇಲ್ನೋಡಿ ಅವನನ್ನೂ ಆ ವೀಣೆಯನ್ನೂ ತವಕದಿಂದ ವೀಕ್ಷಿಸಿದರು.

"ಪಯಣಕ್ಕೆ ಅಣಿಯಾದಿರಿ ತಾನೆ? ಆದರೆ ಹುರಿಗೊಳಿಸುವ ಪೇಯ ಬೇಡವೇ?" ಎಂದು ನಗೆಯಾಡಲು ಧಾರಿಣಿ, ಹತ್ತಿರ ಇದ್ದ ಪಾತ್ರೆ-

ಯಿಂದ ಮೈರೇಯ ತುಂಬಿದ ಪೇಲೆಯನ್ನು ಅವನಿಗೆ ನೀಡಿದಳು. ಅದನ್ನು ಕುಡಿದಾದ ಮೇಲೆ ಕಾಮಿನಿ ತಾಂಬೂಲವನ್ನು ತಾನೇ, ಅವನ ಬಾಯಲ್ಲಿ ನಯವಾಗಿ ಇರಿಸಿದಳು. ಅವನು ಮುಂದಿನ ಕಾಲದಲ್ಲಿ 'ಮೋಹನ'ವೆಂಬ ಸಾರ್ಥಕ ಹೆಸರನ್ನು ಪಡೆದ ರಾಗದ ಆಲಾಪನೆಯನ್ನು ನಿಧಾನವಾಗಿ ಆರಂಭಿಸಿ ಆಗಾಗ ಕಂಪನಗಳಿಂದ ಸೂಕ್ಷ್ಮ ಲಹರಿಗಳು ಕಿರಿ ಕಿರಿದಾಗಿ ಕೇಳುವ ವರೆಗೆ ಪಯಣದಲ್ಲಿ ತಂಗುವಂತೆ ತೂಗಿ ಮುಂದುವರಿಯುತ್ತಿದ್ದನು. ಕೇವಲ ಐದು ಸ್ವರಗಳು–ಸರಿಗಪಧಸ! ಆದರೆ ವೀಣೆಯ ತಂತಿಯ ಮೇಲೆ ಏನು ಅವುಗಳ ತರತರಹದ ಭಂಗಿಯ ಲಾಸ್ಯ! ಅದೆಂಥ ಮೈಜುಮ್ಮೆನಿಸಿ ನವಿರೇಳುವ ಅಹ್ಲಾದ! ಒಮ್ಮೊಮ್ಮೆ ಒಂದೇ ಸ್ಥಾನದ ಮೇಲೆ ಎಡಗೈಯ ಬೆರಳಿರಿಸಿ ತಂತಿಯನ್ನು ಹಿಂದೆ ಮುಂದೆ ಎಳೆಯುತ್ತ ಎರಡು ಮೂರು ಸ್ವರಗಳನ್ನು ಕಂಪನದ ಅಲೆಗಳೊಂದಿಗೆ ಕೇಳಿಸುವ ಬಗ್ಗೆ ಹುಚ್ಚು ಹಿಡಿಸುವಂಥದಾಗಿತ್ತು. ಹೀಗೆ ಅವನು ಸರಿಗ, ಗಪಧ, ಪಧಸ ಈ ಸ್ವರಗಳ ಮುಪ್ಪುರಿಯನ್ನೂ ಬೇರೆ ಬೇರೆ ಜೋಡಣೆಗಳನ್ನೂ, ಸರಿಗಪಧಸ ಈ ಎಲ್ಲದರ ಮಿಂಚು ನೋಟವನ್ನೂ ತಿರು ತಿರುಗಿ ತೋರಿದರೂ ಬೇಕು ಬೇಕೆನಿಸುತ್ತಿತ್ತು. ಇಲ್ಲಿ ಪುನರುಕ್ತಿ ದೋಷವಾಗುತ್ತಿರಲಿಲ್ಲ. ಇಬ್ಬರೂ ರಾಣಿಯರು ವೀಣಾವಾದನವನ್ನು ಕೇಳುತ್ತ ತಲೆದೂಗುತ್ತ ನಿಜವಾಗಿ ನಾದ ಸಾಮ್ರಾಜ್ಯದಲ್ಲಿ ಪ್ರವೇಶಿಸಿ ಹೊರಬರಲು ಒಲ್ಲದವರಂತೆ ಕಾಲಪ್ರಜ್ಞೆಯನ್ನು ಕಳಚಿಕೊಂಡು ಕೂತಿದ್ದರು. ಇಂಥ ಪ್ರತಿಭಾವಂತನಾದ ದೊರೆಯ ಪತ್ನಿಯರಾದುದು ಅವರಿಗೆ ತಮ್ಮ ಪುಣ್ಯ ವಿಶೇಷವೆನಿಸಿತು. ಏನಿದ್ದರೇನು, ಇಲ್ಲದಿದ್ದರೇನು, ಊಟ, ನಿದ್ದೆ ಯಾವುದರ ಪರದೆಯಿಲ್ಲದೆ, ದೇಶ ಕೋಶ ಯಾವುದರ ಚಿಂತೆಯಿರದೆ ಈ ಸೌಖ್ಯ ಸಾಗರದಲ್ಲಿ ಮುಳಗಿರಬೇಕೆಂದು ಅವರಿಗೆ ತೋರಿತು. ದೊರೆಯು ವಾದನದ ಭರದಲ್ಲಿ ಒಂದು ತಂಗುದಾಣಕ್ಕೆ ಬಂದು ನಿಂತಾಗ, "ರಾತ್ರಿಯ ಭೋಜನದ ಸಮಯವಾಯಿತು" ಎಂದು ಧಾರಿಣಿ ನುಡಿದಳು. ಅಗ್ನಿವರ್ಣನು ವಣೆಯನ್ನು ಮಡಿಕೆಗಳಿಂದ ತೊಡಿಸಿ "ನೀನು ಬೇಕಾದರೆ ಹೋಗು" ಎನ್ನುವಂತೆ ಸನ್ನೆ ಮಾಡುತ್ತ ನೋಡಿದನು. ಕಾಮಿನಿ ಅದಕ್ಕೆ ತನ್ನ ಒಪ್ಪಿಗೆಯನ್ನು ಸೂಚಿಸುವಂತೆ ತನ್ನ ಹುಬ್ಬಿನ ಬಿಲ್ಲನ್ನು ಏರಿಸಿದಳು. ಅದೇಕೋ ಈ ಅಭಿನಯವು ಹಟವಾಗಿ ನಿಲ್ಲಲಿಲ್ಲ. ಎಲ್ಲರಿಗೂ ಆನಂದದಲ್ಲಿಯೂ ಉಪವಾಸವಾಗಿರಬೇಕು. ಹಸಿವು ಕರೆಯುತ್ತಿರಬೇಕು ಊಟಕ್ಕೆ ಎದ್ದರು. ವಿಪಂಚಿ ವೀಣೆ ತನ್ನ ದಣಿವಾರಿಸಿಕೊಳ್ಳಲು ಗವಸಣಿಗೆಯನ್ನು ಹೊದ್ದುಕೊಂಡು ವಾದ್ಯಮಂದಿರಕ್ಕೆ ಹೋಗಿ ಒರಗಿತು.

ಅರಮನೆಯ ಭೋಜನವೆಂದರೆ ಕೇಳಬೇಕೆ? ಬೆಳ್ಳಿಯ ತಟ್ಟೆಗಳಲ್ಲಿ ಭಕ್ಷ್ಯ–ಭೋಜ್ಯ, ಚೋಷ್ಯ, ಲೇಹ್ಯ ಹೀಗೆ ಹಲವಾರು ರುಚಿಯ ಪದಾರ್ಥಗಳನ್ನು ಬಡಿಸಲಾಗಿತ್ತು. ಪೇಯವಾದ ಹಾಲಿನ ಖೀರನ್ನು ಬಂಗಾರದ ಬಟ್ಟಲುಗಳಲ್ಲಿ ಇರಿಸಿತ್ತು. ಸೊಗಸಾದ ಅಕ್ಕಿಯ ಅನ್ನ, ಪಾಯಸ ಇವಗಳಿಗೆ ಆಹಾರದಲ್ಲಿ ಪ್ರಾಮುಖ್ಯವಿತ್ತು. ಪಾಯಸವಂತೂ ಪ್ರಜಾಕರ ಅಂದರೆ ಸಂತಾನವನ್ನು ಕೊಡುವಂತಹದೆಂದು ರಾಜರಾಣಿಯರು ಮೆಚ್ಚಿಕೊಂಡು ಸವಿದರು. ಮಾಂಸ–ಮದ್ಯಗಳು ಒಡಲನ್ನು ಸೇರಿದವು. ತರುವಾಯ ದಾಳಿಂಬ, ಹಲಸು, ನೇರಿಳೆ, ಬಾಳೆ ಮುಂತಾದ ಹಣ್ಣುಗಳನ್ನು ತಿಂದರು. ಷೋಡಶ ತಾಂಬೂಲ ಸೇವನೆಯೂ ಆಯಿತು. ರಾತ್ರಿ ಏರುತ್ತಲಿತ್ತು. ಇಬ್ಬರೂ ರಾಣಿಯರೊಂದಿಗೆ ಭೂರಿಭೋಜನದಿಂದ ಹೊರೆಯಾದ ಮೈಯನ್ನು ಹೊತ್ತುಕೊಂಡು ರಾಜನು ಮೆಲ್ಲಮೆಲ್ಲನೆ ರಾಣಿವಾಸಕ್ಕೆ ಹೊರಟನು. ಸಜ್ಜೆಮನೆಯನ್ನು ಸಜ್ಜುಗೊಳಿಸಿ ದಾಸ ದಾಸಿಯರು ಹಿಂದಕ್ಕೆ ಸರಿದರು.

ಅಗ್ನಿವರ್ಣನು ಧಾರಿಣಿಯ ಶಯ್ಯಾಮಂದಿರವನ್ನು ಸೇರುತ್ತಿರಲು ಕಾಮಿನಿ ಅರ್ಥ ಮಾಡಿಕೊಂಡಳು. ಅವನನ್ನು ಓರೆಗಣ್ಣಿನಿಂದ ನೋಡುತ್ತ ನಿರ್ವಿಕಾರವಾಗಿ ತನ್ನ ಮಂದಿರದತ್ತ ನಡೆದಳು. ಧಾರಿಣಿಗೆ ಎಂದಿಲ್ಲದ ಹಿಗ್ಗು ತಲೆದೋರಿತು. ಆದರೆ ಒಳಗೆ ಒಂದು ಕಾಲಿಟ್ಟ ದೊರೆ ಮತ್ತೆ ಹೊರ ಬಂದು "ಕಾಮಿನಿ" ಎಂದು ಕೂಗಿದನು.

"ಏನಪ್ಪಣೆ?" ಎಂದವಳು ನಿಂತಲ್ಲಿಯೇ

ವೈಯ್ಯಾರದಿಂದ ಹೊರಳಿ ಕೇಳಿದಳು.

"ಏನಿಲ್ಲ ಚೆನ್ನಾಗಿ ನಿದ್ದೆ ಮಾಡು ಎಂದು."

"ಸರಿ ನಿದ್ದೆ ಬಂದರೆ ತಾನೆ? ವೀಣೆಯ ನಾದ ತರಂಗಗಳ ನೆನಪುಗಳು ಬೆಂಬತ್ತಿವೆ."

"ಹೀಗೋ? ಎಚ್ಚರದಿಂದ ಇರು! ವೈಣಿಕನು ಆ ನೆನಪುಗಳನ್ನು ಇನಿದಾಗಿಸಲು ಬೇಗ ಬಂದು ಬಿಡಬಹುದು!"

"ಬೇಡ ಬೇಡ" ಎನ್ನುತ್ತ ಅವಳು ಹೊರಟೇ ಬಿಟ್ಟಳು. ಈ ಸರಸ ಸಲ್ಲಾಪದಿಂದ ಧಾರಿಣಿ ತ್ರಸ್ತಳಾದರೂ ತನ್ನಲ್ಲಿಗೆ ರಾಯ ಬಂದು ಈ ಇರುಳನ್ನು ಕಳೆಯುವನಲ್ಲ. ಕಾಮಿನಿ ಕೂಡ ಅವನಿಗೆ ತನ್ನಲ್ಲಿ ಬರಬೇಡವೆಂದು ಹೇಳಿದವಳಲ್ಲ ಎಂಬ ಸಂತಸದ ಸೆರಗನ್ನು ಹಿಡಿದುಕೊಂಡು ಅವನೊಡನೆ ಹೊಕ್ಕು ಬಾಗಿಲನ್ನು ಭದ್ರಪಡಿಸಿ ಕೊಂಡಳು. ಸುಗಂಧಮಯವಾದ ಅವಳ ಮಂದಿರದಲ್ಲಿ ಮಂಚದ ಮೇಲೆ ತೂಗಾಡುವ ತೊಡಂಬೆಗಳನ್ನು ನೋಡುತ್ತ ಮೆತ್ತನ್ನ ಹಾಸಿಗೆಯ ಮೇಲೆ ಒರಗಿದನು. ಅವನ ಪತ್ತಿರ

ಧಾರಿಣಿ ಮಲಗಿಕೊಂಡಳು.

"ಈ ದಿನವನ್ನು ನಾವು ತುಂಬ ಸಂತೋಷದಿಂದ ಕಳೆದೆವಲ್ಲವೆ ಸ್ವಾಮಿ?"

"ಹೌದು ಹೌದು, ಈವೊತ್ತು ನನಗೆ ಹೊಸ ಒಂದು ಸಮತೂಕ, ಒಂದು ಸವಿ ಸುಖ ಕಂಡಂತಾಗಿದೆ"

"ನಿಜ ಒಡೆಯ. ನಾನದನ್ನು ಅರಿತು ಆನಂದ ಪಡುತ್ತಿದ್ದೇನೆ."

"ಇದಕ್ಕೆಲ್ಲ ಕಾರಣ ಯಾರು ಗೊತ್ತೆ?"

"ಇಲ್ಲ."

ಬಳಿಸಾರಿ ಅವಳ ತುಟಿಯ ಮೇಲೆ ಮೆದುವಾದ ಮುತ್ತಿನ ಅಚ್ಚೊತ್ತುತ್ತ "ನೀನು" ಎಂದನು.

"ಸಲ್ಲದ ಸ್ತುತಿ ನಿಮ್ಮದೊಂದು, ನಿಜ ಹೇಳಲೆ? ಇದಕ್ಕೆಲ್ಲ ಕಾರಣ ನಿಮ್ಮ ತಾಯಿ."

"ಅದನ್ನೊಪ್ಪುವೆ. ಅವಳು ನನಗೆ ಜನ್ಮ ಕೊಟ್ಟವಳು, ಪುನರ್ಜನ್ಮ ಕೊಟ್ಟವಳು. ಅವಳ ಹತ್ತಿರ ಹೋಗಿ ನೀನು ತೋಡಿಕೊಂಡಿರದಿದ್ದರೆ ಅವಳಿಗೇನು ತಿಳಿಯುತ್ತಿತ್ತು? ನಿನ್ನಿಂದ ಅವಳಿಂದ ನನ್ನ ಕರ್ತವ್ಯದೇವತೆ ಜಾಗೃತವಾದಳು."

"ಇದನ್ನು ಕೇಳಿ ನನ್ನ ಸಂತೋಷಕ್ಕೆ ಪಾರವೇ ಇಲ್ಲ, ಇನಿಯ. ಆದರೆ ನನ್ನ ಅಹಂಕಾರವನ್ನು ಎಬ್ಬಿಸಬೇಡಿ. ನಿಮ್ಮ ಚರಣದಾಸಿಯಾಗಿ, ನಿಮ್ಮ ಪ್ರೇಮದ ಪುತ್ಥಳಿಯಾಗಿ ನಿಮ್ಮ ವಂಶವೃದ್ಧಿಗೆ ಕಾರಣಳಾಗಿ ಬಾಳಬೇಕೆಂದು ಮಾತ್ರ ನನ್ನ ಹಿರಿಯಾಸೆ."

ತನ್ನಲ್ಲಿ ತನ್ನದೆಲ್ಲವನ್ನು ಮುಡುಪಾಗಿಸಿದ ಹಿರಿಯರಸಿಯ ಬಗ್ಗೆ ಅರಸನು ಹೆಮ್ಮೆ ಪಡುತ್ತಿರಲು ಕೊನೆಯ ಮಾತು ಜೀವವನ್ನು ಕುಟುಕುವಂತಾಯಿತು. ಅದು ಹಿಂದಿನ ಹಲವಾರು ವಿರಸ ಪ್ರಸಂಗಗಳ ನೆನಪಿನ ಕದ ತೆರೆದು ಒಂದುತನದ ಅನುಭವ ಮಂದಿರದಲ್ಲಿ ಬಿರುಗಾಳಿಯನ್ನು ಎಬ್ಬಿಸಿ ಹಾವಳಿ ಮಾಡಬಹುದಿತ್ತು. ಆದರೆ ಅಗ್ನಿವರ್ಣನು ನೆಲದೊಡಲಲ್ಲಿ ಹುದುಗಿರುವ ಜ್ವಾಲಾಮುಖಿಯಂತೆ ಪ್ರಯತ್ನಪೂರ್ವಕವಾಗಿ ಅದನ್ನು ಬಚ್ಚಿಟ್ಟುಕೊಂಡು ಒಣ ಹಾರೈಕೆಯ ಒಂದು ಮಾತು ಆಡಿದನು.

"ನನ್ನ ಹಿರಿಯಾಸೆ ಬರಿಯಾಸೆ ಆಗದಿರಲಿ."

"ಅದೇಕೆ ಹಾಗೆ ಆಗುವುದು ಅತ್ತೆಯವರ ಆಶೀರ್ವಾದ ಇರುವಾಗ?"

"ಆಶೀರ್ವಾದವೇನೋ ಇದೆ. ಆದರೆ ಅದರಿಂದ ಆಕಾಶ ಕೆಳಗಿಳಿಯಲಾರದು."

"ನಂಬಿಕೆಯಿದ್ದರೆ ಆಕಾಶ ಏಕೆ, ಆಕಾಶದ ಮೇಲಿನ ಸ್ವರ್ಗದಿಂದ ದೇವತೆಗಳೂ ಇಳಿದು ಬಂದಾರು."

"ಇದೆಲ್ಲಾ ರಮ್ಯ ಕಲ್ಪನೆಯಷ್ಟೆ. ನನಗೆ ಈ ಭೂಮಿಯೊಂದೇ ಸತ್ಯ. ಭೂಮಿಯ ಮೇಲೆ ದೊರೆಯುವ ಸಂಪೂರ್ಣ ಸುಖ ಪಡೆಯುತ್ತ ಬದುಕಿದರೆ ಸಾಕು!"

"ಹೋಗಲಿ ಬಿಡಿ. ನನಗೇನು ಹೆಚ್ಚು ತಿಳಿಯುತ್ತದೆ? ಅಲ್ಲ ಅತ್ತೆಯವರು ಮತ್ತೇನು ಹೇಳಿದರು?"

"ತುಂಬ ಹೇಳಿದಳು. ನಮ್ಮ ತಂದೆ ಸುದರ್ಶನನ ಆದರ್ಶ ಜೀವನ ಚಿತ್ರವನ್ನು ಬಿಡಿಸಿ ಹೇಳಿದಳು. ನಮ್ಮ ವಂಶಜರ ಪೂರ್ವಿಕರಲ್ಲಿ ಒಬ್ಬನಾದ ದಿಲೀಪರಾಜನ ಉಜ್ವಲ ಕಥೆ. ಅವನಿಗೆ ಮಕ್ಕಳಾಗದಿರುವಾಗ ಗುರುಗಳ ಆದೇಶದಂತೆ ಅವನೂ ಅವನ ಹೆಂಡತಿಯೂ ನಂದಿನಿ ಎಂಬ ಕಾಮಧೇನುವಿನ ಸೇವೆ ಮಾಡಿ ಸಂತಾನ ಪಡೆದರಂತೆ."

"ಹೌದು ನಾನು ಇದನ್ನು ಕೇಳಿದ್ದೇನೆ. ನಾವು ಹಾಗೆ...ಅಂಥ ಗೋಮಾತೆಯ ಸೇವೆ ಮಾಡಿ...'

"ಧಾರಿಣಿ ಈ ಹುಚ್ಚನ್ನು ತಲೆಯೊಳಗೆ ಹಾಕಿಕೊಳ್ಳಬೇಡ. ಆಕಳ ಸೇವೆಯಿಂದ ಮಕ್ಕಳಾಗುವವೆ? ಇದು ಗೊಡ್ಡು ನಂಬಿಕೆ. ನನಗೆ ಕಾಮವೇ ಧೇನು, ಬೇರೆ ಕಾಮಧೇನು ಬೇಡ, ಅದರಿಂದ ಸಂತಾನವನ್ನು ಬಯಸುವುದು ಬೇಡ. ಸಂತಾನವು ಬೇಕೆಂದು ಯಾಕೆ ಸುಮ್ಮನೆ ಕೊರಗುತ್ತಿರುವಿ?"

"ಹಾಗಲ್ಲ ಇನಿಯ, ಸಾವಿರಾರು ವರ್ಷದಿಂದ ನಡೆದು ಬಂದ ಈ ಸೂರ್ಯವಂಶವು ಮುಂದುವರಿಯಬೇಡವೇ?"

"ಮತ್ತೆ ಮತ್ತೆ ಅದೇ ಮಾತು! ಸೂರ್ಯವಂಶವೂ ಅದಕ್ಕೆ ಮೂಲನಾದ ಸೂರ್ಯನೂ ಮುಳುಗಿ ಹೋಗಲಿ; ನನಗೆ ಯೋಚನೆಯಿಲ್ಲ." ಹೀಗೆ ಅವನು ತೂಕ ತಪ್ಪಿದ ನುಡಿಗಳನ್ನು ಅಗ್ನಿ-ಯಸ್ತ್ರದಂತೆ ಎಸೆಯುತ್ತಿರಲು ಧಾರಿಣಿ ಕಕ್ಕಾಬಿಕ್ಕಿಯಾಗಿ ತಾನೂ ಎದ್ದು ಕುಳಿತು ಅವನ ತೊಡೆಯ

ಮೇಲೆ ತಲೆಯಿಟ್ಟು ಬಿಕ್ಕುತ್ತ,

"ನನ್ನ ತಪ್ಪಾಯಿತು ಮನ್ನಿಸಿ ಬಿಡಿ" ಎಂದು ಮೊರೆಯಿಟ್ಟಳು.

ಅಗ್ನಿವರ್ಣನು ಹಾಸಿಗೆಯಿಂದ ಕೆಳಗಿಳಿದನು. ಧಾರಿಣಿಯೂ ಕೆಳಗಿಳಿದಳು.

"ಬನ್ನಿ ಒಡೆಯ, ಅದನ್ನೆಲ್ಲ ಮರೆತು ನಾವು ಮೈಗೆ ಮೈ ಹಚ್ಚಿ ಬೆರೆತು ಏಕಜೀವವಾಗೋಣ" ಎಂದು ಅಲ್ಪರಿದಳು.

"ಏಕಜೀವ? ನಾವಿಬ್ಬರೂ ಏಕ ಜೀವವಾಗುವುದು ಸಾಧ್ಯವೇ ಇಲ್ಲ. ನಿನಗೆ ಸೊಗವೆಂದರೇನು ಗೊತ್ತಿಲ್ಲ. ಬದುಕಿನ ಕಡಲಲ್ಲಿ ಮುಳುಗಿ ಸರ್ವಸುಖದ ಮುತ್ತು ರತ್ನಗಳನ್ನು ತಂದು ತೊಡವಾಗಿಸಿಕೊಳ್ಳುವುದೇ ನಿನಗೆ ಬೇಕಿಲ್ಲ. ನಿನಗೆ ಕೇವಲ ಸಂತಾನ ಬೇಕು. ಅಂತೇ ನಾನು ಬೇಕು. ಆ ಸಂತಾನವು ಸಿಗಲಾರದು...ನಾನು ಸಿಗಲಾರೆ." ಎನ್ನುತ್ತ ಅವನು ಅವಳ ಸೆಜ್ಜೆ ಮನೆಯಿಂದ ಹೊರಟು ಹೋದನು.

ಅವಳು ದೊಪ್ಪನೆ ನೆಲಕ್ಕೆ ಬಿದ್ದು ಅಳುವಿನ ಆಳದಲ್ಲಿ ಮುಳುಗಿದಳು.

ಅಗ್ನಿವರ್ಣನು ನೇರವಾಗಿ ಕಾಮಿನಿಯ ಮಂದಿರಕ್ಕೆ ಹೋಗಿ ಬಾಗಿಲು ತಟ್ಟಿದನು. ನಿದ್ದೆಗಣ್ಣಿನಲ್ಲಿಯೇ ಅವಳು ಎದ್ದು ಬಂದು ಬಾಗಿಲು ತೆರೆದು ಅವನನ್ನು ನೋಡಿ, ತನ್ನ ನಿರೀಕ್ಷೆ ಸರಿಯಾಯಿತು ಎಂದುಕೊಂಡರೂ ಮೇಲೆ ಮೇಲೆ ಆಶ್ಚರ್ಯಚಕಿತಳಾಗಿ, "ಇದೇನು ನಡುರಾತ್ರಿಯಲ್ಲಿ ಬಂದಿರಿ?" ಎಂಬ ಅವಳ ಕೇಳಿಕೆಗೆ ಅವನು ಮಾರುಗೊಡದೆ ಒಳಗೆ ಬಂದು ಒಂದು ಆರಾಮಾಸನದಲ್ಲಿ ಕುಳಿತುಕೊಂಡನು.

"ಮಹಾರಾಣಿಯರು ನಿದ್ದೆ ಹೋದರೆಂದು ಬಂದಿರೇನೋ!" ಕಾಮಿನಿ ಕೇಳಿದಳು.

"ಹೌದು. ಇಲ್ಲ. ಅವಳ ನಿದ್ದೆಯೂ ಹೋಯಿತು, ನನ್ನದು ಹೋಯಿತೆಂದು ಬಂದೆ."

ಏನೋ ಮನಸ್ಸು ಕಲಕುವ ಸಂಗತಿ ನಡೆದಿರಬೇಕೆಂದು ಅವಳು ಊಹಿಸಿದಳು. 'ಅದೇನು' ಎಂದು ಕೇಳಿದರ ಎಲ್ಲಿ ಬೇಗುದಿ ಹೊರಬರುವುದೋ ಎಂದಳುಕಿ ಅವಳು ಹತ್ತಿರದ ಪಾತ್ರೆಯಿಂದ ಸೊಗಸಾದ ಮದಿರೆಯನ್ನು ಬಟ್ಟಲಲ್ಲಿ ಮೊಗೆದು ಕುಡಿಯಲು ಕೊಟ್ಟಳು, ತಾನೂ ತೆಗೆದುಕೊಂಡಳು.

"ಕಾಮಿನಿ, ನಾನು ಹಾಗೆ ರಂಪ ಮಾಡಿ ಬರಬಾರದಾಗಿತ್ತು, ಅಲ್ಲವೆ?"

"ಹೌದು ಸ್ವಾಮಿ, ಮಹಾರಾಣಿ ಎಷ್ಟೊಂದು ನೊಂದುಕೊಂಡಿರಬಹುದು! ಅವೇನು ಕಾರಣವಾಯಿತೋ ಏನೋ?'

ಆಗ ದೊರೆ ನಡೆದ ಸಂಗತಿಯನ್ನು ಸ್ವಲ್ಪದರಲ್ಲಿ ವಿವರಿಸಿದನು. ಕಾಮಿನಿಗೆ ಮನಸ್ಸಿನ ಒಂದು ಪದರದಲ್ಲಿ ನಿಜವಾದ ಕಳವಳವಾಯಿತು. ಇನ್ನೊಂದು ತನ್ನ ಜಿನುಗಾದ ಜಟಿಲವಾದ ಬಲೆಯನ್ನು ಹೆಣೆಯಲು ತೊಡಗಿತು.

"ಈಗೇನು ಮಾಡಲಿ?" ಅವನು ಮುಗುದನಂತೆ ಅವಳಿಗೂ ಕೇಳಿಸುವಂತೆ ತನ್ನನ್ನು ಕೇಳಿಕೊಂಡನು.

ಸ್ವಲ್ಪವೂ ತಡೆಯಿಲ್ಲದೆ ಕಾಮಿನಿ ಆಡಿದಳು; "ಅವರ ಹತ್ತಿರ ಹೋಗಿ ಸಂತವಿಸಿ ಬನ್ನಿ. ಅಲ್ಲ, ಅವರ ಬಳಿಯೇ ಇದ್ದುಬಿಡಿ. ಅವರು ಹೇಳಿದ್ದೆಲ್ಲ ನಿಮ್ಮ ಒಳತಿಗಾಗಿ, ನಿಮ್ಮ ಹೆಸರಾದ ಮನೆತನದ ಒಳತಿಗಾಗಿ."

"ಅದು ನಿಜ ಕಾಮಿನಿ. ನಿನಗೆ ಹೇಗೆ ತಿಳಿಸಿ ಹೇಳಲಿ?... ಈ ಇರುವಿಕೆ ನೀಡುವ ಸ್ಪಂದನ ರೋಮಾಂಚನ, ಇದು ಯಾವುದೂ ಅವಳ ಬಳಿ ನನಗೆ ದೊರೆಯುವುದಿಲ್ಲ... ಅವಳಿಗೆ ನಾನು ಬೇಕು, ಅಲ್ಲ... ನನ್ನಿಂದ ದೊರೆಯುವ ಸಂತಾನ ಬೇಕು."

"ಅದರಲ್ಲೇನು ತಪ್ಪಿದೆ ಸ್ವಾಮಿ? ಸಂತಾನದ ಅದಮ್ಯವಾದ ಅವರ ಆಸೆಯಲ್ಲಿಯೇ ನೀವು ಬಯಸುವ ಸಕಲ ಸುಖದ ಸ್ವರ್ಗವಿಲ್ಲವೆ?"

"ಇಲ್ಲ ಕಾಮಿನಿ ಇಲ್ಲ. ಆ ಸ್ವರ್ಗ ಇದೆ ಇಲ್ಲಿ ನಿನ್ನಲ್ಲಿ!"

"ಹಾಗನ್ನಬೇಡಿ ಒಡೆಯ. ಧಾರಿಣಿದೇವಿ ಪಟ್ಟಮಹಿಷಿಯಾದ ಮಹಾರಾಣಿ ಅವರು. ನಿಮ್ಮ ಮತ್ತು ಈ ಮಹಾವಂಶದ ಏಳಿಗೆಗಾಗಿ ತಮ್ಮ ಸರ್ವಸ್ವವನ್ನು ಧಾರೆಯೆರೆದಿದ್ದಾರೆ."

"ಹೌದು, ಅದೇ ನನ್ನ ಸಮಸ್ಯೆ. ಅವಳ ಸರ್ವಸ್ವ ಬೇರೆ. ನನ್ನ ಸರ್ವಸ್ವ ಬೇರೆ."

"ಹಾಗಾದರೆ ನನ್ನ ಸರ್ವಸ್ವ?"

"ನನ್ನದೂ ನಿನ್ನದೂ ಒಂದೇ. ಶ್ರುತಿ ಗೂಡಿದ ಎರಡು ವಾದ್ಯಗಳು"

"ನೀವೇನೋ ತಪ್ಪು ಭಾವಿಸಿರುವಂತಿದೆ. ಶ್ರುತಿಹೊಂದಿದ ಮೂರು ವಾದ್ಯಗಳು ಇರ ಲಾರವೆ?"

"ಮೂರೇಕೆ, ನೂರು ಸಹ ಇರಬಹುದು. ಆದರೆ ಇಲ್ಲಿ ಎರಡೇ ಎರಡು."

ಸ್ವಲ್ಪ ತಡೆದು "ಮೂರನೆಯದು ನಿನಗೆ ಗೊತ್ತಿಲ್ಲ. ನಿನ್ನ ವಿಷಯ ಅಸೂಯೆ ಅಪಸ್ವರ ಗಳನ್ನು ನುಡಿಸುತ್ತಿದೆ!"

"ಎಲ್ಲ ಗೊತ್ತಿದೆ ಒಡೆಯ. ಕಿರಿಯ ರಾಣಿ ಯೆಂದು ನನ್ನ ಕೀಳೆಣಿಸುವ ಪ್ರಯತ್ನ ನಡೆ ದಿದೆ. ಅತ್ತೆಯವರೇನೋ ಪಾಪ ಎಲ್ಲರನ್ನೂ ಒಂದೇ ಸಮನಾಗಿ ನೋಡುತ್ತಾರೆ. ನಿಮಗೂ ಹಾಗೆಯೆ ನೋಡೆಂದು ಹೇಳುತ್ತಾರೆ. ಆದರೂ ಅವರ ಒಲವಿನ ಜೋಲಿ ಮಹಾರಾಣಿ ಧಾರಿ ಣಿಯ ಕಡೆಗೆ. ನನ್ನ ಮಾತನ್ನು ಕೇಳಿ ನೀವು ನನ್ನ ಹತ್ತಿರ ಇನ್ನು ಬರಬೇಡಿ. ಅದರಿಂದ ನಿಮಗೂ ನೆಮ್ಮದಿ, ನನಗೂ ನೆಮ್ಮದಿ." ಕೊರ ಳುಬ್ಬಿ ಬಂದು ಅಳು ದನಿಯಲ್ಲಿ ಹೇಳಿದಳು.

ದೊರೆ ಆಸನದಿಂದ ಎದ್ದು ಅವಳೊಂದಿಗೆ ಮಂಚದ ಮೇಲೊರಗಿ ಅವಳನ್ನು ತಬ್ಬಿಕೊಂಡು ಮುಖಕ್ಕೆ ಮುಖ ಹಚ್ಚಿ ಭಾವಾವೇಶದಿಂದ "ಅದು ಸಾಧ್ಯವಿಲ್ಲ ಕಾಮಿನಿ, ನಿನ್ನ ಬಿಟ್ಟು ನಾನು ಬದುಕುವಂತಿಲ್ಲ. ನೀನು ಬದುಕಿನ ಎಲ್ಲ ಸಾರ ನನಗೆ." ಎಂದು ಉದ್ಗಾರ ತೆಗೆದನು.

"ಹಾಗನ್ನಬೇಡಿ ಸ್ವಾಮಿ, ನನ್ನೊಡನೆ ಕಾಲ ಕಳೆಯುತ್ತ ನೀವು ಪಟ್ಟದರಸಿಯನ್ನು ಕಡೆಗಣಿ ಸುತ್ತಿರುವಿರಿ ಎಂದೂ ರಾಜ್ಯವನ್ನು ಆಳುವುದರ ಕಡೆಗೆ ಗಮನವನೇ ಇಲ್ಲವೆಂದು ಅದರಿಂದ ಪ್ರಜೆಗಳೆಲ್ಲ ಹತಾಶರಾಗಿ ದೊಂಬಿಯೇಳುವ ಸ್ಥಿತಿಯಲ್ಲಿರುವರೆಂದೂ ಆಡಿಕೊಳ್ಳುತ್ತಿರುವರಂತೆ. ನನ್ನ ಮಾತು ಕೇಳಿ ನೀವು ಬಯಸುವುದೆಲ್ಲವೂ ದೊರೆಯಲಿ, ದೊರೆಯದಿರಲಿ, ನೀವು ಮಹಾ ರಾಣಿಯವರೊಂದಿಗೆ ಹೆಚ್ಚುಕಾಲ ಕಳೆಯಿರಿ. ಹಿಂದೆ, ಇಂದು, ಮಾಡಿದಂತೆ ಇವರನ್ನು ತೊರೆದು ನನ್ನ ಬಳಿ ಬರಬೇಡ."

"ನಿನಗೋಸ್ಕರ ಮಾಡಿ ನೋಡುವೆ."

"ಹಾಗೆನ್ನಿ, ನಾನು ಅವರಿಗಿಂತ ಸ್ವಲ್ಪ ಚಿಕ್ಕವಳಾದರೂ ನನಗೆ ಇಲ್ಲಿಯ ಪರಿಸರ ಚೆನ್ನಾಗಿ ಗೊತ್ತಾಗಿದೆ. ಮೇಲೆ ಶಾಂತವಾದ ಕಡಲಿನಲ್ಲಿ ಕಾಣದಂತೆ ತಿಮಿಂಗಿಲಗಳು ಇರುವವೆಂಬುದನ್ನು ಮರೆಯದಿರಿ. ಮೇಲೆ ಮೇಲಾಡುವ ಭಟ್ಟಂಗಿ ಮಾತಿನಿಂದ ಮಂತ್ರಿಗಳನ್ನೂ ಅಧಿಕಾರಿಗಳನ್ನೂ ನಂಬಬೇಡಿರಿ."

"ಅದೆಲ್ಲಾ ಸರಿ ಕಾಮಿನಿ. ನಂಬದಿದ್ದರೆ ಹೇಗೆ? ಯಾರನ್ನಾದರೂ ನಂಬಬೇಕಲ್ಲವೆ?"

"ಒಪ್ಪಿದೆ ಸ್ವಾಮಿ, ಒರೆಗೆ ಹಚ್ಚಿ ನಂಬಿಕೆ ಯನ್ನು ಗಟ್ಟಿಮಾಡಿಕೊಳ್ಳಿರೆಂದು ನನ್ನ ವಿಜ್ಞಾಪನೆ."

"ವಿಜ್ಞಾಪನೆಯೇಕೆ? ಆಜ್ಞಾಪನೆ ಎಂದು ತಿಳಿ ಯುವೆ. ಇನ್ನೇನಾದರೂ ಹೇಳುವದಿದೆಯೆ?"

"ನೀವು ಹೀಗೆ ತಮಾಷೆ ಮಾಡಿದರೆ ನಾನು ಹೇಗೆ ಹೇಳಲಿ?"

"ಸುಮ್ಮನೆ ಸ್ವಲ್ಪ ನಗೆಯಾಡಿದೆ. ನೀನು ನನ್ನ ಜೀವಸಖಿ, ನಲ್ಮೆಯ ನಲ್ಲೆ. ಹೇಳು ವುದನ್ನು ಹೇಳು. ನನಗೆ ಒಳ್ಳೆಯದಾಗಲೆಂದೇ ನೀನು ಹೇಳುವಿ ನನಗೆ ಗೊತ್ತು."

"ನಿಮ್ಮ ಕಲಾತಿಶಯವನ್ನು ಅರಿತು ಮೆಚ್ಚುವ ಆಳಿಕೆಯಲ್ಲಿ ಜಾಣತನದಿಂದ ನೆರವಾಗುವ ಸಹೃದಯ ಮಿತ್ರನೊಬ್ಬನು ನಿಮಗೆ ಬೇಕೆಂದು ತೋರುತ್ತದೆ."

"ಇದ್ದರೆ ಒಳ್ಳೆಯದು ಅಂಥ ಅಪರೂಪದ ಮಿತ್ರ ದೊರೆತರೆ ನಾನು ನನ್ನ ಸುಖಶೋಧನೆ ಯಲ್ಲಿ, ಕಲಾರಾಧನೆಯಲ್ಲಿ ತಲ್ಲೀನನಾಗಬಲ್ಲೆ. ಇಷ್ಟಿಷ್ಟು ಅವನು ಆಡಳಿತದಲ್ಲಿ ನನಗೆ ಸರಿಯಾದ ಸಲಹೆ ಕೊಟ್ಟು, ಪ್ರಸಂಗ ಬಂದರೆ ಅದರ ಭಾರವನ್ನು ತಾನೇ ಹೊತ್ತು, ನನ್ನ ಸಾಹಿತ್ಯ ಸಂಗೀತದೊಡನೆ ಸಮರಸವಾಗಿ ನನ್ನ ಕಲ್ಪನೆ ಗಳಿಗೆ ಶಿಲ್ಪದ ಆಕಾರ ಕೊಡುವ ವ್ಯಕ್ತಿ ಆಗ ಬೇಕು. ಹಾಗೆ ಯಾರಾದರೂ ಇದ್ದಾರೆಯೆ?"

"ಪ್ರಯತ್ನ ಮಾಡಿ ನೋಡುವೆ."

"ಅದೇನು ಯೋಚಿಸುತ್ತಿರುವಿ ಕಾಮಿನಿ?" ದೊರೆ ಕೇಳಿದನು.

"ಬೇರೇನು? — ಇನಿಯನಲ್ಲಿ ಎಲ್ಲವನ್ನೂ ಮುಡುಪಾಗಿಸಿದವಳಿಗೆ."

ದೊರೆ ಮೆಚ್ಚಿ ಅವಳ ಕೆನ್ನೆಯನ್ನು ತಟ್ಟಿದನು, ಮುತ್ತಿಟ್ಟನು.

ಇರುಳಿನ ಉಳಿದ ಸಮಯವನ್ನು ಅವರಿಬ್ಬರೂ ಮೈಮನಗಳು ಒಂದಾಗಿ ಕಳೆದರು. ಸುಖದ ಸಾರವೆಲ್ಲ ಲಭಿಸಿದಂತೆ ತಣಿವು ತಬ್ಬಿ ಮಾತು ಮೀರಿದ ಸ್ವರ್ಗಕ್ಕೆ ಕರೆದೊಯ್ದಿತ್ತು.

*

ಒಂದು ಚೆಲುವಾದ ಸಂಜೆ ಅರಮನೆಯ ಹರವಾದ ನಾಟ್ಯಗೃಹದಲ್ಲಿ ಉತ್ಕಲ ದೇಶದಿಂದ ಬಂದ ಪ್ರಖ್ಯಾತ ನರ್ತಕಿಯರ ನರ್ತನವನ್ನು ಏರ್ಪಡಿಸಲಾಗಿತ್ತು. ಅಲಂಕೃತರಾದ ನರ್ತಕಿಯರು ಒಬ್ಬೊಬ್ಬರಾಗಿ ಜತೆ ಜತೆಯಾಗಿ ಗಾಯನ ವಾದನಕಾರರ ಹಿಮ್ಮೇಳಕ್ಕೆ ಸರಿಯಾಗಿ ಮೈ ಕೈಕಾಲುಗಳ ವಿಧ ವಿಧ ಭಂಗಿಗಳಿಂದ ಲಯಬದ್ಧವಾಗಿ ಸ್ಪಂದಿಸುತ್ತ ನರ್ತಿಸುತ್ತಿದ್ದರು. ಅದನ್ನು ನೋಡುತ್ತ ಕೇಳುತ್ತ ದೊರೆ ಮುಂತಾಗಿ ಎಲ್ಲರೂ ಹೊರಗಿನ ಪ್ರಪಂಚವನ್ನು ಮರೆತು ನಲಿಯುತ್ತಿದ್ದರು. ಅಪರೂಪವಾಗಿ ದೊರೆಯ ತಾಯಿ ನಂದಿನೀದೇವಿ ಅಲ್ಲಿಗೆ ಬಂದಿದ್ದಳು. ಕಾಮಿನಿ ಮತ್ತು ಅವಳ ಕೆಳದಿಯರ ಪರಿವಾರವೆಲ್ಲ ಇತ್ತು. ಮೊದಲಿಗೆ ಧಾರಿಣಿ ಬಂದಿರಲಿಲ್ಲ. ನಂದಿನಿ ಬಂದಮೇಲೆ ಹಿರಿ ಸೊಸೆಯನ್ನು ಕಾಣದೆ ಕರೆಕಳಿಸಿದಳು. ಅವಸರವಸರವಲ್ಲಿ ಅಲಂಕಾರ ಮಾಡಿಕೊಂಡು ಅತ್ತೆಯವರ ಮನಸ್ಸನ್ನು ನೋಯಿಸಬಾರದೆಂದು ಕಾಲೆಳೆಯುತ್ತ ಅವರ ಪಕ್ಕದಲ್ಲಿ ಆಕೆ ಕುಳಿತುಕೊಂಡಳು.

ಅಗ್ನಿವರ್ಣನೂ ಪ್ರತಿಭಾವಂತನಾದ ಕುಲ ರಸಿಕನಾಗಿದ್ದ ಕಾರಣ ಮತ್ತು ಸಂಗೀತ ಹಾಗೂ ನಾಟ್ಯಶಾಸ್ತ್ರಗಳನ್ನು ಅರಿತವನಾದ ಕಾರಣ ನೃತ್ಯವನ್ನು ಬಹುವಾಗಿ ಕೊಂಡಾಡಿ ನರ್ತಕಿಯರ ತಂಡವನ್ನು ಸೂಕ್ತವಾಗಿ ಸತ್ಕರಿಸಿ ಬೀಳ್ಕೊಟ್ಟನು.

ಎಂದಿನಂತೆ ಧಾರಿಣಿ–ಕಾಮಿನಿಯರ ಜೊತೆ ರಾತ್ರಿ ಭೋಜನವಾಯಿತು. ಉಪಚಾರಕ್ಕೆ ಕೆಲವು ಮಾತುಗಳಾದವು. ಅದರಲ್ಲಿ ಆ ನರ್ತನದ ಮೆಚ್ಚಿಕೆಯೂ ಇತ್ತು. ಅದು ಒಮ್ಮತದ ವಿಷಯ. ಅವರವರ ಮಂದಿರಗಳಿಗೆ ಅವರು ಹೋದರು. ಅಗ್ನಿವರ್ಣನು ತನ್ನ ಮಂದಿರಕ್ಕೆ ಹೋಗಿ ಕೆಲ ಕಾಲ ವೀಣೆಯನ್ನು ನುಡಿಸಿದನು. ಮೃದಂಗವನ್ನು ಬಾರಿಸಿದನು. ಆ ಸ್ವರ, ಆ ಲಯ ಅವನ ಮನವನ್ನು ಅರಳಿಸಿತು, ಎತ್ತರಿಸಿತು. ಕಾಮಿನಿಯ ಸಜ್ಜೆವನೆಯತ್ತ ಸೆಳೆಯುತ್ತಿರುವ ಕಾಲುಗಳನ್ನು ಹೊಡೆ ಮರಳಿಸಿ ಧಾರಿಣಿಯ ಮಂದಿರದೆಡೆಗೆ ಒಂದು ಹೊಸ ನಿರ್ಧಾರದಿಂದ ಹೋದನು. ದಾಸಿಯೊಬ್ಬಳು ಓಡೋಡುತ್ತ ಮಹಾರಾಣಿಯನ್ನು ಮುನ್ನರಿಕೆ ಕೊಟ್ಟಳು.

"ಮರೆತು ಬಂದಿರೇನೋ!"

"ಹೌದು, ಮರೆತು ಬಂದಿದ್ದೇನೆ, ಹಿಂದಿನದನ್ನೆಲ್ಲ."

"ಹೀಗೋ? ಒಳಗೆ ಬನ್ನಿ ಕುಳಿತುಕೊಳ್ಳಿ." ಅವಳು ಸೌಜನ್ಯದಿಂದ ಕರೆದಳು. ಅವಳು ಮುಂದೆ, ಅವನು ಹಿಂದೆ–ಹೀಗೆ ಮೆಲ್ಲಗೆ ಒಳಗೆ ನಡೆದರು. ಇಬ್ಬರೂ ಇದಿರು ಬದಿರಾಗಿ ಪ್ರತ್ಯೇಕವಾದ ಆಸನಗಳಲ್ಲಿ ಕುಳಿತುಕೊಂಡರು. ದೊರೆ ಸುತ್ತೆಲ್ಲ ಕಣ್ಣು ಹಾಯಿಸಿದನು. ಆರಾಸು–ಅಲಂಕಾರ ಯಾವುದು ಇರದೆ ಸರಳತೆ ಬೀಡು ಬಿಟ್ಟಂತೆ ಆಗಿತ್ತು.

"ನನ್ನ ಮೇಲೆ ಕೋಪ ಬಂದಿರಬೇಕಲ್ಲವೇ? ನಾನು ಆ ರಾತ್ರಿ ಹಾಗೆ ಮಾಡಬಾರದಾಗಿತ್ತು."

"ಮಾಡಿದ ಮೇಲೆ ಹೀಗಾಡುವುದು ಗಂಡಂದಿರ ರೀತಿ."

"ಅರ್ಥವಾಯಿತು ಧಾರಿಣಿ. ಆದದ್ದಾಯಿತು, ಇನ್ನು ಮೊದಲಿನಂತೆ ಇರೋಣ."

ದೊರೆ ಎದ್ದು ಧಾರಿಣಿಯ ಕೈ ಹಿಡಿದು ಒಲುಮೆಯಿಂದ ಎಬ್ಬಿಸಿ ಮಂಚದ ಮೇಲೆ ಕೂರಿಸಿದನು. ತಾನೇ ಮೈರೇಯದ ಪಾತ್ರೆಯನ್ನು ತಂದು ಎರಡೂ ಪೇಲೆಗಳಲ್ಲಿ ಸುರುವಿ ಒಂದನ್ನು ಅವಳಿಗೆ ಕೊಟ್ಟು ಇನ್ನೊಂದನ್ನು ತಾನು ಹಿಡಿದು ಅವಳ ಮೈಗೆ ಮೈತಗುಲಿಸಿ ಕುಳಿತು "ತಗೋ ಮನದನ್ನೆ–ಪ್ರಕೃತಿಯಲ್ಲಿ ಕಣ್ದೆರೆವ ಹೊಸ ವಸಂತ ನಮ್ಮ ಬಾಳಿನಲ್ಲಿಯೂ ಬರಲಿ."

ಇಬ್ಬರೂ ಸಜ್ಜೆವನೆಗೆ ಹೋಗಿ ಮಂಚದ ಮೇಲೆ ಮಲಗಿಕೊಂಡರು. ಮೈಮನಗಳು ಹತ್ತಿರವಾಗಿದ್ದವು. ಹಿಂದಿನ ಸಿಡಿಮಿಡಿ

ದೂರವಾಗಿತ್ತು. "ಅಂದಿನಂತೆ ನಾನಿಂದು ನಿನ್ನ ಬಿಟ್ಟು ಹೋಗುವದಿಲ್ಲ ಪ್ರಿಯೆ," ಎನ್ನುತ್ತ ಅರಸನು ಅವಳನ್ನು ತನ್ನ ತೋಳ ಸೆರೆಯಲ್ಲಿ ತೆಗೆದುಕೊಂಡನು. ಧಾರಿಣಿ ಮೆಲು ನಗೆ ನಕ್ಕಳು. ಇಬ್ಬರೂ ಹರುಷದ ತುದಿಯನ್ನೇರಿ ಹಾಲು ಸಕ್ಕರೆಯಂತೆ ಬೆರೆತು ಒಂದಾದರು.

ಆಶ್ವೀನ ಮಾಸ ಶುದ್ಧ ನವಮಿಯಂದು ಅಯೋಧ್ಯೆ ಎಲ್ಲ ಕಡೆಗಳಲ್ಲಿ ಸುಗ್ಗಿಯ ಹಬ್ಬದ ಸಡಗರ. ಇನ್ನು ಅರಮನೆಯಲ್ಲಿ ಕೇಳಬೇಕೇ, ಇನ್ನೂ ಮಿಗಿಲಾದ ಹಬ್ಬದ ಐಸಿರಿ.

ಓಲಗದ ವಿಶಾಲ ಮಂಟಪದಲ್ಲಿ ಅಂದಿನಿಂದ ದೊಡ್ಡ ಸಂಗೀತ ನೃತ್ಯಗಳ ಮಹೋತ್ಸವವು ಮೊದಲಾಯಿತು. ಅಗ್ನಿವರ್ಣನು ಇಕ್ಕೆಡೆಗಳಲ್ಲಿ ಧಾರಿಣಿ-ಕಾಮಿನಿಯರನ್ನು ಕೂರಿಸಿಕೊಂಡು ಅಮಾತ್ಯ ಮಂಡಲಿಯ ಎಲ್ಲ ಸದಸ್ಯರೂ ಅಧಿಕಾರಿಗಳೂ ಮುಂದಿನ ಆಸನಗಳಲ್ಲಿ ಕುಳಿ-ತಿರಲು ಪ್ರಜೆಗಳ ಸಂಮುಖದಲ್ಲಿ ಬೇರೆ ಬೇರೆ ದೇಶಗಳಿಂದ ಬಂದ ನರ್ತಕ ನರ್ತಕಿಯರ ನೃತ್ಯಗಳನ್ನು ನೋಡಿ ನಲಿಯುತ್ತಿದ್ದರು. ನೃತ್ಯಗಳಾದ ಮೇಲೆ ಪ್ರಸಿದ್ಧ ಗಾಯಕ ಗಾಯ ನವೂ ನಡೆಯಿತು. ಹೀಗೆ ಬಗೆ ಬಗೆಯ ಆಟ ಪಾಟಗಳಿಂದ, ಮೇಲಾಟಗಳಿಂದ ಸವಿದನಿಯ ಪಾಟಗಳಿಂದ, ರುಚಿ ರುಚಿಯಾದ ಊಟಗಳಿಂದ ಹುಮ್ಮಸಿನಿಂದ ಹಬ್ಬವು ಏಳುದಿನ ನಡೆಯಿತು.

ವಿಭಿನ್ನ ಮೇಳದೊಂದಿಗೆ ಅವನು ಮಧ್ಯಾಹ್ನದ ಭೋಜನಕ್ಕಾಗಿ ಕಾಮಿನಿಯ ಮಂದಿರಕ್ಕೆ ಹೋದನು. ಭೋಜನವಾಯಿತು. ತಾಂಬೂಲ ಸೇವನೆಯಾಯಿತು. ಅನ್ನಸೊಕ್ಕಿನ ನಿದ್ದೆಯೂ ಆಯಿತು. ಇದೇ ಯೋಗ್ಯ ಸಮಯವೆಂದು ಅರಿತು ಒಂದೆರಡು ದಿನದ ಹಿಂದೆ ಬಂದ ಅತಿಥಿ-ಯನ್ನು ಕರೆಯಲು ಕಂಚುಕಿಗೆ ಸೂಚನೆ ಯಿತ್ತಳು.

"ನಾನು ಅಂದು ನಿಮಗೆ ಮಾತು ಕೊಟ್ಟಿ-ದ್ದೆನಲ್ಲ ಅಂಥ ವ್ಯಕ್ತಿಯನ್ನು ಕರೆಯಿಸಿದ್ದೇನೆ" ಎಂದು ಕಾಮಿನಿ ನುಡಿದಳು.

"ಹೀಗೋ? ಇಲ್ಲಿಗೇ ಬರಹೇಳು. ಪರಿಚಯ ಮಾಡಿಕೊಳ್ಳೋಣ. ಅದರಿಂದ ನನ್ನ ಅರ್ಧ ಭಾರವನ್ನಾದರೂ ಹಗುರುವಾದೀತು."

"ಅರ್ಧವೇಕೆ? ನೀವು ಒಪ್ಪಿದರೆ ಎಲ್ಲ ಭಾರ ವನ್ನು ಅವರು ಹೊತ್ತುಕೊಂಡು ನಿಮ್ಮನ್ನು ನಿಮ್ಮ ಸರ್ವಸುಖದ ಶೋಧನೆಗೆ, ಸಂಗೀತ ಸರಸ್ವತಿಯ ಆರಾಧನೆಗೆ ಬಿಟ್ಟು ಕೊಡಬಹುದು."

"ಆದಾದರೆ ಇನ್ನೂ ಸಂತೋಷ."

ಹರವಾದ ಉಬ್ಬಿದ ಹಣೆ, ಎತ್ತರವಾದ ಮಟ್ಟಸವಾದ ಆಳು, ಅಗಲವಾದ ಕಣ್ಣು, ನೀಟಾದ ಮೂಗು ಆದರೆ ನಸುಗುಪ್ಪು ಬಣ್ಣ ಇವು ಎದ್ದು ಕಾಣುವ ಈ ಹೊಸ ವ್ಯಕ್ತಿಯನ್ನು ದೊರೆ ಎವೆ ಮಿಳುಕಿಸದೆ ನೋಡುತ್ತಿರುವಾಗ ಕಾಮಿನಿ ಅವನನ್ನು ಬರಮಾಡಿಕೊಂಡು,

"ಬನ್ನಿ, ಇಲ್ಲಿ ಕುಳಿತುಕೊಳ್ಳಿ" ಎಂದು ಹತ್ತಿರದ ಪ್ರತ್ಯೇಕವಾದ ಆಸನವನ್ನು ತೋರಿಸಿ ದಳು.

ಅವನು ದೊರೆಗೂ ಮಹಾರಾಣಿಗೂ ಬಾಗಿ ನಮಸ್ಕರಿಸಿ ತೋರಿದ ಆಸನದಲ್ಲಿ ಕುಳಿತು ಕೊಂಡನು.

"ತಮ್ಮ ಹೆಸರೇನು ಕೇಳಬಹುದೆ?" ಅಗ್ನಿ ವರ್ಣ ಕೇಳಿದ.

"ನನ್ನ ಹೆಸರು...ಕು...ಕುಶಾಗ್ರಮತಿ ಎಂದು ಹೇಳುತ್ತಾರೆ. ಕುಶಾಗ್ರ ಎಂದೇ ಕರೆಯಬಹುದು.

"ಓಹೋ! ಕುಶಾಗ್ರಮತಿ! ಬಹಳ ಅರ್ಥ ಪೂರ್ಣವಾದ ಹೆಸರು. ಯಾವ ದೇಶದಿಂದ ಬಂದಿರುವಿರಿ?"

"ಮೂಲತಃ ವಂಗ ದೇಶವನ್ನು, ಅಲ್ಲಿಂದ ಹೊರಟು ನಾನು ಅದೆಷ್ಟೋ ದೇಶಗಳಲ್ಲಿ ಅಲೆ-ದಿದ್ದೇನೆ. ಅಲೆಮಾರಿತನ ನನ್ನ ಹುಟ್ಟುಗುಣ."

ಕಾಮಿನಿ ಅವನನ್ನು ಬಾಯಿ ತುಂಬ ಹೊಗಳಿದಳು. "ದೊರೆಗಳೆ, ಇವರು ತುಂಬ ಮೇಧಾವಿಗಳು, ನಿಮ್ಮ ವಯಸ್ಸಿನ ತರುಣ-ರಾದರೂ ರಾಜ್ಯದ ಆಡಳಿತದಲ್ಲಿ ತಲೆದೋರುವ ಜಟಿಲ ಪ್ರಶ್ನೆಗಳನ್ನು ಬಿಡಿಸಬಲ್ಲರು. ಯಾರು, ಹೇಗೆ, ಹೊರಗೆ, ಒಳಗೆ ಎಂಬುದನ್ನು ಕಂಡು ಹಿಡಿಯಬಲ್ಲರು. ಪ್ರಸಂಗ ಬಂದರೆ ನಿಮ್ಮ ಅನು ಮತಿಯಿಂದ ತಾವೇ ರಾಜ್ಯದ ಸೂತ್ರಗಳನ್ನು ವಹಿಸಿಕೊಂಡು ಸಮರ್ಥವಾಗಿ ನಡೆಸಿ ತೋರಿ-ಸುವರು. ಇಷ್ಟು ಮಾತ್ರವಲ್ಲ, ಇವರಿಗೆ ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ ಎಲ್ಲವರಲ್ಲಿಯೂ

ಅಭಿರುಚಿಯಿದೆ, ಗತಿಯಿದೆ ಹೆಚ್ಚೇನು. ತಮಗೆ ಆತ್ಮೀಯ ಮತ್ತು ವಿಶ್ವಸನೀಯ ಮಿತ್ರರಾಗಿ ಇವರು ನೀವು ಬಯಸಿದ ಸೇವೆಯನ್ನು ಸಲ್ಲಿಸುವರು."

"ಸಂತೋಷ. ಇಂಥ ಚಾಣಾಕ್ಷ ಪ್ರತಿಭಾವಂತ ವ್ಯಕ್ತಿಯಿರುವುದು ಅಪರೂಪ. ನಮಗೆ ಇಂಥ ಸ್ನೇಹಿತರ ನೆರವು ಬೇಕು."

ಸ್ವಲ್ಪ ದಿನಗಳಲ್ಲಿಯೇ ಕುಶಾಗ್ರನಿಗೆ ಅಗ್ನಿವರ್ಣನ ಸ್ವಭಾವ ಮತ್ತು ವ್ಯಕ್ತಿತ್ವದ ದಟ್ಟ ಪರಿಚಯವಾಯಿತು. ಆಡಳಿತದ ಆಗು ಹೋಗುಗಳು ಗೊತ್ತಾದವು. ನಾಡಿನಲ್ಲಿ ತಲೆ ಹಾಕಿದ ಬರಗಾಲ, ಪೌರ ಜನರಲ್ಲಿ ಹೊಗೆಯಾಡುವ ಅತೃಪ್ತಿ ಇವೆಲ್ಲ ಅರ್ಥಮಾಡಿಕೊಂಡನು. ವೀಣೆ, ಮೃದಂಗ ಇವುಗಳನ್ನು ನುಡಿಸುವುದರಲ್ಲಿ, ಪಂಚೇಂದ್ರಿಯ ಸೌಖ್ಯವನ್ನು ಸವಿಯುವುದರಲ್ಲಿ ಕಾಮುಕನಾಗದೆ ಸ್ತ್ರೀಸಂಗ ಲೋಲುಪನಾಗಿರುವದರಲ್ಲಿ ಅರಸನ ಅಭಿರುಚಿ-ನಿಪುಣತೆಗಳು ವ್ಯಕ್ತವಾಗುವದರ ಜೊತೆಗೆ ವಂಶ ಪರಂಪರೆಯ ಹಳೆಯ ಸಂಸ್ಕಾರಗಳು ಅವನ ಮನಸ್ಸಿನ ಮೇಲೆ ತೆರೆ ತೆರೆಯಾಗಿ ಅಪ್ಪಳಿಸುತ್ತಿರುವುದನ್ನು ಅವನು ಚೆನ್ನಾಗಿ ಅರಿತನು.

ಹೀಗೆ ಹಲವಾರು ದಿನಗಳ ಹೊಕ್ಕು ಬಳಕೆಯಿಂದ ಸ್ನೇಹ ಸಲಿಗೆಗಳು ಬೆಳೆದ ಮೇಲೆ, ಒಂದು ದಿನ ಅಗ್ನಿವರ್ಣನು ಕುಶಾಗ್ರನೊಬ್ಬನನ್ನು ಜೊತೆಗೆ ಕೂರಿಸಿಕೊಂಡು ತನ್ನ ವೀಣೆಯನ್ನು ನುಡಿಸುತ್ತ ಬೆರಳಿನ ನರಗಳ ಅರಮನೆಯಿಂದ ಮಿಡಿತಹೊಂದಿ ಮಿಂಚು ವೇಗದಿಂದ ಸಮ್ಮಿಳಿತ ಸ್ವರ ನಾರಿಯರು ಬಂದು ಗುಂಪಾಗಿ ಕುಣಿದು ಹೋಗುವರೆಂಬ ಭಾಸವನ್ನು ನಿರ್ಮಿಸಿದನು. ಇಬ್ಬರೂ ಸುತ್ತಲಿನ ಪ್ರಪಂಚವನ್ನು ಆದರ ಕಷ್ಟಕಾರ್ಪಣ್ಯಗಳನ್ನು ಮರೆತು ಕಲ್ಪನಾರಮ್ಯ ಲೋಕದಲ್ಲಿ ವಿಹರಿಸುತ್ತ ನಿಂತರು. ಕುಶಾಗ್ರನಂತೂ ಅಗ್ನಿವರ್ಣನ ವೀಣಾವಾದನ ಕೌಶಲಕ್ಕೆ ಬೆಕ್ಕಸ ಬೆರಗಾದನು. ಈ ಹೊತ್ತಿಗೆ ಸಂಜೆಯಾಯಿತು. ಅರಮನೆಯ ಗವಾಕ್ಷದೊಳಗಿಂದ ಸಂಜೆಯ ಹೊಂಬಣ್ಣದ ಲೇಪದಲ್ಲಿ ಅಪೂರ್ವ ಸುಂದರ ಮತ್ತು ಭವ್ಯ ಆಕಾರ ತಾಳಿದ ಮೋಡದ ಕರು ಮಾಡಗಳು ಹೊಳೆಹೊಳೆಯುತ್ತ ಕಂಡವು, ಕಂಡಂತೆ ಬದಲಾಗಿ ಬೇರೆ ಬೇರೆ ಆಕಾರ ತಳೆಯುತ್ತಿದ್ದವು. ಅದನ್ನು ನೋಡುತ್ತಿರುವಂತೆ ವೀಣೆಯನ್ನು ಬದಿಗಿರಿಸಿ ಅಗ್ನಿವರ್ಣನು ಹೇಳಿದನು: "ಕುಶಾಗ್ರ, ಈ ಚಿತ್ರಗಳನ್ನು ನಿನ್ನ ಕಣ್ಣಿನಲ್ಲಿ ಕೊರೆದುಕೋ. ಇಂಥ ಒಂದು ಭವ್ಯ ಸ್ಮಾರಕ ಭವನವನ್ನು ಕಟ್ಟಿಸಿ, ಅದರಲ್ಲಿ ನಮ್ಮ ಪೂರ್ವಜರ ಉದಾತ್ತ ಚರಿತೆಯನ್ನು ಎತ್ತಿ ತೋರಿಸುವ ಚಿತ್ರಮಾಲಿಕೆಗಳನ್ನು ಬರೆಯಿಸಿ ಅವರ ಅಮೃತ ಶಿಲಾಮೂರ್ತಿಗಳನ್ನು ಕಂಡರಿಸಿ ಈ ಕಾಲದ ನಮಗೆ ಹಾಗೂ ಮುಂದಿನ ಪೀಳಿಗೆಯ ನಮ್ಮ ಜನಕ್ಕೆ ಚಿರಂತನ ಸ್ಫೂರ್ತಿಯನ್ನು ಬೀರುವಂತೆ ಮಾಡಬೇಕು. ಈ ನನ್ನ ಹಿರಿಗನಸನ್ನು ನೀನು ನನಸಿನ ನೆಲೆಗೆ ತರುವಿಯಾ?"

"ತರಲು ಯತ್ನಿಸುವೆ, ದೊರೆಗಳೇ, ನನಗೂ ಇದು ಪ್ರಿಯವಾದ ವಿಷಯ." ಎಂದು ಕುಶಾಗ್ರನು ಕೂಡಲೆ ಮಾರ್ನುಡಿಯುತ್ತ ಮುಂದು




"ಒಳ್ಳೆ ಸುದ್ದಿ ತಂದ ಬಗ್ಗೆ ನನ್ನ ಬಾಯಲ್ಲಿ ಸಕ್ರೆ ಬೀಳಲಿ ಅಂದ್ರಾ,-ಬೀಳಲಿ-ಬೀಳಲಿ ಅದರೆ ನಿಮ್ಮಂಗಡಿದು ಬೇಡಾ ಶೆಟ್ರೆ-ಎಲ್ಲಾ ಕಲಬೆರಕೆಯದು."

ಮರಿದನು. "ಆದರೆ ಒಂದು ಮಾತು, ಇವೆಲ್ಲ ಕ್ಷಣಿಕ. ಇಂಥ ಸ್ಮಾರಕಗಳು ಒಮ್ಮೊಮ್ಮೆ ಮಾರಕಗಳಾಗಬಹುದು.

**ಚಣಚಣಕೆ ಕರಗುತಿಹ ಕರುಮಾಡದಲಿ ನಾವು**
**ಇರುತಿಹೆವು ಅರಿಯದಲೆ ಬಳಿಸಾರುತಿರೆ ಸಾವು"**

"ಓಹೋ! ಕುಶಾಗ್ರ. ನಿನ್ನ ಪದ್ಯದ ಮರ್ಮ ತಿಳಿಯಿತು. ಆದರೆ ಕಲೆಯು ಮೋಡಿ ಸಾವನ್ನು ಸುಳ್ಳಾಗಿಸುತ್ತದೆಯಲ್ಲವೆ? ಮೊದಲು ನೀನು ಈ ಸ್ಮಾರಕಭವನದ ಒಳ ಹೊರಗಿನ ಆಕೃತಿಯ ಹೊಳಹು ಹಾಕಿ ನನ್ನ ಒಪ್ಪಿಗೆ ಪಡೆದು ರಾಜ್ಯದ ಶ್ರೇಷ್ಠ ಸ್ಥಪತಿಗಳಿಂದ ವಿವರವಾದ ನಕ್ಷೆಗಳನ್ನು ಮಾಡಿಸಿ ಕಟ್ಟಡಕ್ಕಾಗಿ ಅಮೃತಶಿಲೆ ಮುಂತಾದ ಸಾಮಗ್ರಿಗಳನ್ನು ಸಂಗ್ರಹಿಸಿ ಉತ್ತಮ ಶಿಲೆಗಳಿಂದ ಕೆಲಸವನ್ನು ಪ್ರಾರಂಭಿಸು. ಆದಷ್ಟು ಬೇಗ ಈ ಭವ್ಯ ಭವನವು ಬಾನಿಗೆ ಮುತ್ತಿಡುವಂತೆ ಎದ್ದು ನಿಲ್ಲಬೇಕು ತಿಳಿಯಿತೆ?" "ತಿಳಿಯಿತು ದೊರೆ. ನನಗೆ ತಿಳಿದಿರುವಷ್ಟು ಯತ್ನ ಮಾಡುವೆ. ತಿಳಿದಿರುವ ಸಾಸುವೆಯ ಮುಂದೆ ತಿಳಿದಿಯರುವ ಸಾಗರವಿರುವದೆಂಬುದನ್ನು ನಾವೆಲ್ಲ ತಿಳಿದಿರಬೇಕಲ್ಲವೆ?"

"ಕುಶಾಗ್ರ ಇದು ನಿನ್ನ ವಿನಯದ ಮಾತು. ದಿಟವಾಗಿ ನಮಗೆ ತಿಳಿದಿರುವದೆಲ್ಲ ನಮ್ಮ ಪಾಲಿಗೆ ಸಾಗರವೇ. ಯಾರಿಗದು ಸಾಸುವೆಯೋ ನಾನರಿಯೆ. ನಮಗೆ ಈ ಅದ್ಭುತವಾದ ಮೈಯಲ್ಲಿ ಕಣ್ಣಿದೆ, ಕಿವಿಯಿದೆ, ಮೂಗಿದೆ, ನಾಲಿಗೆಯಿದ ತೊಗಲಿದೆ — ಇವನ್ನೆಲ್ಲ ಚುರುಕುಗೊಳಿಸು ಮನಸ್ಸಿಗೆ, ಇವುಗಳಿಗೆ ಬರುವ ಅನುಭವವೆ ನಮ್ಮ ದಿಟದ ತಿಳುವಳಿಕೆಯಲ್ಲವೆ? ಹಾಗಾದ ನಾವು ತಿಳಿಯದ್ದು ಯಾವದು? ತಿಳಿಯದು ಎಂದು ತಿಳಿಯುವುದು ಹೇಗೆ?" "ಓಹೋ ರಾ ಮಿತ್ರರೇ ಬೀಜ ಮಾತನ್ನೇ ಆಡಿದಿರಿ. ಆದ ದಿಟವೆಂಬುದು ಅಷ್ಟು ಸುಲಭವೇ? ಅದೆಷ್ಟು ಪರಿಗಳಲ್ಲಿ ಅಡಗಿರುವುದೋ ಏನೋ! ಎಲ್ಲ ಕಣ್ಣಿಗೆ ಅಷ್ಟೇ ಕಾಣುವುದೆ? ಎಲ್ಲರ ಕಿವಿಗೆ ಅಷ್ಟೆ ಕೇಳುವುದೆ? ಎಲ್ಲರ ಮನಸ್ಸಿಗೆ ಅಷ್ಟೇ ತಿಳಿಯುವುದೇ? ಈ ಪ್ರಶ್ನೆಗಳಿಗೆ ಉತ್ತರ ಪಡೆಯುತ್ತ ಹೋದಂತೆ ದಿಟವೆಂಬುದರ ಗೂಢತೆಗಳ ನಮ್ಮನ್ನು ಕಾಡತೊಡಗುತ್ತವೆ.

**ಲೆಕ್ಕವಿಲ್ಲದ ಚಿಕ್ಕೆಗಳ ಹೆಣಿಕೆ ಹಾಕಿರುವ**
**ಕಾಲದಾ ಭರ್ಜರಿಯ ಬಟ್ಟೆಯನು ತೊಟ್ಟು**
**ನಿತ್ಯವಹ ನಿಗೂಢತೆ ನೆಲೆಯಾಗಿ ನಿಂತಿಹುದ**
**ಏನು ತಾ ಮಾಡುವದೋ ಕೆಡಿಸುವದೋ**
**ಬಲ್ಲವರಾರು?"**

"ಓಹೋ! ಕುಶಾಗ್ರ ಕವಿಯ ಗೂಢ ವಾಣಿಯಿದು. ಈ ಗಾಢ ಗೂಢ ನಾನರಿಯೆ, ಈಗಂತೂ ಕಂಡದ್ದು ಮಾತ್ರ ದಿಟ, ಉಂಡದ್ದು ಮಾತ್ರ ಸುಖ ಎಂದು ನಾನು ತಿಳಿದು ಹೊರಟಿದ್ದೇನೆ."

(ಮುಂದಿನ ಸಂಚಿಕೆ ನೋಡಿ



Edited, printed & published by M. N. Mahishi on behalf of the Receiver (Moveables), Loka Shikshana Trust, Samyukta Karnataka Press, Koppikar Road, Hubli-580 020, Phoue : 64307. Rept : Bombay: V. Satyamurthy Phone: 5510502, Calcutta : H. Majumdar Phone : 46-42331 Madras : K. A. Subramanian Phone : 842201; New Delhi : V. K. Chopra Phone : 7114785.

*Registered with the Registrar of Newspapers for India under No: 3530/57*




ಅಮೂಲ್ಯ ಬಾಲ್ಯದ ಸ್ವಚ್ಛಂದತೆ. ಉತ್ಸಾಹ. ಹುರುಪು. ಕುತೂಹಲ. ವಿನೋದ. ಉಲ್ಲಾಸಗಳಿಗೆ ಮಿತಿಯಿಲ್ಲದ ಸಮಯ. ಎಲ್ಲವನ್ನೂ ಪ್ರಯೋಗಿಸಬೇಕು. ಕಲಿಯಬೇಕು. ಅನುಭವ ಪಡೆಯಬೇಕೆಂಬ ಹಂಬಲ.

ಅದೊಂದು ಸುಂದರ ಸಮಯ. ಬಂಧನಗಳಿಲ್ಲದ ಕಾಲ. ಅದು ಜೀವನದ ಪ್ರಕೃತಿ-ಗುಣಮಟ್ಟ, ಮಧುರ ಮತ್ತು ಮಹತ್ತರ ನೆನಪಿನ ಭಂಡಾರ. ಆರೋಗ್ಯಕರ. ಪುಷ್ಟಿಯ ವಿಚಾರದೊಂದಿಗೆ ಆನಂದದ ವಿಕಾಸ–ಬಿಸ್ಕತ್ತಿನಂತೆ.

ಕ್ವಾಲಿಟಿ ಗ್ಲೂಕೋಸ್ ಆರೋಗ್ಯ ಮತ್ತು ಪುಷ್ಟಿಗಾಗಿ ಅತ್ಯುತ್ತಮ ಸಾಮಗ್ರಿಗಳಿಂದ ಕೂಡಿದೆ. ಶುಚಿಯಾದ ತಯಾರಿಕೆ.

ಕ್ವಾಲಿಟಿ–ಜೀವನದ ಅಭಿರುಚಿ.

**ಕ್ವಾಲಿಟೀಸ್ ಗ್ಲೂಕೋಸ್**

ಕ್ವಾಲಿಟಿ–ಶ್ರೇಷ್ಠ ಬಿಸ್ಕತ್ ತಯಾರಕರು.




ಕ್ವಾಲಿಟಿ
ಬಿಸ್ಕಟ್ಸ್ ಪ್ರೈ. ಲಿ.
ಬೆಂಗಳೂರು-560 039